ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 106

ವಿಚಾರ ಸಾಹಿತ್ಯ

# ಹಳಕಟ್ಟಿ ನುಡಿಪುರುಷ

ಸಂಪಾದಕರು ಶಾಂತರಸ




ಕರ್ನಾಟಕ ಸರ್ಕಾರ 1983

# ಹಳಕಟ್ಟಿ ನುಡಿಪುರುಷ

ಸಂಪಾದಕರು :

**ಶಾಂತರಸ**

ಸಾಹಿತ್ಯ ಅಕಾದೆಮಿಯ
ಗ್ರಂಥಾಲಯಕ್ಕೆ ಕೊಡುಗೆ
೧೮೯೫-೭.ಮಾರ್ಚ್




ವಿಶ್ವ ಕನ್ನಡ ಸಮ್ಮೇಳನ
೧೪-೩ಎ, ನೃಪತುಂಗ ರಸ್ತೆ, ಬೆಂಗಳೂರು ೫೬೦ ೦೦೨

HALAKATTI NUDIPARUSHA Edited by Shantaras published by K. Jayacharya, K.A.S. Additional Director, Directorate of Kannada and Culture (Vishwa Kannada Sammelana) 14/3A, Nrupatunga Road, Bangalore – 2

Pages 320 + XVI, 1983 – 5000 copies

( ಎಲ್ಲ ಹಕ್ಕುಗಳು ಕಾಯ್ದಿರಿಸಲಾಗಿದೆ )

ಪ್ರಥಮ ಮುದ್ರಣ

ಬೆಲೆ : ರೂ. ೩-೫೦

ಮುದ್ರಕರು

ಜನತಾ ಪ್ರಿಂಟರಿ ಅರಬ್ ಮೊಹಲ್ಲಾ, ರಾಯಚೂರು.



ಫ. ಗು. ಹಳಕಟ್ಟಿಯವರು

ಆರ್. ಗುಂಡೂರಾವ್
ಮುಖ್ಯಮಂತ್ರಿ




ವಿಧಾನ ಸೌಧ
ಬೆಂಗಳೂರು
ದಿನಾಂಕ ೧೯-೯-೧೯೮೨

## ಸಂಕಲ್ಪ.... ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು, ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆ ಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ

ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ ನಾಟಕ, ವಿಚಾರ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲೀಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯು ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ಆರ್. ಗುಂಡೂರಾವ್

ಮುಖ್ಯಮಂತ್ರಿಗಳು

# ಪ ರಿ ವಿ ಡಿ

## ಶರಣರ ಜೀವನ-ದರ್ಶನ



## ಸಂಕೀರ್ಣ



* * *

## ಸಂಪಾದಕನ ಮಾತು

ವಿಶ್ವಕನ್ನಡ ಸಮ್ಮೇಳನದ ಸಾಹಿತ್ಯ ಸಮಿತಿಯವರು ಹಳಕಟ್ಟಿಯವರ ಲೇಖನಗಳ ಒಂದು ಸಂಗ್ರಹವನ್ನು ಮಾಡಿಕೊಡಲು ಕೇಳಿದಾಗ ಸಂತೋಷವೆನಿಸಿತು. ಆದರೆ ಕೆಲಸಕ್ಕೆ ತೊಡಗಿದಾಗ ಇದು ಬಹು ಕಷ್ಟಕರವಾದುದು ಎನಿಸಿತು. ಅವರ ಲೇಖನಗಳ ಒಂದು ಪ್ರಾತಿನಿಧಿಕ ಸಂಕಲನ ಮಾಡಿಕೊಡುವ ಇಚ್ಛೆ ಈಡೇರಲಿಲ್ಲ. ಇದಕ್ಕೆ ಮುಖ್ಯಕಾರಣ: ಹಳಕಟ್ಟಿಯವರ ಸಮಗ್ರ ಸಾಹಿತ್ಯ ನನಗೆ ಅವಲೋಕಿಸಲು ದೊರಕಲಿಲ್ಲ; ದೊರಕಿದ ಸಾಹಿತ್ಯ ವನ್ನು ಸಮಗ್ರವಾಗಿ ಅವಲೋಕಿಸುವ ಸಮಯವೂ ಇರಲಿಲ್ಲ. ಹೀಗಾಗಿ ನನ್ನ ಈ ಕೆಲಸ ಅರಕಳಿಯಾಗಿ ನನಗೆ ತೃಪ್ತಿಕೊಟ್ಟಿಲ್ಲವೆಂದು ಸಹೃದಯ ಓದುಗರಲ್ಲಿ ಹೇಳಿಕೊಳ್ಳದೆ ಇರಲಾರೆ.

ಹಳಕಟ್ಟಿಯವರ ಸಾಹಿತ್ಯ ವಿಪುಲವಾಗಿದೆ; ಅಷ್ಟೇ ವೈವಿಧ್ಯಪೂರ್ಣವಾಗಿದೆ. ಮೊದಲಿಗೆ ವಚನ ಸಾಹಿತ್ಯದ ಸಂಶೋಧನೆಯೇ ಅವರ ಮುಖ್ಯ ಉದ್ದೇಶ ವಾಗಿದ್ದರೂ ಬರಬರುತ್ತ ಅವರ ಬರವಣಿಗೆ ಕರ್ನಾ ಟಕದ ಸಂಸ್ಕೃತಿ, ಶಾಸನ, ಇತಿಹಾಸ, ಕಾವ್ಯ ಮುಂತಾಗಿ

ಕವಲೊಡೆದು ಕರ್ನಾಟಕದ ಶಿಕ್ಷಣ, ವಾಣಿಜ್ಯ, ಉದ್ದಿಮೆ, ಆರ್ಥಿಕಸ್ಥಿತಿ. ಗ್ರಾಮಸುಧಾರಣೆ,ಏಕೀಕರಣ ಇಂತಹ ನಾಡನ್ನು ಕಟ್ಟಿ ಹೊಸ ಹುಟ್ಟು ಕೊಡುವ ಹಲವು ವಿಷಯಗಳನ್ನೊಳಗೊಂಡು ಮುಂದುವರಿದು ಮಹಾ ನದಿಯಾಗಿ ಪ್ರವಹಿಸಿತು. ವಚನ ಶಾಸ್ತ್ರದ ಸಂಶೋಧನೆಯಷ್ಟೇ ವಾಣಿಜ್ಯ, ಏಕೀಕರಣಗಳನ್ನು ಕುರಿತ ಲೇಖನಗಳೂ ಅವರಿಗೆ ಖ್ಯಾತಿ ಕೊಟ್ಟುದನ್ನು ಅವರ ಬರವಣಿಗೆಗಳಿಂದ ನಾವು ಕಂಡುಕೊಳ್ಳಬಹುದು. ಅವರ ವೈವಿಧ್ಯಮಯವಾದ ಸಾಹಿತ್ಯದ ಪರಿಚಯವಿಲ್ಲದವರು ಅವರು ಕೇವಲ ವಚನಸಾಹಿತ್ಯಕ್ಕಷ್ಟೇ ಸೀಮಿತರಾದವರೆಂದು ಭಾವಿಸುತ್ತಾರೆ.

ಸಾಹಿತ್ಯ ಸಂಶೋಧನೆಗೆ ಶಿವಾನುಭವ ಪತ್ರಿಕೆ ಮೀಸಲಾದರೆ ಕರ್ನಾಟಕದ ಸಂಸ್ಕೃತಿ, ಶಿಕ್ಷಣ, ಆರ್ಥಿಕ, ವಾಣಿಜ್ಯ ಉದ್ದಿಮೆಗಳ ಅಭಿವೃದ್ಧಿಗೆ ಮತ್ತು ಏಕೀಕರಣ ಸಾಧನೆಗೆ ನವಕರ್ನಾಟಕ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಅದನ್ನು ಸಮರ್ಥವಾಗಿ ನಡೆಸಿದರು. ಇದರಿಂದ ಅವರಿಗೆ ಶಕ್ತಿ ಸಂಪನ್ನವಾದ, ಸಮೃದ್ಧವಾದ ಕರ್ನಾಟಕವನ್ನು ಕಟ್ಟುವ ಕಳಕಳಿ ಎಷ್ಟಿತ್ತೆಂಬುದು ಗೊತ್ತಾಗುತ್ತದೆ. ಏಕೀಕೃತವಾದ, ಸರ್ವದೃಷ್ಟಿಯಿಂದ ಮುನ್ನಡೆದ ಇಂದಿನ ಕರ್ನಾಟಕ ರೂಪುಗೊಳ್ಳುವಲ್ಲಿ ಹಳಕಟ್ಟಿಯವರ ರಕ್ತ, ಮಜ್ಜೆ,ಮಾಂಸ ಪ್ರಾಣವಿದ್ದುದು ಬಹುಜನರಿಗೆ ಗೊತ್ತಿಲ್ಲ.

ಮೊದಲ ನೋಟಕ್ಕೆ ಹಳಕಟ್ಟಿಯವರದು ವೀರಶೈವ ಸಾಹಿತ್ಯ ಎಂದು ಕಂಡುಬಂದರೂ ಅದನ್ನು ಒಳಹೊಕ್ಕುನೋಡಿದಾಗ ಅದು ವಿಶಾಲವಾದದು, ಸಕಲರಿಗೆ ಬೇಕಾದುದು ಎಂದು ಅರಿವಾಗದೆ ಇರದು. ಯಾವಾಗಲೂ ಅವರಿಗೆ ಕನ್ನಡಿಗರ, ಕರ್ನಾಟಕದ ಚಿಂತೆಯೇ.

ಅವರ ದೃಷ್ಟಿಯಲ್ಲಿ ವೀರಶೈವ ಎಂದರೆ ಅಪ್ಪಟ ಕನ್ನಡತನವೇ. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಮಾತನಾಡಿದರೂ ಅಷ್ಟೆ, ವೀರಶೈವ ಮಹಾ ಸಭೆಯ ಅಧ್ಯಕ್ಷರಾಗಿ ಮಾತನಾಡಿದರೂ ಅಷ್ಟೇ-ಎರಡರಲ್ಲಿಯೂ ಎದ್ದು ಕಾಣುವುದು ಅವರಿಗಿರುವ ಕರ್ನಾಟಕದ, ಕನ್ನಡಿಗರ ಬಗೆಗಿರುವ ಕಳಕಳಿಯೇ.

ಹಳಕಟ್ಟಿಯವರ ಶೈಲಿ ಸರಳವಾದದು, ಅಷ್ಟೇ ಆತ್ಮೀಯವಾದದು. ಒಮ್ಮೊಮ್ಮೆ ಸಡಿಲವೆನಿಸಿದರೂ ಪ್ರಾಮಾಣಿಕ ಅಭಿವ್ಯಕ್ತಿಯಿಂದ ಅದು ಆಪ್ಯಾಯಮಾನವಾಗುತ್ತದೆ. ಸ್ಫಟಿಕದಂತೆ ಒಳಹೊರಗೂ ಒಂದೇಯಾಗಿರುವ ಅವರ ವ್ಯಕ್ತಿತ್ವ, ಶುಭಚಿಂತನೆ ಅವರ ಬರವಣಿಗೆಗಳಲ್ಲಿ ಬೆರೆತು ಬರುವುದರಿಂದ ಅವರು ಏನು ಬರೆದರೂ ಅದು ಉತ್ತಮ ಸಾಹಿತ್ಯವಾಗಿ ಪರಿಣಮಿಸುತ್ತದೆ. ಈ ದೃಷ್ಟಿಯಿಂದಲೇ ಲೇಖನಗಳ ಈ ಸಂಗ್ರಹಕ್ಕೆ 'ಹಳಕಟ್ಟಿ ನುಡಿಪರುಷ' ಎಂದು ಕರೆಯಲಾಗಿದೆ.

ಚರಿತ್ರೆ-ಆತ್ಮಚರಿತ್ರೆ, ಶಾಸನ-ಇತಿಹಾಸ, ಧರ್ಮ-ಸಂಸ್ಕೃತಿ, ಶರಣಜೀವನ-ದರ್ಶನ, ಸಂಕೀರ್ಣ–ಐದು ವಿಭಾಗಮಾಡಿ ಹಳಕಟ್ಟಿಯವರ ಕೆಲವು ಬರಹಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ನವಕರ್ನಾಟಕ ಪತ್ರಿಕೆಯಿಂದ ಲೇಖನಗಳನ್ನು ಆಯ್ದುಕೊಳ್ಳಬೇಕೆಂಬ ನನ್ನ ಆಸೆ ಕೈಗೂಡಲಿಲ್ಲ. ಆ ಪತ್ರಿಕೆಯ ಒಂದು ಸಂಚಿಕೆಯೂ ನನಗೆ ದೊರಕಲಿಲ್ಲ.

ಈ ಸಂಗ್ರಹದಲ್ಲಿ 'ಚರಿತ್ರೆ' ಮಾತ್ರ ನಾನು ಬರೆದುದು. ಉಳಿದುವೆಲ್ಲ ಅವರ ಬರಹವೇ. ಈ ಲೇಖನಗಳ ಸಂಗ್ರಹಕಾರ್ಯದಲ್ಲಿ ನನಗೆ ಅತ್ಯಮೂಲ್ಯವಾದ ಸಲಹೆಗಳನ್ನಿತ್ತು ಸಹಕರಿಸಿದವರು ನಾಡಿನ ಇಬ್ಬರು ಖ್ಯಾತ ಸಾಹಿತಿಗಳಾದ ಡಾ|| ಎಂ. ಎಂ. ಕಲಬುರಗಿಯ

ವರು ಮತ್ತು ಡಾ॥ ದೇವೇಂದ್ರಕುಮಾರ ಹಕಾರಿಯ ವರು. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಅಂಗವಾದ ಬಸವಪೀಠದ ಗ್ರಂಥಾಲಯದಲ್ಲಿರುವ ಶಿವಾನುಭವ ಸಂಚಿಕೆಗಳ ಅವಲೋಕನೆಗೆ ಡಾ॥ ಕಲಬುರಗಿಯವರು ಅವಕಾಶ ಒದಗಿಸಿಕೊಟ್ಟರು. ಈ ಇಬ್ಬರು ಸ್ನೇಹಿತರಿಗೆ ನಾನುತುಂಬ ಋಣಿಯಾಗಿದ್ದೇನೆ. ಬಸವಪೀಠದ ಗ್ರಂಥಾಲಯದಲ್ಲಿ ಕೆಲಸ ಮಾಡುತ್ತಿರುವ ಶ್ರೀಮತಿಯರಾದ ನೀಲಿಮ ಅಂಥೋನಿ ಮತ್ತು ಎಚ್. ಎಸ್. ಗಂಗಮ್ಮ ಇವರ ನೆರವನ್ನೂ ನಾನು ಸ್ಮರಿಸದಿರಲಾರೆ.

ಲೇಖನಗಳ ಸಂಗ್ರಹಕ್ಕೆ ತೊಡಗಿದಂದಿನಿಂದ ಹಿಡಿದು ಅಚ್ಚು ಮುಗಿಯುವವರಿಗೆ ನಾನು ಕೊಟ್ಟ ಕಾಟವನ್ನು ಸಹಿಸಿಕೊಂಡು ಆತ್ಮೀಯ ಸಲಹೆ ಸೂಚನೆಗಳನ್ನೀಯುತ್ತ ನನ್ನ ಕಾರ್ಯವನ್ನು ಹಗುರಗೊಳಿಸಿದವರು ಮಂಗಳು ಮುಕ್ತಾಯಕ್ಕ ಮತ್ತು ಹೆಂಡತಿ ಲಕ್ಷ್ಮೀದೇವಿ; ಅವರನ್ನು ಪ್ರೀತಿಯಿಂದ ಸ್ಮರಿಸುವೆ.

ಕೊನೆಯದಾಗಿ, ಯಾವುದೇ ನೆವದಿಂದ ಕೆಲವು ಒಳ್ಳೆಯ ಗ್ರಂಥಗಳನ್ನು ಪ್ರಕಟಿಸುವ ಯೋಜನೆ ಕೈಕೊಂಡಿರುವ ಮತ್ತು 'ಹಳಕಟ್ಟಿ ನುಡಿಪರುಷ' ಸಂಪಾದಿಸಿಕೊಡಲು ನನಗೆ ಅವಕಾಶ ಒದಗಿಸಿಕೊಟ್ಟಿರುವ ವಿಶ್ವಕನ್ನಡ ಸಮ್ಮೇಳನದವರಿಗೆ ನನ್ನ ನೆನಕೆಗಳನ್ನು ಸಲ್ಲಿಸುವೆ.

ಶಾಂತರಸ

# ಚರಿತ್ರೆ

ಡಿಸೆಂಬರ್ ೧೯೫೬ರಲ್ಲಿ ಶಿವಾನುಭವ ಬೆಳ್ಳಿ ಸಂಚಿಕೆಯಲ್ಲಿ ಹಳಕಟ್ಟಿಯವರು ತಮ್ಮ ಆತ್ಮ ಚರಿತ್ರೆ ಪ್ರಕಟಿಸಿದ್ದಾರೆ. ಇದನ್ನು ಅವರು ಇಪ್ಪತ್ತೈದು ವರ್ಷದ ಶಿವಾನುಭವ ವರದಿ ಎಂದು ಕರೆದಿದ್ದಾರೆ. ಆದರೆ ಅದು ವರದಿಯಲ್ಲ, ಶಿವಾನುಭವ ಮಾಸಪತ್ರಿಕೆಯೊಂದಿಗೆ ನಡೆದುಕೊಂಡುಬಂದ ಅವರ ಚರಿತ್ರೆ. ಇದು ಸಾಮಾನ್ಯರಿಂದ ಹಿಡಿದು ಪಂಡಿತರವರೆಗೆ ಉದ್ಬೋಧಕವಾಗಿದೆ. ಸಂಶೋಧಕರು ಮತ್ತು ಸಾಹಿತಿಗಳಿಗಂತೂ ದಾರಿದೀಪವಾಗಿದೆ; ತುಂಬ ಉಪಯುಕ್ತವಾಗಿದೆ.

ಡಾ|| ಫ. ಗು. ಹಳಕಟ್ಟಿಯವರದು ವೈವಿಧ್ಯಮಯ ವ್ಯಕ್ತಿತ್ವ. ಈ ಆತ್ಮಚರಿತ್ರೆಯಲ್ಲಿ ಅವರ ವ್ಯಕ್ತಿತ್ವದ ಪ್ರಮುಖ ಎರಡು ಮುಖಗಳಾದ ಸಂಶೋಧನೆ ಮತ್ತು ಸಾಹಿತ್ಯ ರಚನೆಯು ದರ್ಶನವಾಗುತ್ತದೆ. ವ್ಯಕ್ತಿತ್ವದ ಇನ್ನುಳಿದ ಮುಖಗಳ ಪರಿಚಯವನ್ನು ಇಲ್ಲಿ ಸಂಕ್ಷಿಪ್ತವಾಗಿ ಮಾಡಿಕೊಡಲಾಗಿದೆ.

ಫಕೀರಪ್ಪ ಹಳಕಟ್ಟಿಯವರ ತಂದೆ ಗುರುಬಸಪ್ಪ; ತಾಯಿ ದಾನಮ್ಮ. ಗುರುಬಸಪ್ಪ ಶಿಕ್ಷಣ ಖಾತೆಯಲ್ಲಿ ೨೫ ವರ್ಷಗಳವರೆಗೆ ಸೇವೆ ಸಲ್ಲಿಸಿದವರು; ಅನೇಕ ಉಪಯುಕ್ತ ಗ್ರಂಥಗಳನ್ನು ರಚಿಸಿದವರು. ಧಾರವಾಡದ ವಿದ್ಯಾವರ್ಧಕ ಸಂಘದ ಸಂಸ್ಥಾಪಕ ಸದಸ್ಯರಲ್ಲಿ ಇವರೊಬ್ಬರು. ಜುಲೈ ೨, ೧೮೮೦ ರಂದು ಧಾರವಾಡದಲ್ಲಿ ಫಕೀರಪ್ಪ ಜನಿಸಿದರು.

ಫಕೀರಪ್ಪನಿಗೆ ಮೂರು ವರ್ಷ ತುಂಬಿರಲಿಲ್ಲ, ತಾಯಿಯನ್ನು ಕಳೆದುಕೊಂಡರು. ಅಜ್ಜಿ ಬಸಮ್ಮನ ಮಮತೆಯ ಆಶ್ರಯದಲ್ಲಿ ಬೆಳೆದರು.

ಫ. ಗು. ಹಳಕಟ್ಟಿಯವರು ಪ್ರಾಥಮಿಕ ಶಿಕ್ಷಣ ಧಾರವಾಡದಲ್ಲಿ ಪಡೆದರು. ೧೮೯೬ರಲ್ಲಿ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ಪಾಸಾದರು. ಮುಂಬಯಿಯ ಸೇಂಟ್ ಝೇವಿಯರ್ ಕಾಲೇಜಿನಿಂದ ೧೯೦೧

ರಲ್ಲಿ ವಿಜ್ಞಾನ ಪದವಿಯನ್ನು ದ್ವಿತೀಯ ಶ್ರೇಣಿಯಲ್ಲಿ ಪಡೆದರು, ೧೯೦೪ ರಲ್ಲಿ ಎಲ್‌ಎಲ್‌ಬಿ ಪರೀಕ್ಷೆಯನ್ನು ಪ್ರಥಮ ವರ್ಗದಲ್ಲಿ ಪಾಸಾದರು.

೧೯೦೪ ರಲ್ಲಿ ಬೆಳಗಾವಿಯಲ್ಲಿ ವಕೀಲವೃತ್ತಿಯನ್ನು ಆರಂಭಿಸಿದರು. ಕೆಲವೇ ವರ್ಷಗಳಲ್ಲಿ ಜನಪ್ರಿಯ ವಕೀಲರೆನಿಸಿದರು. ೧೯೨೩ರಲ್ಲಿ ವಿಜಾಪುರಕ್ಕೆ ಬಂದು ನೆಲಸಿದರು. ಅದೇ ವರ್ಷ ಅವರ ದಕ್ಷ ವಕೀಲವೃತ್ತಿಯನ್ನು ನೆನೆದು ಸರಕಾರ ಅವರನ್ನು ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಗವರ್ನ್‌ಮೆಂಟ್ ಪ್ಲೀಡರರೆಂದು ನೇಮಿಸಿದರು.

ವಿದ್ಯಾರ್ಥಿ ಜೀವನದಲ್ಲಿಯೇ ಅವರು ಸಾಹಿತ್ಯದ ಕಡೆಗೆ ವಾಲಿದರು. ವಕೀಲವೃತ್ತಿಯನ್ನು ಪ್ರಾರಂಭಿಸಿದ ಬಳಿಕ ಆ ಹಂಬಲ ಹೆಚ್ಚಾಗಿ ಸಾಹಿತ್ಯ ರಚನೆಗೆ ತೊಡಗಿದರು. ತಾಡವೋಲೆ ಮತ್ತು ಹಸ್ತಪ್ರತಿಗಳನ್ನು ಸಂಗ್ರಹಿಸ ತೊಡಗಿದರು. ೧೯೨೦ರ ಹೊತ್ತಿಗೆ ಒಂದು ಸಾವಿರ ಕಟ್ಟುಗಳು ಸಂಗ್ರಹ ವಾದುವು. ವಕೀಲವೃತ್ತಿಯಲ್ಲಿ ಆಸಕ್ತಿ ಕಡಿಮೆಯಾಯಿತು. ಶರಣರ ವಚನ ಗ್ರಂಥಗಳನ್ನು ಪ್ರಕಟಿಸುವ ಹಂಬಲ ಅತಿಯಾಯಿತು. ೧೯೨೩ರಲ್ಲಿ ವಚನ ಶಾಸ್ತ್ರಸಾರ ಭಾಗ ೧ ಪ್ರಕಟವಾಯಿತು. ಈ ಕೆಲಸಕ್ಕಾಗಿ ಒಂದು ಸ್ವಂತ ಮುದ್ರಣ ಬೇಕೆನಿಸಿತು. ಇದ್ದ ಒಂದು ಮನೆಯನ್ನು ಮಾರಿ ೧೯೨೫ ರಲ್ಲಿ 'ಹಿತಚಿಂತಕ' ಮುದ್ರಣಾಲಯವನ್ನು ಸ್ಥಾಪಿಸಿದರು.

ಶರಣರ ಜೀವನ ಚಿತ್ರಿಸಲು, ಅವರನ್ನು ಕುರಿತು ಲೇಖನಗಳನ್ನು ಪ್ರಕಟಿಸಲು ಒಂದು ಪತ್ರಿಕೆಯ ಆವಶ್ಯಕತೆಯೆನಿಸಿ ೧-೨-೧೯೨೬ರಂದು 'ಶಿವಾನುಭವ' ತ್ರೈಮಾಸಿಕ ಪ್ರಾರಂಭಿಸಿದರು. ಮುಂದೆ ಅದು ಮಾಸ ಪತ್ರಿಕೆಯಾಗಿ ಪ್ರಕಟಗೊಳ್ಳತೊಡಗಿತು. ಕರ್ನಾಟಕದ ಪುನರುಜ್ಜೀವನಕ್ಕೆ, ಏಕೀಕರಣ ಸಾಧನೆಗೆ ೬-೧೦-೧೯೨೭ ರಂದು 'ನವಕರ್ನಾಟಕ' ಎಂಬ ವಾರ ಪತ್ರಿಕೆಯನ್ನು ಪ್ರಾರಂಭಿಸಿದರು. ನವಕರ್ನಾಟಕ ನಿರ್ಮಾಣಕ್ಕಾಗಿ ಈ ಪತ್ರಿಕೆ ಯಿಂದ ಸಂದ ಸೇವೆ ಅಷ್ಟಿಷ್ಟಲ್ಲ.

ಸಾಹಿತ್ಯ ಸೇವೆಗಷ್ಟೇ ಅವರ ಜೀವನ ಸೀಮಿತವಾಗಿರಲಿಲ್ಲ. ಶಿಕ್ಷಣ, ಸಮಾಜ ಸುಧಾರಣೆ, ಉದ್ಯೋಗ, ಒಕ್ಕಲುತನ ಮುಂತಾದ ರಂಗಗಳಲ್ಲಿಯೂ

ಗಾಗಿ "ಒಕ್ಕಲುತನದ ಸಹಕಾರಿ ಸಂಘ" ಕಟ್ಟಿದರು. ನೇಕಾರರ "ಸಹಕಾರಿ ಸಂಘ" ಸ್ಥಾಪಿಸಿ ಅನೇಕ ವರ್ಷಗಳವರೆಗೆ ಅದರ ಅಧ್ಯಕ್ಷರಾಗಿ ದುಡಿದರು. "ಗ್ರಾಮೀಣಾಭಿವೃದ್ಧಿ ಸಂಘ" ಸ್ಥಾಪಿಸಿ ಹಳ್ಳಿಗಳ ಏಳ್ಗೆಗಾಗಿ ಶ್ರಮಿಸಿದರು. ಕ್ಷಾಮದಿಂದ ಜನರನ್ನು ರಕ್ಷಿಸಲು "ವಿಲ್ಸನ್ ಆ್ಯಂಟಿ ಫ್ಯಾಮಿನ್ ಇನ್‌ಸ್ಟಿಟ್ಯೂಟ್" ಪ್ರಾರಂಭಿಸಿ ಹದಿನೈದು ವರ್ಷಗಳವರೆಗೆ ಅದರ ಸಂಪರ್ಕವಿಟ್ಟುಕೊಂಡು ನಿರ್ಮಲಾಂತಃಕರಣದಿಂದ ಕೆಲಸ ಮಾಡಿದರು. ಸಿದ್ಧೇಶ್ವರ ಜಾತ್ರೆಯಲ್ಲಿ ದನಗಳ ಪ್ರದರ್ಶನ ಮತ್ತು ಮಾರಾಟದ ವ್ಯವಸ್ಥೆ ಮಾಡಿದರು. ಮಹಿಳೆಯರು ಸಭೆ ಸೇರಿ ಚರ್ಚಿಸಲು 'ಲೆಫರ್ಡ್ ಹಾಲ್' ಅನ್ನು ಒದಗಿಸಿ ಕೊಟ್ಟರು.

ಹಳಕಟ್ಟಿಯವರು ತಾವು ಹಮ್ಮಿಕೊಂಡ ಸಾಹಿತ್ಯಿಕ, ಸಂಶೋಧನಾತ್ಮಕ, ಔದ್ಯೋಗಿಕ ಕಾರ್ಯಗಳ ದೆಸೆಯಿಂದಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಅವರು ಭಾಗವಹಿಸಲಿಲ್ಲ. ಸರಕಾರದಿಂದ ದೊರಕಿದ ಅವಕಾಶಗಳನ್ನೆಲ್ಲ ಸಾಹಿತ್ಯ ಮತ್ತು ಸಮಾಜಕ್ಕೆ ಬಳಸಿಕೊಂಡರು. ಅದರಂತೆಯೇ ಅವರು ರಾಜಕೀಯ ರಂಗದಲ್ಲಿಯೂ ಸಕ್ರಿಯವಾಗಿ ಭಾಗವಹಿಸಲಿಲ್ಲ. ಕೆಲವು ದಿನ ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದರು. ಆರು ವರ್ಷಗಳವರೆಗೆ ವಿಜಾಪುರ ನಗರಸಭೆಯ ಶಾಲಾ ಮಂಡಳಿಯ ಅಧ್ಯಕ್ಷರಾಗಿ, ನಗರ ಸಭೆಯ ಕಾರ್ಯನಿರ್ವಾಹಕ ಸಮಿತಿಯ ಅಧ್ಯಕ್ಷರಾಗಿ, ಮೂರು ವರ್ಷ ಜಿಲ್ಲಾ ಸ್ಥಾನಿಕ ಮಂಡಳಿಯ ಸದಸ್ಯರಾಗಿ, [illegible]ರಲ್ಲಿ ನಗರಸಭೆಯ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ನಗರ ಸಭೆಯ ಕಾರ್ಯನಿರ್ವಾಹಕ ಸಮಿತಿಯ ಅಧ್ಯಕ್ಷರಾಗಿ ಇದ್ದಾಗಲೇ [illegible] ವಿಜಾಪುರಕ್ಕೆ ನೀರೊದಗಿಸುತ್ತಿರುವ ಭೂತನಾಳ ಕೆರೆಯ ಯೋಜನೆ ಆರಂಭವಾಯಿತು. ಅಸ್ಪೃಶ್ಯತಾ ನಿವಾರಣೆಗಾಗಿ [illegible] ಪ್ರತಿಪಾದಿಸಿದ ವೀರಶೈವದಲ್ಲಿ ಸ್ಪೃಶ್ಯಾಸ್ಪೃಶ್ಯ ಭೇದವಿಲ್ಲ: ಅದಕ್ಕಾಗಿ ವೀರಶೈವರು ಅಸ್ಪೃಶ್ಯತಾ ನಿವಾರಣೆಗೆ ಸಂಪೂರ್ಣ ಬೆಂಬಲ ಕೊಡಬೇಕೆಂದು ೧೯೩೨ರಲ್ಲಿ ಧಾರವಾಡದಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷ ಸ್ಥಾನದಿಂದ ಕರೆಕೊಟ್ಟರು.

೧೯೨೦ ರಲ್ಲಿ ನಡೆದ ಮುಂಬೈ ವಿಧಾನಪರಿಷತ್ತಿನ ಚುನಾವಣೆಯಲ್ಲಿ ಹಳಕಟ್ಟಿಯವರು ಅಧಿಕಮತಗಳಿಂದ ಆರಿಸಿಬಂದರು. ಮುಂದೆಯೂ ಚುನಾವಣೆಗೆ ನಿಂತಿದ್ದರೆ ಅವರು ಆರಿಸಿಬರುತ್ತಿದ್ದರು. ಆದರೆ ತಮ್ಮ ಸಾಹಿತ್ಯ ಸಂಶೋಧನೆಗಳಿಗೆ ಇದರಿಂದ ಆತಂಕ ಉಂಟಾಗುವುದೆಂದು ಬಗೆದು ಅವರು ರಾಜಕೀಯದಿಂದ ಸಂಪೂರ್ಣ ದೂರಾದರು.

ಕರ್ನಾಟಕ ಸಾಹಿತ್ಯಪರಿಷತ್ತಿನ ಸಂಸ್ಥಾಪಕರಲ್ಲಿ ಒಬ್ಬರಾದ ಹಳಕಟ್ಟಿಯವರು ನವಕರ್ನಾಟಕದ ಶಿಲ್ಪಿಗಳು. ಕರ್ನಾಟಕ ಏಕೀಕರಣಕ್ಕಾಗಿ ಅವರು ಅಂತಃಕರಣಪೂರ್ವಕ ದುಡಿದರು. ೧೯೨೮ರಲ್ಲಿ ಧಾರವಾಡದಲ್ಲಿ ಸೇರಿದ್ದ ಅಖಿಲ ಕರ್ನಾಟಕ ಏಕೀಕರಣ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರ ಸಾಹಿತ್ಯ ಸೇವೆಯನ್ನು ಮೆಚ್ಚಿ ೧೯೨೬ರಲ್ಲಿ ಬಳ್ಳಾರಿಯಲ್ಲಿ ನಡೆದ ೧೨ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಆಯ್ಕೆಮಾಡಿ ಕನ್ನಡಿಗರು ಅವರನ್ನು ಸನ್ಮಾನಿಸಿದರು. ಜನ "ವಚನಶಾಸ್ತ್ರಪಿತಾಮಹ" ನೆಂದು ಪ್ರೀತಿಯಿಂದ ಕರೆದರು. ಭಾರತಸರಕಾರ ರಾವ್‌ಬಹಾದ್ದೂರ ಪದವಿಯನ್ನಿತ್ತು ಗೌರವಿಸಿತು. ೧೯೫೭ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಿ. ಲಿಟ್. ಪದವಿಯನ್ನಿತ್ತು ಸನ್ಮಾನಿಸಿತು.

ಈ ರೀತಿಯ ಸನ್ಮಾನ, ಪದವಿ, ಗೌರವಗಳಿಗಿಂತಲೂ ಅವರು ಎತ್ತರದವರು. ಈ ಗೌರವಗಳು ಅವರನ್ನು ಆಶ್ರಯಿಸಿ ತಮ್ಮ ಗೌರವವನ್ನು ಹೆಚ್ಚಿಸಿಕೊಂಡವು. ಹಳಕಟ್ಟಿಯವರದು ಬಹು ವಿಶಿಷ್ಟ ವ್ಯಕ್ತಿತ್ವ. ಸಾಹಿತ್ಯ, ಸಂಶೋಧಕನಾದವನು ಸಾಮಾಜಿಕ, ಶೈಕ್ಷಣಿಕ, ಒಕ್ಕಲುತನ, ಸಹಕಾರ, ಮುದ್ರಣ, ಬ್ಯಾಂಕ ಸ್ಥಾಪನೆ, ಗ್ರಾಮೀಣ ಅಭಿವೃದ್ಧಿ ಯೋಜನೆ, ಅಸ್ಪೃಶ್ಯತಾ ನಿವಾರಣೆ, ಕುಡಿಯ ನೀರಿನ ಯೋಜನೆ, ದನಗಳ ಜಾತ್ರೆ, ಏಕೀಕರಣ, ನಗರ ಸಭೆಯ ಮೂಲಕ ಜನಸೇವೆ ಹೀಗೆ ಹತ್ತೆಂಟಲ್ಲ ನೂರಾರು ಕ್ಷೇತ್ರಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಸಮರ್ಥನಾಗಿ ನಿಸ್ವಾರ್ಥದಿಂದ ಶ್ರಮಿಸಿದ ವ್ಯಕ್ತಿ ಕರ್ನಾಟಕದಲ್ಲಿ ಡಾ॥ ಫಕೀರಪ್ಪ ಗುರುಬಸಪ್ಪ ಹಳಕಟ್ಟಿಯವರೊಬ್ಬರೇ. [illegible]ವಾಗಿ ದುಡಿದ ಈ ವ್ಯಕ್ತಿಗೆ ಬಡತನ, ಹಸಿವು, ಕೊರತೆ ನಿರಂತರ ಸಂಗಾತಿಯಾಗಿದ್ದವು. ಇದಕ್ಕಾಗಿ ಅವರು [illegible]

ಲಿಲ್ಲ; ಇನ್ನೊಬ್ಬರಲ್ಲಿ ತಮ್ಮ ದುಃಖವನ್ನು ತೋಡಿಕೊಳ್ಳಲಿಲ್ಲ. ಅವರು ಎಂದಾದರೂ ಕಾಣಿಕೆ ಸ್ವೀಕರಿಸಿದ್ದರೆ ಶರಣಸಾಹಿತ್ಯ ಪ್ರಕಟನೆಗಾಗಿ ಮಾತ್ರ. ತಾವೇಸ್ಥಾಪಿಸಿದ ಸಿದ್ಧೇಶ್ವರ ಬ್ಯಾಂಕಿನಲ್ಲಿರಿಸಿದ, ಸಾಹಿತ್ಯಕ್ಕೆ ಕಾಣಿಕೆಯಾಗಿ ಬಂದ ಹಣವನ್ನು ತೆಗೆದುಕೊಳ್ಳುವಾಗಲೂ ವಿನಯದಿಂದ ಅದು ಸತ್ಪಾತ್ರಕ್ಕೆ ಸಲ್ಲುತ್ತದೆಂದು ಹೇಳಿ, ಅದರಂತೆ ಅದನ್ನು ವ್ಯಯಿಸುತ್ತಿದ್ದರು. ಕೊನೆಯ ವರೆಗೂ ಅವರಿಗೆ ಜೋಡಿಯಾಗಿದ್ದುದು ಅವರ ಸೈಕಲ್; ಶಕ್ತಿಯಿರುವ ವರೆಗೆ ಅದರ ಮೇಲೆ ಕುಳಿತು ನಡಿಸಿದರು. ಶಕ್ತಿಗುಂದಿದಾಗ ಚೀಲಗಳನ್ನು ಹ್ಯಾಂಡಲಿಗೆ ಹಾಕಿ ಅದನ್ನು ಹಿಡಿದು ನಡೆದುಕೊಂಡುಹೋದರು.

ಅವರ ಸಾಹಿತ್ಯ ಸೇವೆಯಲ್ಲಿ ಅವರಿಗೆ ನಿರ್ವ್ಯಾಜವಾಗಿ ಸಹಾಯ ಮಾಡಿದವರು ಅವರ ಮಾವ ಚಿಕ್ಕೋಡಿ ತಮ್ಮಣ್ಣಪ್ಪ, ಬಬಲೇಶ್ವರದ ಶಾಂತವೀರಸ್ವಾಮಿಗಳು, ಹಾನಗಲ್ ಕುಮಾರಸ್ವಾಮಿಗಳು, ಹಾಲಭಾವಿ ವೀರಭದ್ರಪ್ಪನವರು, ಮರ್ದೇಕರ್ ಮಂಜಪ್ಪನವರು, ಅವರ ಪ್ರೆಸ್ಸಿನ ಕೆಲಸಗಾರರು, ಅವರು ಹೇಳಿದ್ದನ್ನು ಬರೆದುಕೊಳ್ಳುವವರು ಮತ್ತು ಇತರರು.

ಕಿತ್ತುತಿನ್ನುವ ಬಡತನ, ಹಸಿವು, ಅನಾರೋಗ್ಯ, ಸಾಂಸಾರಿಕ ತೊಂದರೆಗಳು, ಪ್ರಿಯರ ಸಾವು, ಇರುವೆ ಸಾಲುಗಳಂತೆ ಬರುವ ನೋವು ಕಷ್ಟಗಳು–ಇವುಗಳ ಮುಂದೆ ಗೋಣಗದೆ, ಯಾರನ್ನೂ ದೂರದೆ, 'ಕೆಡನುಡಿಯದೆ, ಕೆಡನಡೆಯದೆ, ಧೃತಿಗೆಡದೆ, ಅನ್ಯರ ಪ್ರತಿಪಾದಿಸದೆ,' ಸವೆದು ಗಂಧವಾಗಿ, ಉರಿದು ಕರ್ಪೂರವಾಗಿ–ಬಾಳಿದ ಡಾ॥ ಹಳಕಟ್ಟಿಯವರ ರೀತಿ ನಮ್ಮ ನಿಮ್ಮಂತೆ ಮಣ್ಣಿನ ಮಕ್ಕಳದೇ. ಆದರೆ ಅವರ ಸಂಕಲ್ಪಶಕ್ತಿ, ಕ್ರಿಯಾಶೀಲತೆ, ಶುಭವನ್ನು ಬಾಳಿಗಳಿಸುವ ವಿಜಿಗೀಷುವೃತ್ತಿ ನಮ್ಮಿಂದ ಅವರನ್ನು ಭಿನ್ನವಾಗಿ ನಿಲ್ಲಿಸುತ್ತವೆ. ಯಾವಾಗಲೂ ಅವರಿಗೆ ಶರಣ ಸಾಹಿತ್ಯದ ಸಂಶೋಧನೆ ಮತ್ತು ಪ್ರಕಟನೆಯ ಚಿಂತೆಯೇ. ೧೯೫೦ ರಲ್ಲಿ ಅವರ ಹಿರಿಯ ಮಗ ಚಂದ್ರಶೇಖರ ದಿಲ್ಲಿಯಲ್ಲಿ ದೊಡ್ಡ ಹುದ್ದೆಯಲ್ಲಿದ್ದಾಗ, ಅಕಸ್ಮಾತ್ ಸಾವಿಗೀಡಾದ. ದಿಲ್ಲಿಗೆ ಹೋಗಿಬಂದರು. ಸಾಹಿತ್ಯದ ಕೆಲಸ ನಿಲ್ಲಲಿಲ್ಲ. ಈ ಸಮಯದಲ್ಲಿ ಡಾ॥ ಆರ್. ಸಿ. ಹಿರೇಮಠರು ಅವರನ್ನು ಸಮಾಧಾನಿಸಲು ವಿಜಾಪುರಕ್ಕೆ ಬಂದರು. "ಶಿವನ ಸೊಮ್ಮು ಶಿವನಿಗೆ ಸಂದಿತು" ಎಂದು

# ಆತ್ಮಚರಿತ್ರ

ಶಿವಾನುಭವ ಪತ್ರಿಕೆಯನ್ನು ಪ್ರಾರಂಭಿಸಿ ಈಗಿನ ಸಂಚಿಕೆಗೆ ೨೫ ವರ್ಷಗಳು ಪೂರ್ತಿಯಾಗುತ್ತಿವೆ. ಈ ಕಾಲದಲ್ಲಿ ಈ ಪತ್ರಿಕೆಯಿಂದ ಆದ ಕಾರ್ಯಗಳ ವಿವರವನ್ನು ಇಲ್ಲಿ ಪ್ರಸಿದ್ಧಿಸುವದು ಅವಶ್ಯವೆಂದು ತೋರುತ್ತದೆ. ಇದರಿಂದ ಪತ್ರಿಕೆಯ ಉದ್ದೇಶಗಳಾವವು, ಈ ಉದ್ದೇಶಗಳಂತೆ ಅದು ಈ ವರೆಗೆ ಕಾರ್ಯ ಮಾಡುತ್ತ ಬಂದಿದೆಯೋ ಹೇಗೆ, ಕಾರ್ಯವಾಗಿದ್ದರೆ ಇದು ಎಷ್ಟರಮಟ್ಟಿಗೆ ಸಫಲವಾಗಿದೆ, ಕಾರ್ಯವಾಗದಿದ್ದರೆ ಅದಕ್ಕೆ ಕಾರಣಗಳಾವವು ಎಂಬುದನ್ನು ವಿವೇಚಿಸುವದು ಯುಕ್ತವಾಗಿರುತ್ತದೆ. ಇದರಿಂದ ಈ ಪತ್ರಿಕೆಯು ಮುಂದೆ ಯಾವ ಕಾರ್ಯವನ್ನು ಪ್ರಾರಂಭಿಸತಕ್ಕದ್ದು ಮತ್ತು ಅದನ್ನು ಹೇಗೆ ಅದು ನಿರ್ವಹಿಸಬೇಕು ಎಂಬುದು ತಿಳಿದು ಸರಿಯಾದ ಮಾರ್ಗವನ್ನು ಅನುಸರಿಸಲು ಅನುಕೂಲವಾಗುತ್ತದೆ. ಈ ದೃಷ್ಟಿಯನ್ನು ಇಟ್ಟುಕೊಂಡು ನಾವು ಈ ವರದಿಯನ್ನು ವಾಚಕರಮುಂದೆ ಇಡಲು ಅಪೇಕ್ಷೆಪಟ್ಟಿದ್ದೇವೆ.

ಈ ಪತ್ರಿಕೆಯು ೧೯೨೫ರಲ್ಲಿ ಸ್ಥಾಪಿತವಾಗಿರುವದೇನೋ ನಿಜವು. ಆದರೆ ಅದರ ಹಿನ್ನೆಲೆಯು ಅದಕ್ಕೂ ಮೊದಲು ೨೦-೩೦ ವರ್ಷಗಳಷ್ಟು [illegible]. ಇದನ್ನು ವಿವರಿಸದ ಹೊರತು ಪತ್ರಿಕೆಯು ಮಾಡಿದ ಕಾರ್ಯಗಳ ಅರ್ಥ ವಾಚಕರಿಗೆ ಆಗಲಾರದೆಂದು ನಮಗೆ ತೋರುತ್ತದೆ. ಆದ್ದರಿಂದ ಅದನ್ನು ನಾವು ಇಲ್ಲಿ ಸ್ವಲ್ಪದರಲ್ಲಿ [illegible] [illegible].

## ೧೮೯೦-೧೮೯೬

೧೮೯೦ರಿಂದ ೧೮೯೬ರವರೆಗೆ ನಾನು ಮಾಧ್ಯಮಿಕ ಶಾಲೆ ಎಂದರೆ ಹಾಯಸ್ಕೂಲಿನಲ್ಲಿ ಧಾರವಾಡದಲ್ಲಿ ವಿದ್ಯಾರ್ಥಿಯಾಗಿದ್ದಾಗ್ಗೆ ಇದ್ದ ಪರಿಸ್ಥಿತಿಯನ್ನು ಇಲ್ಲಿ ಹೇಳುವದು ಅವಶ್ಯವೆನಿಸುತ್ತದೆ. ಆಗ ನನಗೆ ವೀರಶೈವ ಸಂಸ್ಕೃತಿ, ಅದರ ವಾಙ್ಮಯ ಮತ್ತು ಅದರ ಇತಿಹಾಸ ಇವುಗಳ

ನಿಜಸ್ಥಿತಿಯ ಪರಿಚಯವು ಏನೂ ಇರಲಿಲ್ಲ. ವಾಚನ ಪುಸ್ತಕಗಳಲ್ಲಿ ಸೋಮೇಶ್ವರಕವಿ, ಸರ್ವಜ್ಞಕವಿ, ಸರ್ಪಭೂಷಣಕವಿ, ಷಡಕ್ಷರಕವಿ, ನಿಜಲಿಂಗ ಕವಿ ಈ ಮೊದಲಾದವರ ಪದ್ಯಗಳು ಉದಾಹರಿಸಲ್ಪಟ್ಟಿದ್ದರೂ ಅವರು ಯಾರು, ಎಲ್ಲಿಯವರು, ಅವರು ಮಾಡಿದ ಗ್ರಂಥಗಳಾವವು ಎಂಬುದರ ವಿವೇಚನೆಯು ಈ ಪುಸ್ತಕಗಳಲ್ಲಿ ಎಷ್ಟು ಮಾತ್ರವೂ ಇರುತ್ತಿದ್ದಿಲ್ಲ. ಶಿಕ್ಷಕರಿಗೂ ಕೂಡ ಈ ತರದ ತಿಳುವಳಿಕೆಯು ಇರದ್ದರಿಂದ ಅವರೂ ಕೂಡ ವಿದ್ಯಾರ್ಥಿಗಳಿಗೆ ಇವುಗಳ ಜ್ಞಾನವನ್ನು ಮಾಡಿಕೊಡುತ್ತಿದ್ದಿಲ್ಲ. ಆದರೆ ಒಂದು ಸಮಾಜದ ಇತಿಹಾಸ ಮತ್ತು ಅದರ ವಾಙ್ಮಯ ಇವುಗಳ ಪರಿಚಯವು ವಿದ್ಯಾರ್ಥಿಗಳಲ್ಲಿ ಇಲ್ಲದೆ ಹೋದರೆ ಸಮಾಜಶ್ರೇಯಸ್ಕರ ಅದರ ಭಾವವು ಅವರಲ್ಲಿ ಹುಟ್ಟುವದು ಹೇಗೆ? ಆದರಿಂದ ಈ ಕಾಲದಲ್ಲಿ ವೀರಶೈವ ಸಮಾಜದ ವಿಷಯವಾಗಿ ವಿಪರೀತ ಭಾವನೆಗಳು ವಿದ್ಯಾರ್ಥಿಗಳಲ್ಲಿ ಮಾತ್ರವಷ್ಟೇ ಅಲ್ಲ, ನಾಡಿನಲ್ಲಿಯೂ ಕೂಡ ಉಂಟಾಗಿದ್ದುದು ಕಂಡುಬರುತ್ತದೆ.

ಕರ್ನಾಟಕದಲ್ಲಿ ಮತಮತಗಳಲ್ಲಿ ಪಂಗಡ ಪಂಗಡಗಳಲ್ಲಿ ನಾನಾ ತರದ ಕಲಹಗಳು ಯಾವಾಗಲೂ ಇದ್ದದ್ದು ಈಗಲೂ ಕಂಡುಬರುತ್ತದೆ. ಈ ಸ್ಥಿತಿಯು ನಾನಾ ಶಿಕ್ಷಕರಲ್ಲಿಯೂ ಕೂಡ ಇದ್ದುದು ತಿಳಿಯುತ್ತದೆ. ನಮ್ಮ ಕ್ಲಾಸಿಗೆ ಬರುತ್ತಿದ್ದ ಒಬ್ಬ ಶಿಕ್ಷಕರು ತಮ್ಮ ಶಿಕ್ಷಣ ಕಾರ್ಯ ನಡೆಸುತ್ತ ಮಧ್ಯದಲ್ಲಿಯೇ ವೀರಶೈವ ಸಮಾಜದ ಮೇಲೆ ಟೀಕೆಗಳ ಸುರಿ ಮಳೆಯನ್ನು ಸುರಿಸುತ್ತಿದ್ದರು. ಅವರು ವೀರಶೈವ ಸಮಾಜವನ್ನು ನೂತನ [illegible]. ವೀರಶೈವ ಸಮಾಜಕ್ಕೆ ಸಾಹಿತ್ಯವಿಲ್ಲ, ಅದರಲ್ಲಿ ಕೆಲಕೆಲ ಗ್ರಂಥಕಾರರು ಇದ್ದುದು ಕಂಡುಬಂದರೂ ಅವರು ಜನ್ಮತಃ ವೀರಶೈವರಲ್ಲದೆ ಬೇರೆಯಾಗಿ ಅವರು ವೀರಶೈವರಾದವರು, ವೀರಶೈವರು [illegible] [illegible], [illegible], ಅವರಲ್ಲಿ [illegible], [illegible] ಮೊದಲಾಗಿ [illegible] [illegible] ಹೇಳುತ್ತಿದ್ದರು. ಆಗ ವೀರಶೈವೇತಿಹಾಸದ ಅರಿವು ನಾಡಿನಲ್ಲಿ ಪ್ರಸಾರವಾಗದ್ದರಿಂದ ವಿದ್ಯಾರ್ಥಿಗಳಾದ ನಾವು ಮೌನದಿಂದ ಶಿಕ್ಷಕರು ಹೇಳಿದ್ದನ್ನು [illegible]

ಕೇಳಿಕೊಂಡು ಇರಬೇಕಾಗುತ್ತಿತ್ತು. ಈ ಸ್ಥಿತಿಯು ೧೮೯೬ರವರೆಗೂ ಇದ್ದಿತು.

### ೧೮೯೬ ರಿಂದ ೧೯೦೪

೧೮೯೬ ರಿಂದ ೧೯೦೪ ರ ವರೆಗೆ ನಾನು ಕಾಲೇಜಿನಲ್ಲಿ ಅಭ್ಯಾಸದಲ್ಲಿ ಇದ್ದೆನು. ಈ ಅವಧಿಯಲ್ಲಿ ಸಹ ಪರಿಸ್ಥಿತಿಯು ಹಿಂದೆ ವರ್ಣಿಸಿದಂತೆಯೇ ಉಳಿಯಿತೆಂದು ಹೇಳಬಹುದು. ಈ ಕಾಲದಲ್ಲಿ ಯಾವ ಮಹತ್ವದ ವೀರಶೈವ ಗ್ರಂಥವು ಪ್ರಕಟವಾಗಿರಲಿಲ್ಲ. ಅದ್ದರಿಂದ ವೀರಶೈವ ಧರ್ಮ ತತ್ವಗಳಾವವು, ಅದರಲ್ಲಿ ವಾಙ್ಮಯವು ಇದೆಯೋ ಇಲ್ಲವೋ ಎಂಬುದು ಸಹ ನಮಗೆ ಗೊತ್ತಿರಲಿಲ್ಲ. ವೀರಶೈವರ ಧರ್ಮಗ್ರಂಥಗಳೆಂದರೆ ಬಸವ ಪುರಾಣ ಮತ್ತು ಚನ್ನಬಸವಪುರಾಣ ಇವುಗಳೇ ಎಂದು ಹೇಳಲ್ಪಡು ತ್ತಿತ್ತು. ಒಂದು ದಿನ ನಾನು ಕಾಲೇಜ ಲಾಯಬ್ರರಿಯಲ್ಲಿದ್ದ ಬಸವಪುರಾಣದ ಒಂದು ಪ್ರತಿಯನ್ನು ತೆಗೆದುಕೊಂಡು ನೋಡಲಾಗಿ ಅದರಲ್ಲಿ ಮಹತತ್ವ ವಿವೇಚನೆಯು ಎಷ್ಟು ಮಾತ್ರವೂ ಇರದೆ, ಅನೇಕ ತರದ ಪವಾಡಗಳುಳ್ಳ ಬರೇ ಕಥೆಗಳೇ ಇರುವದು ಕಂಡುಬಂದಿತು. ಬಸವೇಶ್ವರನು ಯಜ್ಞೋಪವೀತ ಧಾರಣೆಯನ್ನು ನಿರಾಕರಿಸಿದ ಬಳಿಕ ಅವನು ಕಲ್ಯಾಣಕ್ಕೆ ಹೋದಬಳಿಕ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರನ್ನು ಸೇರಿಸಿ ಅವರಿಗೆ ಭೋಜನ ಮಾಡಿಸುವದೊಂದೇ ಅವನ ಧರ್ಮ ಕಾರ್ಯವಾಗಿತ್ತೆಂಬ ತಿಳಿವಳಿಕೆಯುಂಟಾಯಿತು. ಉಚ್ಚ ಶಿಕ್ಷಣ ಪಡೆಯುತ್ತಿರುವ ಕಾಲದಲ್ಲಿ ಇಂಥ ವಿವರಣೆಗಳಿಂದ ವಿದ್ಯಾರ್ಥಿಗಳಿಗೆ ಸಮಾಧಾನವಾಗುವದು ಹೇಗೆ? ಈ ಪರಿಸ್ಥಿತಿಯಿಂದ್ದು ಸಮಾಜದ ಬಗ್ಗೆ ನಿಜವಾದ ಅಭಿಮಾನವು ಅವರಲ್ಲಿ ಉಂಟಾಗುವದು ಹೇಗೆ? ಈ ಕಾಲದಲ್ಲಿ ಕೈ. ವಾ. ಮಲ್ಲಪ್ಪ ವಾರದ ಇವರು ಸಂಗ್ರಹಿಸಿ ಕೆಲವು ಗ್ರಂಥಗಳನ್ನು ಪ್ರಕಟಿಸಿದ್ದರು. ಆದರೆ ಈ ಗ್ರಂಥ ಗಳಲ್ಲಿ ಹೇಳಲ್ಪಟ್ಟ ಆಚಾರ ವಿಚಾರಗಳು ಸದ್ಯದ ವೀರಶೈವರಲ್ಲಿ ಪ್ರಚಲಿತ ವಿದ್ದವುಗಳಿಂದ ತೀರ ಭಿನ್ನ ಸ್ವರೂಪದವೆಂದು ತೋರಿದ್ದರಿಂದಲೂ ಅವುಗಳಲ್ಲಿ ನಿರೂಪಿಸಲ್ಪಟ್ಟ ತತ್ವಗಳು ನಮಗೆ ಅಸ್ಪಷ್ಟವಾಗಿದ್ದರಿಂದಲೂ ಅವುಗಳ ಪರಿಣಾಮವು ನಮ್ಮ ಮೇಲೆ ಏನೂ ಆಗಲಿಲ್ಲ. ೧೯೦೪ನೆಯ

ಇಸ್ವಿಯಲ್ಲಿ ೧ನೆಯ ವೀರಶೈವ ಮಹಾಸಭೆಯು ಜರುಗಿತು. ಆ ಕಾಲದಲ್ಲಿ ಅನೇಕ ಮಹತ್ವದ ಸಾಮಾಜಿಕ ಮತ್ತು ಶೈಕ್ಷಣಿಕ ನಿರ್ಣಯಗಳಾಗಿದ್ದರೂ ವೀರಶೈವ ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಷಯಗಳ ಸಂಬಂಧವಾಗಿ ಯಾವ ನಿರ್ಣಯಗಳಾಗಲಿ ಉಪನ್ಯಾಸಗಳಾಗಲಿ ಜರುಗಲಿಲ್ಲ. ಇದರಿಂದ ವೀರಶೈವ ವಾಙ್ಮಯದ ಸಂಬಂಧವಾಗಿ ಯಾವ ಜಾಗ್ರತೆಯೂ ಸಮಾಜದಲ್ಲಿ ಉಂಟಾಗಿಲ್ಲೆಂದು ನಿರ್ವಿವಾದವಾಗಿ ನಾವು ಹೇಳಬಹುದಾಗಿದೆ. ಆದರೂ ನಾವು ಈ ಬಗ್ಗೆ ಕೆಲವು ವಿವರಗಳನ್ನು ಇಲ್ಲಿ ನಿವೇದಿಸುವದು ಅವಶ್ಯವಾಗಿದೆ.

### ವೀರಶೈವ ವಾಙ್ಮಯದ ಬಗ್ಗೆ ಜನತೆಯಲ್ಲಿಯ ಅಜ್ಞಾನ

ಈ ಕಾಲದಲ್ಲಿ ಕೆಲವು ವೀರಶೈವ ವಿದ್ಯಾವಂತರೂ ಶಾಸ್ತ್ರಿಗಳೂ ಪಂಡಿತರೂ ಇದ್ದುದು ಕಂಡುಬಂದಿತು. ಅವರು ವೀರಶೈವ ಧರ್ಮಗ್ರಂಥಗಳ ಕೆಲವು ಹೆಸರುಗಳನ್ನು ನಮ್ಮ ಮುಂದೆ ನಿರ್ದೇಶ ಮಾಡುತ್ತಿದ್ದರು. ಅವರು ಕ್ರಿಯಾಸಾರ, ನೀಲಕಂಠಭಾಷ್ಯ, ಶಿವಗೀತೆ ಇವು ವೀರಶೈವರಿಗೆ ಆಧಾರ ಗ್ರಂಥಗಳೆಂದು ಹೇಳುವರು. ಆದರೆ ಅವುಗಳಲ್ಲಿರುವ ವಿಚಾರಗಳಾವವು, ಅವು ಯಾವ ತತ್ವಗಳನ್ನು ಸಮರ್ಥಿಸುತ್ತವೆ ಎಂಬುದನ್ನು ಹೇಳುವವರು ಅವರಲ್ಲಿ ಆ ಕಾಲದಲ್ಲಿ ಯಾರೂ ಇರಲಿಲ್ಲ. ಈಗ ವಚನ ಶಾಸ್ತ್ರದಲ್ಲಿ ಪ್ರಚಲಿತವಿರುವ ಷಟ್‌ಸ್ಥಲಗಳು, ಏಕೋತ್ತರಗಳು, ಸಕೀಲಗಳು, ಕರಣಹಸಿಗೆ, ಶಿವಾನುಭವ ಶಾಸ್ತ್ರ, ವಚನ ವಾಙ್ಮಯ ಈ ಶಬ್ದಗಳು ಈ ಕಾಲದಲ್ಲಿ ಯಾರಿಗೂ ಗೊತ್ತಿರಲಿಲ್ಲ. ಆದರೆ ನಿಜಗುಣಶಿವಯೋಗಿಗಳು ರಚಿಸಿದ ಆರು ಶಾಸ್ತ್ರಗಳನ್ನು ಮನಮುಟ್ಟಿ ಓದುತ್ತಿರುವವರು ಪ್ರಾಂತದಲ್ಲಿ ಬಹುಕಡೆಗೆ ಕಂಡುಬರುತ್ತಿದ್ದರು. ಅವರು ಅದ್ವೈತ ಸಿದ್ಧಾಂತ ಅಂದರೆ ಮಾಯಾವಾದವನ್ನು ಸಮರ್ಥಿಸುತ್ತ ಕೆಲವೊಂದು ಮಾರ್ಗವನ್ನು ಅನುಸರಿಸುವವರಾಗಿದ್ದರು. ಆದರೆ ಅವರ ಬಾಯಿಂದ ಲಿಂಗಾಂಗಸಾಮರಸ್ಯ,ಷಟ್‌ಸ್ಥಲ ಇವುಗಳ ಬಗ್ಗೆ ಯಾವ ವಿಚಾರಗಳೂ ಹೊರಡುತ್ತಿರಲಿಲ್ಲ. ಅವುಗಳ ಅರಿವೂ ಅವರಿಗಿರಲಿಲ್ಲ. ಈ ಸ್ಥಿತಿಯಲ್ಲಿ ಕೆಳಗೆ ಕಾಣಿಸಿದ ಸಂಗತಿಗಳು ಒದಗಿದ್ದು ಅವುಗಳನ್ನು ನಾನು ಇಲ್ಲಿ ನಿರ್ದೇಶ ಮಾಡುತ್ತೇನೆ.

## ರಬಕವಿ ಬನಹಟ್ಟಿಗಳಲ್ಲಿ ನನ್ನ ಸಂಶೋಧನೆಗಳು

೧೯೦೧ ಮತ್ತು ೧೯೦೨ ಈ ಎರಡು ವರ್ಷಗಳಲ್ಲಿ ಧಾರವಾಡದಲ್ಲಿ ಪ್ಲೇಗ ಬೇನೆಯು ಬಹು ತೀವ್ರ ಸ್ಥಿತಿಯಲ್ಲಿ ಇದ್ದುದರಿಂದ ನಾನು ಆಗ ಕೆಲವು ಕಾಲ ಜಮಖಂಡಿ ಸಂಸ್ಥಾನದಲ್ಲಿರುವ ಬನಹಟ್ಟಿ ಗ್ರಾಮದಲ್ಲಿ ನನ್ನ ಮಾವಂದಿರಾದ ಕೈ. ವಾ. ತಮ್ಮಣ್ಣಪ್ಪ ಚಿಕ್ಕೋಡಿ ಇವರಲ್ಲಿ ಹೋಗಿ ಉಳಿಯಬೇಕಾಯಿತು. ಇದೇ ಕಾಲಕ್ಕೆ ಈಗಿನ ನಿವೃತ್ತ ನ್ಯಾಯಾಧೀಶರಾದ ಶ್ರೀಯುತ ವೀರಭದ್ರಪ್ಪ ಹಾಲಭಾವಿ ಬಿ. ಎ. ಎಲ್. ಎಲ್. ಬಿ. ಇವರು ರಬಕವಿಯಲ್ಲಿರುವ ತಮ್ಮ ಅತ್ತೆಮನೆಗೆ ಬರುತ್ತಿದ್ದರು. ನಾವು ಉಭಯತರು ಕಾಲೇಜಿನಲ್ಲಿ ಕೇವಲ ಮಿತ್ರತ್ವದಿಂದ ಇರುತ್ತಿದ್ದು ಇಲ್ಲಿಯೂ ಕೂಡಿಯೇ ಕಾಲಕಳೆಯುತ್ತಿದ್ದೆವು. ಶ್ರೀಯುತ ವೀರಭದ್ರಪ್ಪನವರು ಜಮಖಂಡಿ ಸಂಸ್ಥಾನದಲ್ಲಿರುವ ಗೋಠೆ ಎಂಬ ಗ್ರಾಮದಲ್ಲಿ ತಮ್ಮ ಬಂಧುಗಳ ಮನೆಯಲ್ಲಿ ಕೆಲವು ಪುರಾತನ ಗ್ರಂಥಗಳಿದ್ದು ಅವುಗಳನ್ನು ಅವರು ರಬಕವಿಗೆ ತಂದು ನನಗೆ ತೋರಿಸಿದರು. ಅವುಗಳಲ್ಲಿ ಪ್ರಭುಲಿಂಗಲೀಲೆ ಮತ್ತು ಗುರುಭಾಷ್ಯರತ್ನಮಾಲೆ ಎಂಬ ಗ್ರಂಥಗಳಿದ್ದು ಅವುಗಳನ್ನು ನಾನು ಸಮಗ್ರ ಓದಿ ಅವುಗಳಲ್ಲಿರುವ ಅನೇಕ ವಿಷಯಗಳ ಬಗ್ಗೆ ಟಿಪ್ಪಣೆಗಳನ್ನು ಮಾಡಿಕೊಂಡೆನು. ನಾನು ಕೇಳಿದ ಮಹತ್ವದ ವ್ಯಾಖ್ಯಾನಗಳು, ಕಾಲೇಜಿನ ಪ್ರೊಫೆಸರರು ಕಾಲೇಜಿನಲ್ಲಿ ಹೇಳಿದ ವಿಷಯಗಳು, ನಾನು ಓದಿದ ಮಹತ್ವದ ಗ್ರಂಥಗಳು, ಅಥವಾ ಪಠ್ಯಪುಸ್ತಕಗಳು ಇವುಗಳ ಟಿಪ್ಪಣೆಗಳನ್ನು ಅಥವಾ ಸಾರಾಂಶಗಳನ್ನು ಬರೆದಿಡುವದು ನನ್ನ ವಾಡಿಕೆಯಾಗಿತ್ತು. ಹಾಯಸ್ಕೂಲಿನಲ್ಲಿ ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಹೀಗೆ ಬರೆದಿಡುವದು ನನ್ನ ಪದ್ಧತಿಯಾಗಿತ್ತು. ನಾನು ಇತರರು ಬರೆದ ನೋಟುಬುಕ್ಕುಗಳನ್ನು ಎಂದೂ ಕೊಳ್ಳಲಿಲ್ಲ ಅಥವಾ ಓದುತ್ತಿರಲಿಲ್ಲ. ಪರೀಕ್ಷಾ ಕಾಲದಲ್ಲಿ ನಾನು ಬರೆದಿಟ್ಟ ಪಠ್ಯಪುಸ್ತಕಗಳ ಇಂಥ ಸಾರಾಂಶಗಳನ್ನೇ ಓದಿಕೊಳ್ಳುತ್ತಿದ್ದು ಹಾಗೆ ಮಾಡಿದಕೂಡಲೇ ಸಮಗ್ರ ಗ್ರಂಥದ ರಿವಿಜನ್ ಬಹು ತೀವ್ರವಾಗಿ ಆದಂತೆ ನನಗೆ ಆಗುತ್ತಿತ್ತು. ಇಂಥ ಸಾರಾಂಶಗಳ

ಮತ್ತು ಟಿಪ್ಪಣೆಗಳು ನನ್ನ ಸಂಶೋಧನ ಕಾರ್ಯಗಳಲ್ಲಿ ನನಗೆ ಬಹಳ ಉಪಯುಕ್ತವಾಗುತ್ತ ಬಂದಿವೆ.

ನಾನು ಶ್ರೀಯುತ ಹಾಲಭಾವಿಯವರಿಂದ ಇಸಿದುಕೊಂಡು ಬಂದ ಗ್ರಂಥಗಳಲ್ಲಿ ಒಂದಾದ ಪ್ರಭುಲಿಂಗಲೀಲೆಯಲ್ಲಿ ಉಚ್ಚತರದ ಧಾರ್ಮಿಕ ತತ್ವಗಳು ಇದ್ದುದಾಗಿ ಕಂಡುಬಂದಿತು. ಮತ್ತು ಅದರ ಭಾಷೆಯು ಹೆಚ್ಚಿನ ತರದ್ದಾಗಿದ್ದಿತು. ನನ್ನ ತಂದೆಗಳವರು ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಒಬ್ಬ ಮುಖ್ಯ ಸಭಾಸದರಾದ್ದರಿಂದ ಈ ಪ್ರಭುಲಿಂಗಲೀಲಾ ಗ್ರಂಥವನ್ನು ಅದರ ವಾರ್ಷಿಕ ಪರೀಕ್ಷಾ ಕಾಲದಲ್ಲಿ ಪರೀಕ್ಷೆಗೋಸ್ಕರ ಇಡಲು ನಾನು ಸೂಚಿಸಿದೆನು. ಆ ಪ್ರಕಾರ ಅವರು ಏರ್ಪಾಡು ಮಾಡಲು ಈ ಗ್ರಂಥವು ಕೆಲವು ವರ್ಷ ಪರೀಕ್ಷೆಗಾಗಿ ಇಡಲ್ಪಡುತ್ತಿತ್ತು.

ಈ ಕಾಲದಲ್ಲಿ ನಾನು ನೋಡಿದ ಎರಡನೇ ಗ್ರಂಥವಾದ ಗಣಭಾಷ್ಯ ರತ್ನಮಾಲೆಯಲ್ಲಿ ಗದ್ಯ ರೂಪದ ಹೊಸ ರಚನೆಯುಳ್ಳ ಅನೇಕ ವಚನಗಳು ನನ್ನ ದೃಷ್ಟಿಗೆ ಬಿದ್ದವು. ಅವುಗಳೆಲ್ಲವನ್ನು ನಾನು ಟಿಪ್ಪಣೆ ಮಾಡಿಕೊಂಡೆನು. ಅವುಗಳಲ್ಲಿ ನಿರೂಪಿತವಾದ ವಿಚಾರಗಳು ಹೊಸ ತರಹದ ಶೈಲಿಯಲ್ಲಿದ್ದು, ಅವು ಹೊಸತರಹದ ಶ್ರೇಷ್ಠ ವಿಚಾರವುಳ್ಳವುಗಳಾಗಿದ್ದವು. ಅವುಗಳ ನಿಜ ಸ್ವರೂಪದ ವಿವರವು ನನಗೆ ಈ ಕಾಲದಲ್ಲಿ ಎಷ್ಟುಮಾತ್ರವೂ ಇರಲಿಲ್ಲ. ಕೈ. ವಾ. ತಮ್ಮಣ್ಣಪ್ಪನವರು ಉಚ್ಚ ವಾಙ್ಮಯಗಳೂ ಕನ್ನಡ ಭಾಷಾ ಪ್ರೇಮಿಗಳೂ ವಿದ್ವಾಂಸರೂ ಇದ್ದರು. ಅವರಿಗೂ ಕೂಡ ಅವುಗಳ ಪರಿಚಯವಿರಲಿಲ್ಲ. ಈ ಎಲ್ಲ ಸಂಗತಿಗಳು ೧೯೦೦ ರಲ್ಲಿ ಅಂದರೆ ನಾನು ಬಿ. ಏ. ಕ್ಲಾಸಿನಲ್ಲಿ ಇದ್ದಾಗ ಸಂಭವಿಸಿದವು.

೧೯೦೨ ನೇ ಇಸ್ವಿಯಲ್ಲಿ ನಾನು ಪುನಃ ಬಸವಟ್ಟಿಗೆ ಹೋದ ಕಾಲದಲ್ಲಿ ಅಲ್ಲಿ ಗಲಗಲಿ ಶಿವಲಿಂಗಪ್ಪ ಎಂಬವರು ಇದ್ದು ಅವರಲ್ಲಿ ೩೨ ಹಳೇ ಗ್ರಂಥಗಳು ಮತ್ತು ಗುರಬಸಯ್ಯ ಕಂತಿ ಎಂಬವರಿದ್ದು ಅವರಲ್ಲಿ ೧೬ ಗ್ರಂಥಗಳು ನನ್ನ ದೃಷ್ಟಿಗೆ ಬಿದ್ದವು. ಮುಂದೆ ನಾನು ಒಂದು ಸಮಯದ

ದಲ್ಲಿ ಬೆಳಗಾವಿಗೆ ಹೋದಕಾಲದಲ್ಲಿ ವೀರಶೈವ ಸಮಾಜದಲ್ಲಿ ಪ್ರಸಿದ್ಧರಾದ ಕೈ. ವಾ. ಗುರುಸಿದ್ದಪ್ಪ ಗಿಲಗಂಚಿ, ಹಿಂದಿನ ಡಿಸ್ಟ್ರಿಕ್ಟ ಡೆಪ್ಯೂಟಿ ಕಲೇಕ್ಟರ ಇವರ ಮನೆಯಲ್ಲಿ ೧೭ ಗ್ರಂಥಗಳನ್ನು ಮತ್ತು ನನ್ನ ಆಪ್ತರಾದ ಭೋಜಪ್ಪ ಭೋಜ ಇವರಲ್ಲಿ ೧೦ ಗ್ರಂಥಗಳನ್ನು ನಾನು ನೋಡಿದೆನು. ಈ ಎಲ್ಲ ಗ್ರಂಥಗಳ ಪಟ್ಟಿಯನ್ನು ನಾನು ಮಾಡಲಾಗಿ ಅವುಗಳಲ್ಲಿ ಭಾವ ಚಿಂತಾ ರತ್ನ, ಕವಿಕರ್ಣರಸಾಯನ, ಲಕ್ಕಣ್ಣದಂಡೇಶನ ಶಿವತತ್ವಚಿಂತಾಮಣಿ, ಏಕೋರಾಮೇಶ್ವರ ಪುರಾಣ, ಪುಲಿಗೆರೆಯ ಜಕ್ಕಣ್ಣನ ಏಕೋತ್ತರ ಶತ ಸ್ಥಲ, ಗುರುಬಸವ ಕವಿಯ ಮನೋವಿಜಯ ಅಲ್ಲದೆ ಅನೇಕ ಪುರಾಣಗಳೂ ಚಿಕ್ಕಚಿಕ್ಕ ಕಾವ್ಯಗಳೂ ಇದ್ದವು. ನಾನು ಮಾಡಿದ ಈ ಗ್ರಂಥಗಳ ಪಟ್ಟಿಯಲ್ಲಿ ಅವುಗಳ ಗ್ರಂಥಕರ್ತರು ಯಾರು, ಅವರು ಯಾವ ಶೈಲಿಯಲ್ಲಿ ಬರೆದಿದ್ದಾರೆ, ಗ್ರಂಥಗಳ ವಿಷಯ, ಪುಟ ಸಂಖ್ಯೆ ಗ್ರಂಥಕಾರನ ಕಾಲದ ವಿವರವು ಇದ್ದರೆ ಅದರ ಉಲ್ಲೇಖ, ಇವೆಲ್ಲವುಗಳ ಸಮಾವೇಶವನ್ನು ಮಾಡಿಕೊಂಡೆನು. ಇದರಿಂದ ಆಯಾ ಗ್ರಂಥಗಳ ಸಾಮಾನ್ಯ ಸ್ವರೂಪವು ನನಗೆ ಚೆನ್ನಾಗಿ ಗೊತ್ತಾಗುತ್ತಿತ್ತು. ಇವುಗಳ ಮೇಲಿಂದ ವೀರಶೈವರಲ್ಲಿ ಅವುದೋ ಒಂದು ಮಹತ್ವದ ವಾಙ್ಮಯವಿದೆ, ಅದಕ್ಕೊಂದು ಸಿದ್ಧಾಂತ ವಿದೆ, ಧರ್ಮವಿದೆ ಎಂಬುದರ ತಿಳುವಳಿಕೆಯು ನನಗೆ ಆಗಹತ್ತಿತು. ಆ ಕಾಲದಲ್ಲಿ ಈಗ ಪ್ರಕಟವಾಗಿರುವ ಕವಿಚರಿತೆಯಂಥ ಗ್ರಂಥಗಳು ನನ್ನ ದೃಷ್ಟಿಗೆ ಯಾವವೂ ಬಿದ್ದಿರಲಿಲ್ಲ. ಅಲ್ಲದೆ ಮುಂಬಯಿ ವಿಶ್ವವಿದ್ಯಾಲಯ ದಲ್ಲಿ ಎಮ್. ಎ. ಅಭ್ಯಾಸಕ್ಕೊಸ್ಕರ ಉಪಯೋಗಿಸಲು ಯೋಗ್ಯವಾದ ಗ್ರಂಥಗಳು ಕನ್ನಡದಲ್ಲಿ ಇವೆಯೋ ಎಂಬುದರ ವಿಷಯವಾಗಿ ಸಂದೇಹವು ಬಹುಜನರಿಂದ ಮಾಡಲ್ಪಡುತ್ತಿತ್ತು. ಆದ್ದರಿಂದ ನಾನು ಮೇಲೆ ಹೇಳಿದ ರೀತಿಯಾಗಿ ಬರೆದ ಸಂಗತಿಗಳನ್ನು ವಾಚಕರು ಈಗ ನೋಡಿ ಆಶ್ಚರ್ಯಪಡ ಬೇಕಾದುದು ಏನೂ ಇರುವದಿಲ್ಲ.

## ಧಾರವಾಡದಲ್ಲಿ ನನ್ನ ಸಂಶೋಧನೆಗಳು

ಮುಂದೆ ಮರುವರ್ಷ ನಾನು ಧಾರವಾಡದಲ್ಲಿ ಇದ್ದಾಗ್ಗೆ ಅಲ್ಲಿಯ ನಾಗರಿಕರಾದ ಶಿವಲಿಂಗಪ್ಪಾ ಮಂಚಾಲಿ ಎಂಬವರಲ್ಲಿ ಆಕಸ್ಮಾತ್ತಾಗಿ

ಹೋದಾಗ್ಗೆ ನನಗೆ ಅವರಲ್ಲಿ ಪುರಾತನ ಗ್ರಂಥಗಳ ಒಂದು ದೊಡ್ಡ ಸಮುದಾಯವೇ ಕಂಡುಬಂದಿತು. ಅವುಗಳಲ್ಲಿ ಅನೇಕ ಗ್ರಂಥಗಳು ತಾಡವಾಲೆಗಳ ಮೇಲೆ ಇದ್ದವು. ನಾನು ತಾಡವಾಲೆಯ ಗ್ರಂಥಗಳನ್ನು ನೋಡಿದ್ದು ಇದೇ ಮೊದಲು. ನಾನು ಈ ಗ್ರಂಥಗಳಲ್ಲಿ ಕೆಲವುಗಳನ್ನು ಓದಲಿಕ್ಕೆ ಅವರಿಂದ ಇಸಿದುಕೊಂಡು ಬಂದೆನು. ಅವುಗಳಲ್ಲಿ ಪ್ರಭುದೇವರ ವಚನಗಳು ಇದ್ದವು. ಇವೆಲ್ಲವೂ ನಾನು ಅಕಸ್ಮಾತ್ತಾಗಿ ಆರಿಸಿಕೊಂಡವುಗಳು.

ಷಟ್‌ಸ್ಥಲತಿಲಕವು ಷಟ್ಪದಿ ಗ್ರಂಥವಿದ್ದು ವೀರಶೈವರ ಆರು ಸ್ಥಲಗಳ ವಿವರಣೆಯು ಅದರಲ್ಲಿ ಅತ್ಯುತ್ತಮವಾಗಿ ವಿವರಿಸಲ್ಪಟ್ಟಿತ್ತು. ಶಿವಾಧಿಕ್ಯ ಪುರಾಣದಲ್ಲಿ ಭಕ್ತನು ಹೊಲೆಯನಿದ್ದರೂ ಅವನ ಕೂಡ ವೀರಶೈವರು ಸಮರಸಾಚರಣೆಯಿಂದ ಇರಬೇಕೆಂಬ ತತ್ವವು ಆಧಾರಪೂರ್ವಕವಾಗಿ ಹೇಳಲ್ಪಟ್ಟಿತ್ತು. ಇಂಥ ವಿವೇಚನಗಳು ಇದರಲ್ಲಿ ಇರುವದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಯಿತು. ಪ್ರಭುದೇವರ ವಚನವು ಈಗ ಪ್ರಸಿದ್ಧವಾಗಿಯೇ ಇದೆ. ಮೊದಲಿನ ಎರಡು ಗ್ರಂಥಗಳ ಟಿಪ್ಪಣೆಗಳು ನನ್ನ ಕಡೆಗೆ ಈಗಲೂ ಇವೆ. ಪ್ರಭುದೇವರ ಟೀಕಿನ ವಚನಗಳು ಒಂದು ಅಗಾಧವಾದ ಗ್ರಂಥವೆಂದು ನನಗೆ ತೋರಿತು. ಆದ್ದರಿಂದ ಮೊದಲಿನ ನಾಲ್ಕು ಸ್ಥಲಗಳನ್ನು ಕೂಡಲೇ ಬರೆದಿಟ್ಟೆನು. ಹೀಗೆ ಬರೆದಿದ್ದರ ಸಹಾಯದಿಂದಲೇ ನಾನು ೨೨ ವರ್ಷಗಳ ತರುವಾಯ ಶಿವಾನುಭವ ಪತ್ರಿಕೆಯಲ್ಲಿ ಪ್ರಭುದೇವರ ವಚನಗ್ರಂಥಗಳನ್ನು ಪ್ರಕಟಿಸಿದೆನು.

೧೯೦೩ ಮತ್ತು ೧೯೦೪ ಇಸ್ವಿಗಳಲ್ಲಿ ನಾನು ಕನ್ನಡ ಭಾಷೆಯನ್ನು ಐಚ್ಛಿಕ ವಿಷಯವಾಗಿಟ್ಟುಕೊಂಡು ಎಮ್. ಎ. ಅಭ್ಯಾಸವನ್ನು ಮಾಡಲು ತೊಡಗಿದೆನು. ಇದೇ ಕಾಲಕ್ಕೆ ನಾನು ಕಾವ್ಯಕಲಾನಿಧಿಯ ಚಂದಾದಾರನಾಗಿ ಅದರಲ್ಲಿ ಪ್ರಕಟವಾಗುತ್ತಿದ್ದ ರಾಮಾಶ್ವಮೇಧಂ ಮೊದಲಾದ ಕನ್ನಡ ಗ್ರಂಥಗಳ ಅಭ್ಯಾಸವನ್ನು ಮಾಡುತ್ತ ಬಂದೆನು. ಈ ಪತ್ರಿಕೆಯಲ್ಲಿ ಮೊದಲಿನಿಂದಲೂ ಅನೇಕ ವೀರಶೈವ ಗ್ರಂಥಗಳು ಸಹ ಪ್ರಕಟವಾಗುತ್ತಲೇ ಇದ್ದು ಅವುಗಳ ಪರಿಶೀಲನೆಮಾಡುತ್ತ ಬಂದೆನು. ಆದರೆ ಮುಂದೆ ನಾನು ಎಮ್. ಎ. ಅಭ್ಯಾಸವನ್ನು ಬಿಟ್ಟುಕೊಟ್ಟೆನು.

## ವಿಜಾಪುರ ಜಿಲ್ಹೆಯಲ್ಲಿ ನನ್ನ ಸಂಶೋಧನೆಗಳು

ನಾನು ೧೯೦೪ನೇ ಇಸ್ವಿಯಲ್ಲಿ ಎಲ್. ಎಲ್. ಬಿ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ವಿಜಾಪುರ ಪಟ್ಟಣದಲ್ಲಿ ವಕೀಲಿ ವ್ಯವಸಾಯುವನ್ನು ಪ್ರಾರಂಭಿಸಿದೆನು. ಈ ಪಟ್ಟಣಕ್ಕೆ ಬಂದಬಳಿಕ ನಾನು ೧೯೧೮ ಇಸ್ವಿಯವರೆಗೂ ನನ್ನ ವಾಙ್ಮಯ ಸಂಶೋಧನ ಕಾರ್ಯಗಳನ್ನು ಎಡೆಬಿಡದೆ ಸಾಗಿಸಿಯೇ ಇದ್ದೆನು. ಈ ಕಾಲದಲ್ಲಿ ನನ್ನ ವ್ಯವಸಾಯಕ್ಕೋಸ್ಕರ ನನಗೆ ಬೇರೆ ಬೇರೆ ಗ್ರಾಮಗಳಿಗೆ ಹೋಗಬೇಕಾಗುತ್ತಿತ್ತು. ಆಗ ನನಗೆ ಅನೇಕ ಪುರಾತನ ಗ್ರಂಥಗಳು ಉಪಲಬ್ಧವಾದವು. ಅವುಗಳಲ್ಲಿ ಮಹತ್ವವಾದವುಗಳನ್ನು ನಾನು ಹಣಕೊಟ್ಟು ಕೊಳ್ಳಬೇಕಾಗುತ್ತಿತ್ತು. ಈ ಗ್ರಂಥಗಳು ಅನೇಕ ವಿಧ ವಿಷಯಗಳುಳ್ಳವಾಗಿದ್ದವು. ಅವುಗಳನ್ನು ನಾನು ವಿಷಯಾನುಕ್ರಮವಾಗಿ ವರ್ಗೀಕರಣ ಮಾಡಿ ಅವುಗಳ ಪಟ್ಟಿಯನ್ನು ಮಾಡಿಟ್ಟುಕೊಂಡಿದ್ದೇನೆ. ಈ ಗ್ರಂಥಗಳಲ್ಲಿ ಈಗ ಒಟ್ಟು ೩೧ ವರ್ಗಗಳಾಗಿದ್ದು ಅವುಗಳ ಒಟ್ಟು ಗ್ರಂಥ ಸಂಖ್ಯೆ ೯೫೧ ಇದೆ. ಇವು ಒಟ್ಟು ೩೨೭ ಹೊತ್ತಿಗೆಗಳ ಕಟ್ಟುಗಳಲ್ಲಿ ಸಮಾವೇಶವಾಗಿವೆ. ಅಂದರೆ ಒಂದೊಂದು ಗ್ರಂಥದ ಕಟ್ಟಿನಲ್ಲಿ ಬೇರೆ ಬೇರೆ ಸ್ವತಂತ್ರ ಗ್ರಂಥಗಳಿರುತ್ತವೆ. ಈ ತರದ ಗ್ರಂಥಗಳ ಸಮುದಾಯವು ನನ್ನ ಗ್ರಂಥ ಸಂಶೋಧನೆಯ ಕಾರ್ಯದಲ್ಲಿ ನನಗೆ ಬಹಳ ಸಹಾಯವಾಗುತ್ತ ಬಂದಿದೆ. ಆದ್ದರಿಂದ ಗ್ರಂಥ ಸಂಶೋಧನಕ್ಕೋಸ್ಕರ ನಾನು ಬೇರೆ ಬೇರೆ ಗ್ರಾಮಗಳಿಗೆ ಪ್ರವಾಸ ಮಾಡುವ ಪ್ರಸಂಗಗಳು ಬಹುಶಃ ನನಗೆ ಈಚೆಗೆ ಉಂಟಾಗಿರುವದಿಲ್ಲ. ಆದರೆ ನನಗೆ ಅವಶ್ಯವಿದ್ದಾಗ ಮಾತ್ರ ಕೈ. ವಾ. ಹಾನಗಲ್ಲ ಕುಮಾರಸ್ವಾಮಿಗಳವರು ಶಿವಯೋಗಮಂದಿರದಲ್ಲಿ ಸಂಗ್ರಹಿಸಿದ್ದ ಪುಸ್ತಕಾಲಯದಲ್ಲಿಯ ಪುಸ್ತಕಗಳನ್ನು ನಾನು ದೊರಕಿಸಿಕೊಳ್ಳುತ್ತ ಬಂದೆನು. ಈ ಪ್ರಕಾರ ನನ್ನ ವಾಙ್ಮಯ ಸಂಶೋಧನ ಕಾರ್ಯಗಳು ಈಕಾಲದಲ್ಲಿ ನಡೆಯುತ್ತ ಬಂದವು.

## ವೀರಶೈವ ಸಮಾಜದಲ್ಲಿಯ ಮತಭೇದಗಳು

ಈ ಕಾಲದಲ್ಲಿ ವೀರಶೈವ ವಾಙ್ಮಯ ಸಂಶೋಧನ ಮಾಡುವದೆಂದರೆ ಒಂದು ಅಪಾರವಾದ ಸಮುದ್ರದಲ್ಲಿ ಬಿರುಗಾಳಿಗಳು ಬೀಸುತ್ತಿರಲು ಹಡಗದ

ನಾವಿಕನು ಅಷ್ಟಗಳಲ್ಲಿ ಹೋಕಾಯಂತ್ರದ ಸಹಾಯವಿಲ್ಲದೆ ಪ್ರವಾಸ ಮಾಡಿದಂತೆಯೇ ಇದೆ ಎಂದು ನನಗೆ ತೋರಿತು. ಆಗ ವೀರಶೈವ ವಿದ್ಯಾವಂತರೂ, ಶಾಸ್ತ್ರಿಗಳೂ, ಪಂಡಿತರೂ ತಮಗೆ ತೋರಿದತ್ತ, ಸಮಾಜವೆಂಬ ಈ ಹಡಗವನ್ನು ಸಿಕ್ಕಲ್ಲಿ ಎಳೆದುಕೊಂಡು ಹೋಗುತ್ತಾ ಇದ್ದಾರೆಂದು ನನಗೆ ಭಾಸವಾಗುತ್ತಿತ್ತು. ಅವರಲ್ಲಿ ಯಾರಲ್ಲಿಯೂ ಪರಸ್ಪರ ಮೇಳವಿರಲಿಲ್ಲ.

ಒಬ್ಬ ವಿದ್ಯಾವಂತ ಮಹನೀಯರು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪ್ರಭುತ್ವವನ್ನು ಸಂಪಾದನೆ ಮಾಡಿದವರಾಗಿದ್ದರು. ಅವರು ಬೇರೆ ಬೇರೆ ಭಾಷ್ಯಕಾರರ ಭಾಷ್ಯಗಳು ವಿದ್ಯಾರಣ್ಯರ ಗ್ರಂಥಗಳು ಉಪನಿಷತ್ತುಗಳು ಇವೇ ಮೊದಲಾದ ಗ್ರಂಥಗಳನ್ನು ಚೆನ್ನಾಗಿ ಪರಿಶೀಲಿಸಿದವರಾಗಿದ್ದರು. ಆದರೆ ಅವರು ವೀರಶೈವವನ್ನು ಅದ್ವೈತಿಗಳ ಮಾಯಾವಾದಕ್ಕೆ ತಗಲಿಸಿ ಬಿಡುವರು. ಆದರೂ ಮುಂದೆ ಅವರು ಈ ಶಾಸ್ತ್ರಗ್ರಂಥಗಳನ್ನು ಬಿಟ್ಟು ಶಿವಶರಣರ ವಚನಗಳನ್ನು ಅನುಸರಿಸುವವರಾದರು

ಸಮಾಜ ಸುಧಾರಣೆಯ ವಿಷಯವಾಗಿ ಮನಮುಟ್ಟಿ ಪ್ರಯತ್ನ ಮಾಡುತ್ತಿದ್ದ ಅತ್ಯಂತ ಗಣ್ಯರಾದ ಮಹಾಸ್ವಾಮಿಗಳೊಬ್ಬರು ವೀರಶೈವರಲ್ಲಿ ಯೋಗಮಾರ್ಗಿಗಳ ಸಂಖ್ಯೆಯನ್ನು ಬೆಳಸಬೇಕು ಮತ್ತು ಅವರಲ್ಲಿ ಒಬ್ಬ ಸಿದ್ಧಪುರುಷನಾದರೆ ತೀರಿತು, ಅವನಿಂದ ವೀರಶೈವ ಸಮಾಜವು ಉದ್ಧಾರವಾಗುವದೆಂದು ಭಾವಿಸಿ ಒಂದು ಯೋಗಶಾಲೆಯನ್ನು ಸ್ಥಾಪಿಸಲು ಉದ್ಯುಕ್ತರಾಗಿದ್ದರು.

ಬೇರೆ ಕೆಲವು ವೀರಶೈವ ಪ್ರಮುಖರೂ ಮಹಾಸ್ವಾಮಿಗಳೂ ಕೂಡಿಕೊಂಡು ಬ್ರಾಹ್ಮಣ ಸಂಸ್ಕೃತಿಯನ್ನು ಅನುಸರಿಸಿ ಆಯಾ ಗ್ರಾಮಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನು ನಿರ್ಮಿಸುವವರಲ್ಲಿ ತೊಡಗಿದ್ದರು. ಇಂಥ ಪಾಠಶಾಲೆಗಳು ಸೊಲ್ಲಾಪುರ, ಯಾದಗಿರಿ, ಬಾಗಲಕೋಟ, ಬೆಂಗಳೂರು ಮುಂತಾದ ಕಡೆಗೆ ಇದ್ದವು. ಈ ಸಂಸ್ಥೆಗಳ ಸಲುವಾಗಿ ಅಲ್ಲಲ್ಲಿಯ ವೀರಶೈವ ಸಮಾಜದವರಿಂದ ಬಹಳ ಹಣವು ಖರ್ಚಾಗುತ್ತಲಿತ್ತು. ಇವುಗಳಲ್ಲಿ

ವ್ಯಾಕರಣ, ಕಾವ್ಯ, ನ್ಯಾಯ ಮುಂತಾದ ವಿಷಯಗಳ ಅಭ್ಯಾಸವು ನಡಿಯುತ್ತಾ ಇತ್ತು.

ಇವುಗಳಲ್ಲದೆ ವೀರಶೈವರಲ್ಲಿರುವ ಒಳಜಾತಿಗಳಲ್ಲಿ ಯಾವ ಜಾತಿಗಳು ಉಚ್ಚತರದವು ಎಂಬುದರ ಬಗ್ಗೆ ಪ್ರಖರವಾದ ಕಲಹಗಳು ಆಗಿಂದಾಗ್ಗೆ ಏಳುತ್ತಲೇ ಇದ್ದವು. ಇವುಗಳಲ್ಲಿ ಕುರುಹಿನಶೆಟ್ಟಿಗಳು, ಬಣಜಿಗರು, ಸಾದರು, ನೇಯ್ಗೆಯವರು, ಗಾಣಿಗರು, ಪಂಚಮಸಾಲಿಗಳು ಈ ಪಂಗಡದವರು ಮುಖ್ಯ ಭಾಗವನ್ನು ವಹಿಸಿದವರಾಗಿದ್ದರು ಮೈಸೂರು ಸೀಮೆಯಲ್ಲಿ ಸಹ ಈ ಬಗೆಯ ದೃಶ್ಯಗಳು ಎಲ್ಲ ಕಡೆಗೂ ಇದ್ದುದು ಕಂಡು ಬರುತ್ತಿತ್ತು.

ಅಲ್ಲದೆ ಕೆಲವೊಂದು ಪಂಗಡದ ಪ್ರಮುಖರೊಬ್ಬರು ಬೇರೆ ಬೇರೆ ಪಂಗಡಗಳಿಗೆ ಹೊಂದಿದವರಿಗೆ ಜಂಗಮ ದೀಕ್ಷೆಯನ್ನು ಕೊಟ್ಟು ಇಂಥವರಿಗೆ ಮಠಗಳನ್ನು ಅಲ್ಲಲ್ಲಿ ಸ್ಥಾಪಿಸುವದರಲ್ಲಿ ತೊಡಗಿದವರಾಗಿದ್ದರು. ಅಂದರೆ ತಮ್ಮ ಪಂಗಡದವರಲ್ಲಿ ಯಾವನಾದರೊಬ್ಬನಿಗೆ ಜಂಗಮದೀಕ್ಷೆ ಕೊಟ್ಟಲ್ಲಿ ಆ ಪಂಗಡಕ್ಕೆ ಶ್ರೇಷ್ಠ ಸ್ಥಾನವು ಬಂದಿತೆಂದು ಅವರ ತಿಳಿವಳಿಕೆ ಇತ್ತು.

ಇನ್ನೊಬ್ಬ ಸ್ವಾಮಿಯವರು ಅಲ್ಲಮಪ್ರಭುವಿನ ಹೆಸರಿನಿಂದ ಒಂದು ಸಮಾಜವನ್ನು ಸ್ಥಾಪಿಸಿ ವೀರಶೈವರಲ್ಲಿರುವ ಈಗಿನ ಪಂಗಡಗಳನ್ನು ಮುರಿದು ಹಾಕುವವರಲ್ಲಿ ತೊಡಗಿದವರಾಗಿದ್ದರು. ಇವರು ಜಂಗಮರಿಂದಲೇ ಸಮಾಜದ ಅವನತಿಯಾಗಿದೆ ಎಂದು ಭಾವಿಸಿ ಮಠಾಧಿಕಾರಿಗಳನ್ನು ಸಂಪೂರ್ಣವಾಗಿ ಬಹಿಷ್ಕರಿಸುವವರಲ್ಲಿ ತೊಡಗಿದವರಾಗಿದ್ದರು.

ಬೇರೊಂದು ಪಂಗಡದವರು ವೀರಶೈವರಲ್ಲಿ ಚಾತುರ್ವರ್ಣಗಳಿವೆ ಎಂದು ಭಾವಿಸಿ ಬ್ರಾಹ್ಮಣ ಪದ್ಧತಿಗಳನ್ನು ಸಮಾಜದಲ್ಲಿ ಉಂಟುಮಾಡಬೇಕೆಂಬ ಧ್ಯೇಯವುಳ್ಳವರಾಗಿದ್ದರು. ಅವರು ಉಪನಯನವನ್ನು ಮಾಡುವವರ ಬದಲು ಎಲ್ಲರೂ ದೀಕ್ಷಾವಂತರಾಗಬೇಕು, ಶಿಖಾಯಜ್ಞೋಪವೀತಗಳನ್ನು

ಎಲ್ಲರೂ ಧರಿಸಬೇಕೆಂಬ ಅಭಿಪ್ರಾಯವುಳ್ಳವರಾಗಿದ್ದರು. ಇವರಿಗೆ ಒಂದು ಗಡೆ ಪಂಚಾಚಾರ್ಯ ಪಂಗಡದವರೆಂಬ ಹೆಸರು ಇಡಲಾಗುತ್ತಿತ್ತು. ಇವರಿಗೆ ಪ್ರತಿಸ್ಪರ್ಧಿಗಳಾಗಿ ವಿರಕ್ತಾಶ್ರಮಿಗಳು ಆಚರಿಸುತ್ತ ಇದ್ದರು. ಈ ಉಭಯತರ ಕಲಹಗಳಲ್ಲಿ ಕೆಲವು ಗ್ರಾಮಗಳು ವಿರಕ್ತರ ಪಕ್ಷವನ್ನೂ ಬೇರೆ ಕೆಲವು ಗ್ರಾಮಗಳು ಆಚಾರ್ಯ ಪಕ್ಷವನ್ನೂ ವಹಿಸುವಂಥವಾಗಿದ್ದವು. ಇವರ ವ್ಯಾಜ್ಯಗಳು ಕೋರ್ಟುಕಚೇರಿಗಳಿಗೂ ಸಹ ಹೋದದ್ದು ಕಂಡು ಬರುತ್ತದೆ.

ಇವುಗಳಲ್ಲದೆ ಅಡ್ಡಪಲ್ಲಕ್ಕಿ ಉತ್ಸವಗಳ ಮೂಲಕ ಉತ್ತರ ಕರ್ನಾಟಕ ಮತ್ತು ಮೈಸೂರು ಪ್ರಾಂತಗಳಲ್ಲಿ ವೀರಶೈವರು ಮತ್ತು ಬ್ರಾಹ್ಮಣರ ನಡುವೆ ಬಹು ಕಠಿಣವಾದ ಹೋರಾಟಗಳು ನಡೆದುಬರುತ್ತ ಇದ್ದವು.

ಇದೇ ಪ್ರಕಾರ ಪರಳಿ, ಬನವಾಸಿ ಮುಂತಾದ ಪ್ರಸಿದ್ಧ ಕ್ಷೇತ್ರಗಳಲ್ಲಿ ಬ್ರಾಹ್ಮಣ ಮತ್ತು ವೀರಶೈವರಲ್ಲಿ ಉಗ್ರತರವಾದ ಕದನಗಳು ಏಸಗುತ್ತಿದ್ದವು. ಇವುಗಳು ನ್ಯಾಯಕೋರ್ಟುಗಳಲ್ಲಿ ವಿಚಾರಣೆಗೆ ಬಂದಾಗ್ಗ ಉಭಯ ಪಕ್ಷಗಳ ವಿದ್ವಾಂಸರು ತಮ್ಮ ತಮ್ಮ ಧರ್ಮಗಳು ಹೆಚ್ಚಿನವು, ಬಹು ಪುರಾತನ ಕಾಲದವು ಎಂಬುದನ್ನು ಸಮರ್ಥಿಸುತ್ತ ಶಾಸ್ತ್ರ ಗ್ರಂಥಗಳನ್ನು ಮುಂದೆ ಮಾಡಿ ಹೋರಾಡುತ್ತಿದ್ದದ್ದು ಕಂಡುಬರುತ್ತಿತ್ತು.

ಹೀಗೆ ಅನೇಕ ವಿಧವಾದ ಧಾರ್ಮಿಕ ವಿವಾದಗಳೂ ವ್ಯಾಜ್ಯಗಳೂ ಹೋರಾಟಗಳೂ ವೀರಶೈವ ಸಮಾಜದಲ್ಲಿರುವ ಉಪಪಂಗಡಗಳಲ್ಲಿ ಪರಸ್ಪರವಾಗಿ ಅಥವಾ ಪರಧರ್ಮೀಯರೊಡನೆ ಯಾವಾಗಲೂ ನಡೆಯುತ್ತ ಇದ್ದದ್ದು ಕಂಡುಬರುತ್ತದೆ.

ಈ ತರದ ಕೋಲಾಹಲಗಳು ವೀರಶೈವ ಧರ್ಮದ ಸಲುವಾಗಿ ೧೯೦೪ರಿಂದ ೧೯೨೦ರ ಮಧ್ಯದಲ್ಲಿ ಅನೇಕ ಕಡೆಗೆ ಏಳುತ್ತಿದ್ದವು. ಅವುಗಳಲ್ಲಿ ವೀರಶೈವ ಧರ್ಮದ ನಿಜತತ್ವಗಳಾವವು ಎಂಬ ವಿಷಯದ ಬಗ್ಗೆ ವಾದ

ವಿವಾದಗಳುಂಟಾಗಿ ಅವುಗಳಲ್ಲಿ ಯಾವ ತತ್ವಗಳು ಸತ್ಯವಾದವು, ಯಾವವು ಅಸತ್ಯವಾದವುಗಳು ಎಂಬುದನ್ನು ತಿಳಿಯುವದೇ ಕಠಿಣವಾಗುತ್ತಿತ್ತು.

## ಶಿವಶರಣರ ವಾಙ್ಮಯ ಸಂಶೋಧನ

ಇಂಥ ಸ್ಥಿತಿಯಲ್ಲಿ ವಾಙ್ಮಯ ಸಂಶೋಧನ ಕಾರ್ಯಗಳನ್ನು ನಡಿಸುವದು ಬಹು ದುಸ್ತರವಾದದ್ದೆಂಬುದು ಸ್ಪಷ್ಟವಿದೆ. ಈ ಕಾಲದಲ್ಲಿ ವೀರಶೈವ ಧರ್ಮದ ನಿಜಸ್ಥಿತಿ ಯಾವುದೆಂಬುವನ್ನು ಕಂಡುಹಿಡಿಯಬೇಕೆಂಬುದೇ ನನ್ನ ಮುಖ್ಯ ಧ್ಯೇಯವಾಯಿತು. ಇದರಲ್ಲಿ ಬಸವೇಶ್ವರನ ಕಾಲದಲ್ಲಿ ಯಾವ ತತ್ವಗಳು ರೂಢವಾಗಿದ್ದವು ಎಂಬುದನ್ನು ಕಂಡುಹಿಡಿಯುವದು ಮಹತ್ವದ್ದೆಂದು ನನಗೆ ತೋರಹತ್ತಿತು. ಇವನ ಕಾಲದಲ್ಲಿಯೇ ಶಿವಶರಣರ ಧಾರ್ಮಿಕ ತತ್ವಗಳು ಉನ್ನತ ಸ್ಥಾನವನ್ನು ಹೊಂದಿದ್ದವು. ಅವರ ತತ್ವಗಳು ಎಲ್ಲ ಸಮಾಜಗಳಲ್ಲಿ ಪ್ರಸಾರ ಹೊಂದಿದ್ದವು. ಆದ್ದರಿಂದ ಈ ಕಾಲಕ್ಕಿದ್ದ ನಿಜಸ್ಥಿತಿಯ ಸಂಶೋಧನೆಯು ಅವಶ್ಯವೆಂಬ ತಿಳಿವಳಿಕೆಯು ನನ್ನಲ್ಲಿ ಉಂಟಾಯಿತು.

ಈ ದೃಷ್ಟಿಯನ್ನು ಇಟ್ಟುಕೊಂಡು ನಾನು ಪುರಾತನ ಗ್ರಂಥಗಳ ಸಂಶೋಧನೆ ಮಾಡಬೇಕೆಂದೆಣಿಸಿ ಅವುಗಳನ್ನು ಸಂಗ್ರಹಿಸುತ್ತ ಬಂದೆನು. ಹೀಗೆ ಸಂಗ್ರಹವಾದ ಗ್ರಂಥ ಸಂಖ್ಯೆಯು ನನ್ನಲ್ಲಿ ಒಂದು ಸಾವಿರದ ವರೆಗೆ ಹೋಯಿತು. ಅವುಗಳ ಪರಿಶೀಲನೆ ಮಾಡುವಲ್ಲಿ ನನಗೆ ಬಸವಾದಿ ಪ್ರಮಥರು ಆಚರಿಸಿದ ಆಚರಣೆಗಳೇ ಮಹತ್ತರವಾದವುಗಳು, ಅವುಗಳ ಮೂಲಕವೇ ಶರಣರ ಪ್ರಭಾವವು ದೇಶದಲ್ಲಿ ಬೆಳೆಯಿತು ಎಂದು ತೋರಹತ್ತಿತು. ಆಗ ಈ ಪ್ರಮಥರ ತತ್ವಗಳನ್ನು ಕಂಡುಹಿಡಿಯುವದು ನನಗೆ ಬಹು ಅವಶ್ಯವೆನಿಸಿತು. ಈ ದೃಷ್ಟಿಯನ್ನಿಟ್ಟುಕೊಂಡು ನಾನು ಈ ಕಾಲದಲ್ಲಿ ನನ್ನ ಸಂಶೋಧನ ಕಾರ್ಯಗಳನ್ನು ನಡೆಸುತ್ತ ಬಂದೆನು.

## ಸಂಶೋಧನ ಕಾರ್ಯದಲ್ಲಿ ಗ್ರಂಥ ಸಂಗ್ರಹಾಲಯಗಳ ಆವಶ್ಯಕತೆ

ವಾಙ್ಮಯ ಸಂಶೋಧನ ಕಾರ್ಯಗಳು ಪ್ರಕೃತ ಪರಿಸ್ಥಿತಿಯಲ್ಲಿ ಇತರ ಸಂಶೋಧನ ಕಾರ್ಯಗಳಂತೆ ಒಂದೇ ಸವನೆ ನಡೆಯುವದು ಕಠಿಣವೆಂದು

ನನಗೆ ತೋರುತ್ತದೆ. ವೀರಶೈವ ಪುರಾತನ ವಾಙ್ಮಯವು ಅಪಾರವಾದದ್ದಿದ್ದರೂ ಅದರ ಗ್ರಂಥಸಂಗ್ರಹ ಕಾರ್ಯಗಳು ವ್ಯವಸ್ಥಿತವಾಗಿ ಎಲ್ಲಿಯೂ ನಡೆದಿರುವದಿಲ್ಲ. ಆದ್ದರಿಂದ ಈ ವಾಙ್ಮಯದಲ್ಲಿಯ ನಾಕಷ್ಟು ಗ್ರಂಥಗಳು ನಮ್ಮ ಕೈಗೆ ಬಿದ್ದಿರುವದಿಲ್ಲವಾದ್ದರಿಂದ ಗ್ರಂಥಗಳನ್ನು ಅವಲಂಬಿಸಿ ಮಾಡುವ ಇಂಥ ಕಾರ್ಯಗಳು ಒಂದೇ ಸವನೆ ನಡೆಯುವದು ಶಕ್ಯವಿಲ್ಲ. ಧಾರವಾಡ, ವಿಜಾಪುರ, ಬೆಳಗಾವ ಈ ಪಟ್ಟಣಗಳಲ್ಲಿ ಪುರಾತನ ಗ್ರಂಥಗಳುಳ್ಳ ಪುಸ್ತಕಾಲಯಗಳು ಇರದ್ದರಿಂದ ನಮ್ಮಲ್ಲಿಯ ಸಂಶೋಧನ ಕಾರ್ಯಗಳು ಕುಂಠಿತವಾಗುತ್ತವೆ. ಆದರೆ ನಾನು ೧೯೨೦ರವರೆಗೆ ಗ್ರಂಥ ಸಂಗ್ರಹ ಕಾರ್ಯವನ್ನು ಯಾವಾಗಲೂ ಮಾಡುತ್ತ ಬಂದಿದ್ದರಿಂದ ಈ ವರ್ಷಗಳ ತರುವಾಯ ನಾನು ಪ್ರಾರಂಭ ಮಾಡಿದ ಶಿವಾನುಭವ ಪತ್ರಿಕೆಯ ಮೂಲಕ ನನ್ನ ಸಂಶೋಧನ ಕಾರ್ಯಗಳನ್ನು ಒಂದೇ ಸವನೆ ನಡಿಸಲಿಕ್ಕೆ ಸಾಧ್ಯವಾಗಿರುತ್ತದೆ. ಆದರೆ ಅದಕ್ಕೂ ಪೂರ್ವದಲ್ಲಿ ಈ ಕಾರ್ಯಗಳನ್ನು ನಾನು ಕೈಕೊಂಡು ನಡಿಸುವದು ಶಕ್ಯವಿರಲಿಲ್ಲ.

### ಸಂಶೋಧ ಕಾರ್ಯಗಳಲ್ಲಿ ಯಾವಾಗಲೂ ನಿರತನಾಗಿರುವದು

ಸಂಶೋಧನ ಕಾರ್ಯದಲ್ಲಿ ನಾವು ಬೇರೆ ಇತರ ಕಾರ್ಯಗಳನ್ನು ಕೈಕೊಂಡಿದ್ದಾದರೆ, ಈ ಸಂಶೋಧನ ಕಾರ್ಯಗಳು ಒಂದೇ ಸವನೆ ನಡೆಯುವದು ಶಕ್ಯವಿಲ್ಲ. ನಾನು ೧೯೦೪ರಿಂದ ೧೯೨೦ರವರೆಗೂ ಅನೇಕ ಸಾರ್ವಜನಿಕ ಸಂಸ್ಥೆಗಳಲ್ಲಿ ತೊಡಕಿಕೊಂಡವನಾಗಿದ್ದೆನು. ನಾನು ಅನೇಕ ವರ್ಷ ಮುನಿಸಿಪಾಲಿಟಿಯ ಚೇರಮನ್ನ ಮತ್ತು ವ್ಹಾಯಿಸ ಪ್ರೆಸಿಡೆಂಟ ನಾಗಿದ್ದೆನು. ಅನೇಕ ಸಹಕಾರಿ ಸಂಘಗಳ ಕಾರ್ಯಗಳಲ್ಲಿ ಮುಖ್ಯ ಭಾಗವನ್ನು ವಹಿಸಿದವನಾಗಿದ್ದೆನು. ಜಿಲ್ಹಾ ಒಕ್ಕಲುತನ ಸಂಘದ ಕಾರ್ಯದರ್ಶಿಯಾಗಿ ಅದರ ಕಾರ್ಯಗಳಲ್ಲಿ ತೊಡಗಿದ್ದೆನು. ವಿಜಾಪುರದಲ್ಲಿ ವೀರಶೈವ ವಿದ್ಯಾವರ್ಧಕ ಸಂಸ್ಥೆಯನ್ನು ಸ್ಥಾಪಿಸಿ ಒಂದು ಹಾಯಸ್ಕೂಲನ್ನು ನಡಿಸುತ್ತ ಬಂದೆನು. ಯುದ್ಧ ಪ್ರಚಾರ ಕಾರ್ಯಗಳಲ್ಲಿಯೂ ತೊಡಗಿದ್ದೆನು. ಮುಂದೆ ನಾನು ಮುಂಬಯಿ ಪ್ರಾಂತಿಕ ಕೌನ್ಸಿಲಿನ ಸಭಾಸದನಾಗಿದ್ದೆನು. ಹೀಗೆ ನಾನು ಅನೇಕ ಕಾರ್ಯರಂಗಗಳಲ್ಲಿ ತೊಡಗಿರುತ್ತಿದ್ದುದರಿಂದ ನನ್ನ ವಾಙ್ಮಯ

ಸಂಶೋಧನ ಕಾರ್ಯಗಳು ಈ ಕಾಲದಲ್ಲಿ ಒಮ್ಮೆ ಹೆಚ್ಚು ಪ್ರಮಾಣದಿಂದ ಮತ್ತೊಮ್ಮೆ ಕಡಿಮೆ ಪ್ರಮಾಣದಿಂದ ನಡಿಯುತ್ತ ಬಂದವು. ಆದರೂ ಇವುಗಳು ಬೇರೆ ಚಟುವಟಿಕೆಗಳಿಗಿಂತಲೂ ಮಿಗಿಲಾದವುಗಳು, ಶಾಶ್ವತವಾದವುಗಳು, ಸುಧಾರಣೆಗೆ ಸಹಾಯಕವಾದವುಗಳು ಎಂಬ ತಿಳುವಳಿಕೆಯು ನನ್ನಲ್ಲಿ ಉಂಟಾಗಿದ್ದರಿಂದ ನಾನು ಈ ವಾಙ್ಮಯ ಕಾರ್ಯಗಳನ್ನು ಬಿಟ್ಟೂ ಬಿಡದೆ ಮಾಡುತ್ತಲೇ ಬಂದೆನು.

### ಕರ್ನಾಟಕ ಇತಿಹಾಸದ ಪರಿಶೀಲನೆ

ನಾನು ಗ್ರಂಥಸಂಗ್ರಹ ಮಾಡುತ್ತಿರುವಾಗ ಅವುಗಳ ಪರಿಶೀಲನೆಯನ್ನು ಮಾಡುತ್ತ ಅವುಗಳಲ್ಲಿಯ ಮುಖ್ಯ ವಿಷಯಗಳ ಟಿಪ್ಪಣೆಗಳನ್ನು ಮಾಡುತ್ತ ಹೋಗುವ ನನ್ನ ಕಾರ್ಯವಾದರೂ ಒಂದೇ ಸಮನೆ ನಡೆಯುತ್ತ ಬಂದಿತ್ತು. ಇದಲ್ಲದೆ ವಾಙ್ಮಯಕ್ಕೂ ನಾಡಿನ ಇತಿಹಾಸಕ್ಕೂ ಯಾವಾಗಲೂ ನಿಕಟ ಸಂಬಂಧವಿರುತ್ತದೆ. ನಾಡಿನ ರಾಜಕೀಯ ಪರಿಸ್ಥಿತಿಯ ಮೇಲೆ ವಾಙ್ಮಯದ ಅಭಿವೃದ್ಧಿಯು ಬಹಳ ಅವಲಂಬಿಸಿರುತ್ತದೆ. ಆದ್ದರಿಂದ ವೀರಶೈವ ವಾಙ್ಮಯ ಸಂಶೋಧಕರು ಕರ್ನಾಟಕದ ಪ್ರಾಚೀನ ಇತಿಹಾಸವನ್ನು ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸುವದು ಬಹಳ ಅಗತ್ಯವಿರುತ್ತದೆ. ನಾನು ಕಾಲೇಜಿನಲ್ಲಿ ಇದ್ದಾಗ್ಗೆ ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಇದ್ದ ಇತಿಹಾಸ ಗ್ರಂಥಗಳು ನನಗೆ ನನ್ನ ತಂದೆಯವರ ಮುಖಾಂತರ ಯಾವಾಗಲೂ ಉಪಲಬ್ಧವಾಗುತ್ತಿದ್ದವು. ಈ ಸಂಸ್ಥೆಯಲ್ಲಿ ಇದ್ದ ಎಪಿಗ್ರಾಫಿಕಾ ಕರ್ನಾಟಿಕಾ ಇದರಲ್ಲಿಯ ಗ್ರಂಥಗಳೂ ಲೂಯಿ ರಾಯಿಸ, ಫ್ಲೀಟ ಮೊದಲಾದ ಸಂಶೋಧಕರ ಗ್ರಂಥಗಳೂ ಗ್ಯಾಝಿಟಿಯರದ ಗ್ರಂಥಗಳೂ ನನ್ನ ಸಂಶೋಧನ ಕಾರ್ಯದಲ್ಲಿ ಬಹಳ ಉಪಯೋಗವುಳ್ಳವಾದವು. ಈ ಎಲ್ಲ ಗ್ರಂಥಗಳಲ್ಲಿಯ ವಿಷಯಗಳ ಟಿಪ್ಪಣಿಗಳು ಈಗಲೂ ಕೂಡ ನನಗೆ ಬಹಳ ಉಪಯುಕ್ತವಾಗಿರುತ್ತವೆ.

### ವೀರಶೈವ ಸಂಸ್ಕೃತಿಯ ಸ್ವರೂಪ

ಈ ಬಗೆಯಾಗಿ ನಾನು ಸಂಶೋಧನ ಕಾರ್ಯ ಮಾಡುತ್ತಹೋದ ಹಾಗೆ ವೀರಶೈವಸಂಸ್ಕೃತಿಯು ಕರ್ನಾಟಕದಲ್ಲಿ ಬಹಳ ಹೆಚ್ಚಿನ ತರಗ

ತಿಯದೆಂಬ ತಿಳಿವಳಿಕೆಯು ಆಗಹತ್ತಿತು. ಮುಖ್ಯವಾಗಿ ಶಿವಶರಣರ ಧರ್ಮವು ಕೆಲವೊಂದು ಪಂಗಡದವರ ಧರ್ಮವಾಗಿರದೆ ಅದು ಕರ್ನಾಟಕದ ಜನತೆಯ ಸಾಮಾನ್ಯ ಧರ್ಮವೆಂದು ನನಗೆ ತೋರಿಬರಹತ್ತಿತು.

## ನೆರೆನಾಡುಗಳ ಸಂಸ್ಕೃತಿಗಳ ಪರಿಶೀಲನೆ

ವೀರಶೈವ ವಾಙ್ಮಯ ಸಂಶೋಧನೆಯಲ್ಲಿ ೧೨ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಆಗಿಹೋದ ಶಿವಶರಣರ ವಾಙ್ಮಯ ಮಾತ್ರವಲ್ಲದೆ ನಮ್ಮ ನೆರೆ ಪ್ರಾಂತಗಳಾದ ಮಹಾರಾಷ್ಟ್ರ, ಆಂಧ್ರ, ತಮಿಳು ಈ ಮೂರೂ ನಾಡುಗಳ ಸಂಸ್ಕೃತಿಯ ಅಭ್ಯಾಸವನ್ನು ಸಹ ಮಾಡುವದು ಬಹು ಅವಶ್ಯವೆನಿಸುತ್ತಿತ್ತು. ಇದಲ್ಲದೆ ಪಾಶುಪತಮತ, ಶಾಕ್ತಮತ, ಕಾಶ್ಮೀರದ ತ್ರಿಕಧರ್ಮ ಇವುಗಳಿಗೆ ಸಹ ವೀರಶೈವ ಧರ್ಮವು ಸಂಬಂಧಪಡುತ್ತದೆ. ಹಾಗೆಯೇ ಅದು ಶಿವಾಗಮಗಳಿಗೂ ಸಂಬಂಧಿಸಿರುತ್ತದೆ. ಈ ಎಲ್ಲ ವಾಙ್ಮಯಗಳನ್ನು ನಾವು ಪರಿಶೀಲಿಸುವದು ಅವಶ್ಯವೆಂದು ನನಗೆ ಯಾವಾಗಲೂ ತೋರಿಬರುತ್ತಿತ್ತು. ಆದರೆ ನಾನು ನನ್ನ ಲಕ್ಷ್ಯವನ್ನು ಈ ವಾಙ್ಮಯಗಳ ಕಡೆಗೆ ಹೋಗಗೊಟ್ಟಿದ್ದರೆ ನನ್ನಿಂದ ಯಾವ ಕಾರ್ಯವೂ ಆಗುತ್ತಿದ್ದಿಲ್ಲ. ನಾನು ಕೈಕೊಂಡಿರುವ ಸಂಶೋಧನಗಳು ಈ ದೃಷ್ಟಿಯಿಂದ ಅಪೂರ್ಣವಾದವುಗಳೆಂದು ನನಗೆ ಕಂಡು ಬರುತ್ತಿದ್ದರೂ ನಾನು ಕೆಲವೊಂದು ವಾಙ್ಮಯ ಕ್ಷೇತ್ರವನ್ನು ನನ್ನೆದುರಿಗೆ ಇಟ್ಟುಕೊಂಡಿದ್ದರಿಂದ ಇದನ್ನು ಬಿಟ್ಟು ನಾನು ಇತರ ಕಾರ್ಯಗಳಲ್ಲಿ ತೊಡಕಿಕೊಂಡಿರುವದಿಲ್ಲ. ಹೀಗೆ ನಾನು ನಡಿಸಿದ ವೀರಶೈವ ವಾಙ್ಮಯ ಸಂಶೋಧನ ಕಾರ್ಯಗಳು ಅಪೂರ್ಣವಾಗಿವೆಯೆಂಬ ತಿಳಿವಳಿಕೆಯು ನನಗೆ ಪೂರ್ಣವಾಗಿದ್ದರೂ ಬೇರೆ ಸಂಶೋಧಕರ ಲಕ್ಷ್ಯವನ್ನು ಈ ಪರಿಸ್ಥಿತಿಗೆ ಎಳೆಯುವ ಉದ್ದಿಶ್ಯವಾಗಿ ಮಾತ್ರ ನಾನು ಈ ಸಂಗತಿಗಳನ್ನು ಇಲ್ಲಿ ಉಲ್ಲೇಖಿಸುತ್ತಾ ಇದ್ದೇನೆ.

## ಸಂಶೋಧಿಸಿದ ವಿಷಯಗಳ ಅವತರಣಗಳ ಆವಶ್ಯಕತೆ

ಈ ಅವಧಿಯಲ್ಲಿ ನನ್ನ ದೃಷ್ಟಿಗೆ ಬಿದ್ದ ಗ್ರಂಥಗಳನ್ನು ಪರಿಶೀಲಿಸುತ್ತ ಅವುಗಳೊಳಗಿನ ಮಹತ್ವದ ಭಾಗಗಳ ಅವತರಣಗಳನ್ನು ಮಾಡುತ್ತ ಅಥವಾ

ಅವುಗಳಲ್ಲಿರುವ ವಿಚಾರಗಳ ಟಿಪ್ಪಣೆಗಳನ್ನು ಮಾಡುತ್ತ ಈ ಕಾರ್ಯವನ್ನು ಸಾಗಿಸುತ್ತ ಬಂದೆನು. ಈ ಎಲ್ಲವುಗಳ ಸಮುದಾಯವು ಕ್ರಮೇಣ ಬಹಳ ದೊಡ್ಡದಾಗಿ ಬೆಳೆಯಿತು. ಇವುಗಳನ್ನು ನಾನು ಬಹು ಜಾಗ್ರತೆಯಿಂದ ಕಾಯ್ದುಟ್ಟುಕೊಳ್ಳುತ್ತ ಬಂದೆನು. ಈ ಎಲ್ಲವುಗಳಲ್ಲಿ ಯಾವ ಗ್ರಂಥಗಳಿಂದ ಅವುಗಳನ್ನು ಎತ್ತಿ ತೆಗೆದುಕೊಂಡದ್ದನ್ನೂ ಅವುಗಳಿಗೆ ಹೀಗೆ ಮಹತ್ವ ಕೊಡಲು ಕಾರಣವೇನೆಂಬುದನ್ನೂ ಸಂಕ್ಷಿಪ್ತವಾಗಿ ಬರೆಯುತ್ತ ಬಂದೆನು. ಈ ಕಾರ್ಯವು ಅವ್ಯಾಹತವಾಗಿ ನನ್ನಿಂದ ನಡೆಯುತ್ತಲೇ ಇದ್ದಿತು. ಸಂಶೋಧನ ಕಾರ್ಯದಲ್ಲಿ ಇದು ಬಹು ಮಹತ್ವದ್ದಿದೆ.

### ವಿಷಯಗಳನ್ನು ಕ್ರಮಗೊಳಿಸುವದು

ಮುಂದೆ ಹೀಗೆ ಸಂಶೋಧಿಸಿದ ವಿಷಯಗಳನ್ನು ಹೇಗೆ ಪರಸ್ಪರ ಸಂಬಂಧಪಡಿಸಬೇಕು. ಮತ್ತು ಅವುಗಳನ್ನು ಹೇಗೆ ಕ್ರಮಗೊಳಿಸಬೇಕು ಎಂಬ ಪ್ರಶ್ನೆಯು ನನ್ನೆದುರಿಗೆ ಬರಹತ್ತಿತು. ಹೀಗೆ ನಾನು ಮಾಡದೇ ಇದ್ದರೆ ನಾನು ಲೇಖನಗಳನ್ನು ಬರೆಯುವದಾಗಲಿ ಅಥವಾ ಅವುಗಳ ಮೂಲಕ ಗ್ರಂಥಗಳನ್ನು ಪ್ರಕಟಿಸುವದಾಗಲಿ ಅಶಕ್ಯವೇ ಆಗುತ್ತಿತ್ತು. ಗ್ರಂಥಗಳ ಪರಿಶೀಲನೆ ಮಾಡುವದು ಹಗುರಾದದ್ದು. ಆದರೆ ಪರಿಶೀಲನೆ ಮಾಡಿದ ಬಳಿಕ ಕಂಡುಬಂದ ವಿಷಯಗಳನ್ನು ಸುಸಂಬದ್ಧವಾಗಿ ಜೊತೆಗೊಳಿಸುವದು ಅದಕ್ಕೂ ಹೆಚ್ಚು ಬಿಕ್ಕಟ್ಟಿನದಾಗಿರುವದೆಂದು ನನಗೆ ತೋರಹತ್ತಿತು. ಆದ್ದರಿಂದ ವಿಷಯಗಳನ್ನು ಕ್ರಮಗೊಳಿಸಲು ನನಗೆ ಬಹಳಕಾಲ ಗತಿಸಿ ಹೋಯಿತು.

### ವಚನ ಸಂಗ್ರಹ ಗ್ರಂಥಗಳಲ್ಲಿಯ ಅವ್ಯಸ್ಥಿತ ಜೋಡಣೆ

ನಾನು ಸಂಗ್ರಹಿಸಿದ ಮೂಲ ವಚನಗಳಲ್ಲಿ ಸುಸಂಬದ್ಧತೆಯುಳ್ಳ ವಿವೇಚನೆಗಳು ಕಂಡುಬರಲಿಲ್ಲ. ಅವುಗಳನ್ನು ಬರೆದವರು ಅಥವಾ ಸಂಗ್ರಹಿಸಿದವರು ಸಿಕ್ಕ ಸಿಕ್ಕ ಹಾಗೆ ಅವುಗಳ ಜೋಡಣೆ ಮಾಡಿದ್ದಾಗಿ ನನಗೆ ತೋರಿತು. ೧೫ನೇ ೧೬ನೇ ಶತಮಾನಗಳಲ್ಲಿ ಕೆಲವು ವಚನ ಗ್ರಂಥಗಳು ನಿರ್ಮಿಸಲ್ಪಟ್ಟಿರುತ್ತವೆ. ಅವುಗಳಲ್ಲಿಯೂ ವ್ಯವಸ್ಥಿತ ಜೋಡಣೆಗಳಿಲ್ಲ.

ಗಣಭಾಷ್ಯರತ್ನಮಾಲೆಯಲ್ಲಿ ೧೦೧ ಸ್ಥಳಗಳಿದ್ದರೂ ಅವುಗಳಿಗೂ ಏಕೋತ್ತರ ಶತಸ್ಥಲಗಳಿಗೂ ಏನೂ ಸಂಬಂಧವಿಲ್ಲ. ಬಸವೇಶ್ವರ, ಚನ್ನಬಸವ, ಅಲ್ಲಮಪ್ರಭು, ಸಿದ್ಧರಾಮ ಇವರ ವಚನಗಳು ೩೬ ಸ್ಥಲಗಳಾಗಿ ವಿವೇಚಿಸಲ್ಪಟ್ಟಿರುತ್ತವೆ. ಹೀಗೆ ವಿಂಗಡಿಸಲ್ಪಟ್ಟ ವಚನಗಳಲ್ಲಿಯೂ ಕೂಡ ಸುಸಂಬದ್ಧತೆಯು ಕಂಡುಬರುವದಿಲ್ಲ. ಉದಾ :-- ಭಕ್ತನ ಭಕ್ತ, ಭಕ್ತನ ಮಹೇಶ ಈ ಮೊದಲಾದ ಸ್ಥಲಗಳನ್ನು ಪರಸ್ಪರ ವಿಂಗಡಿಸುವದು ಕಠಿಣವಿರುತ್ತದೆ. ಹಾಗೆಯೇ ಭಕ್ತನ ಐಕ್ಯ, ಐಕ್ಯನ ಭಕ್ತ ಈ ಮೊದಲಾದ ಸ್ಥಲಗಳಲ್ಲಿಯ ವಚನಗಳಲ್ಲಿ ಪರಸ್ಪರ ಯಾವ ಭೇದವು ಇದೆ ಎಂಬುದು ತಿಳಿಯುವಂತಿಲ್ಲ. ಈ ವಿವೇಚನೆಗಳುಳ್ಳ ವಚನಗ್ರಂಥಗಳಿಂದ ವಚನಗಳ ಬಗ್ಗೆ ನಾನು ಪ್ರಯತ್ನ ಮಾಡುತ್ತಿದ್ದ ಕಾರ್ಯದಲ್ಲಿ ಅಂದರೆ ಅವುಗಳಲ್ಲಿ ಒಂದು ವ್ಯವಸ್ಥೆಯನ್ನು ಉಂಟುಮಾಡುವದರಲ್ಲಿ ಏನೂ ಸಹಾಯವಾಗಲಿಲ್ಲ

ವಚನ ವಾಙ್ಮಯದಲ್ಲಿ ವಿಶೇಷ ಅರ್ಥವುಳ್ಳ ಶಬ್ದಗಳು ಅಸಂಖ್ಯಾತವಾಗಿ ಬಂದಿರುತ್ತವೆ. ಅವುಗಳ ವ್ಯಾಖ್ಯೆಗಳನ್ನು ಯಾವ ಗ್ರಂಥವನ್ನು ಹುಡುಕಿದರೂ ನನಗೆ ಸಿಕ್ಕಿರುವದಿಲ್ಲ. ಶೂನ್ಯಸಂಪಾದನೆಯಂಥ ವಾದವಿವಾದಾತ್ಮಕವಾದ ಗ್ರಂಥಗಳು ಕೆಲವು ಉಪಲಬ್ಧವಿವೆ. ಅವುಗಳಲ್ಲಿಯ ನಿರೂಪಣೆಗಳು ಸ್ಥಲಾನುಸಾರವಾಗಿ ಇರದೆ ಬೇರೆ ಬೇರೆ ಶರಣರ ನಡೆಗಳನ್ನು ತಿಳಿಸುವ ಉದ್ದಿಶ್ಯವಾಗಿ ರಚಿತವಾದವುಗಳೆಂದು ತೋರಿ ಬರುತ್ತವೆ. ಲಿಂಗಲೀಲಾವಿಲಾಸ, ನಿಜಾಚರಣೆ, ಬೆಡಗಿನ ವಚನಗಳು ಇವು ವಚನ ವಾಙ್ಮಯದಲ್ಲಿ ಬಹು ಮಹತ್ವದ ಗ್ರಂಥಗಳಿರುತ್ತವೆ. ಆದರೆ ಅವುಗಳನ್ನು ರಚಿಸಿದವರು ತಮ್ಮ ವಿಚಾರಕ್ಕೆ ಯೋಗ್ಯವೆನಿಸಿದ ಪದ್ಧತಿಯನ್ನು ಸ್ವೀಕರಿಸಿ ವಿಷಯಗಳನ್ನು ನಿರೂಪಿಸುತ್ತ ಬಂದಿದ್ದಾರೆ. ಹೀಗೆ ಒಟ್ಟಿಗೆ ವೀರಶೈವ ವಾಙ್ಮಯವನ್ನು ಎಷ್ಟು ಶೋಧ ಮಾಡಿದರೂ ಸುಸಂಬದ್ಧವಾಗಿ ವಿವೇಚನೆ ಮಾಡಿದ ಗ್ರಂಥಗಳು ನನಗೆ ಇನ್ನೂ ಸಿಕ್ಕಿರುವದಿಲ್ಲ.

### ಇತರ ಗ್ರಂಥಗಳಲ್ಲಿರುವ ವಿವೇಚನಾ ಪದ್ಧತಿಗಳು

ಈ ಸ್ಥಿತಿಯಲ್ಲಿ ಇತರ ಮತಗ್ರಂಥಗಳಲ್ಲಿ ಯಾವ ವಿವೇಚನಾ ಪದ್ಧತಿಯು ಇವೆ ಎಂಬುದನ್ನು ನಿರೀಕ್ಷಿಸಬೇಕೆಂಬ ವಿಚಾರವು ನನಗೆ ಬಂದಿತು.

## ಭಾಷ್ಯಕಾರರು

ಹೀಗೆ ನಾನು ನಿರೀಕ್ಷಿಸುವಲ್ಲಿ ಭಾಷ್ಯಕಾರರು ವ್ಯಾಸಸೂತ್ರಗಳನ್ನು ಅವಲಂಬಿಸಿ ತಮ್ಮ ವೇದಾಂತ ಗ್ರಂಥಗಳನ್ನು ಬರೆದಿದ್ದುದು ಕಂಡುಬರುತ್ತದೆ. ಅವುಗಳಂತೆ ವಚನ ವಾಙ್ಮಯದಲ್ಲಿ ಜೋಡಣೆ ಮಾಡುವದು ಅಶಕ್ಯವೇ ಇದೆ.

## ಉಪನಿಷತ್ತುಗಳು

ಉಪನಿಷತ್ ಗ್ರಂಥಗಳಲ್ಲಿ ಅನೇಕ ತರದ ಉಚ್ಚ ವಿಚಾರಗಳು ಬಂದಿದ್ದರೂ ಅವುಗಳಲ್ಲಿ ಯಾವದಾದರೊಂದು ನಿಶ್ಚಿತ ವ್ಯವಸ್ಥೆಯು ಇದ್ದುದು ಕಂಡುಬರುವದಿಲ್ಲ. ಅವುಗಳನ್ನು ನಿರ್ಮಿಸಿದವರು ತಮಗೆ ಸ್ಫೂರ್ತಿಯುಂಟಾದ ಹಾಗೆ ಅವುಗಳನ್ನು ಬರೆದಿದ್ದು ಕಂಡುಬರುತ್ತದೆ.

## ಸಾಧುಗಳ ಪದ್ಯಗಳು

ಪರನಾಡಿನ ಸಾಧುಸಂತರೂ ವೈಷ್ಣವದಾಸರೂ ಅಸಂಖ್ಯ ಪದ್ಯಗಳನ್ನು ರಚಿಸಿದ್ದಾರೆ ಆದರೆ ಅವೆಲ್ಲವು ಸ್ಫೂರ್ತಿಯಿದ್ದಾಗ್ಗೆ ರಚಿಸಿದವುಗಳು ಇರುತ್ತವೆ. ಅವುಗಳಲ್ಲಿಯೂ ವ್ಯವಸ್ಥೆಯು ಕಂಡುಬರುವದಿಲ್ಲ.

## ಪುರಾಣಗಳು

ಜೈನ ವೀರಶೈವ ಮತ್ತು ಬ್ರಾಹ್ಮಣ ವಾಙ್ಮಯಗಳಲ್ಲಿ ಅನೇಕ ಪುರಾಣಗಳು ಇವೆ. ಆದರೆ ನನಗೆ ಶಿವಶರಣರ ಸಂಸ್ಕೃತಿ ಮತ್ತು ಅವರ ತಾತ್ವಿಕ ವಿಚಾರಗಳನ್ನು ಸುಸಂಬದ್ಧವಾಗಿ ಪ್ರಕಟಮಾಡುವದಿದ್ದುದರಿಂದ ಈ ಪುರಾಣಗಳ ಪದ್ಧತಿಗಳು ನನಗೆ ಮಾರ್ಗದರ್ಶಿಯಾಗಲಿಲ್ಲ.

ನನಗೆ ಆಂಧ್ರ ಮತ್ತು ದ್ರಾವಿಡ ಭಾಷೆಗಳು ತಿಳಿಯುವದಿಲ್ಲಾದ್ದರಿಂದ ಅವುಗಳಲ್ಲಿಯ ಧಾರ್ಮಿಕ ಗ್ರಂಥಗಳಲ್ಲಿ ಉಪಯೋಗಿಸಲ್ಪಟ್ಟಿರುವ ವಿವೇಚನೆಯ ಪದ್ಧತಿಗಳನ್ನು ಪರಿಶೀಲಿಸಲು ನನಗೆ ಶಕ್ಯವಾಗಿರುವದಿಲ್ಲ.

ಈ ಸ್ಥಿತಿಯಲ್ಲಿ ನಾನು ಆಧುನಿಕ ರೀತಿಯಿಂದ ಪ್ರಚಾರಮಾಡುತ್ತ ಬಂದ ಕೆಲವು ಧಾರ್ಮಿಕ ಸಮಾಜಗಳವರು ಬಹಿರಂಗಪಡಿಸಿದ ವಾಙ್ಮಯಗಳನ್ನು ನಿರೀಕ್ಷಿಸತೊಡಗಿದೆನು.

## ಆರ್ಯ ಸಮಾಜ

ಆರ್ಯ ಸಮಾಜದಲ್ಲಿ ಅನೇಕ ವಿದ್ವಜ್ಜನರು ಆಗಿಹೋಗಿರುವದರಿಂದ ಅವರಿಗೆ ಆಧಾರ ಗ್ರಂಥವಾದ ಸತ್ಯಾರ್ಥಪ್ರಕಾಶಿಕೆಯನ್ನು ನೋಡಲಾಗಿ ಅದರಲ್ಲಿ ಇತರ ಕೆಲವು ಸಮಾಜಗಳಲ್ಲಿರುವ ಆಚಾರ ವಿಚಾರಗಳ ಬಗ್ಗೆ ಸ್ತುತಿನಿಂದೆಗಳು ಮಾತ್ರ ಹೆಚ್ಚಾಗಿ ಇದ್ದುದು ತೋರಿಬಂದಿತು. ಅವುಗಳಲ್ಲಿ ತಾತ್ವಿಕ ವಿಚಾರಗಳು ಅತ್ಯಲ್ಪವಾಗಿರುತ್ತವೆ. ಆದರೆ ಶಿವಶರಣರ ಉಕ್ತಿಗಳಲ್ಲಿ ಅಗಾಧವಾದ ಉಚ್ಚ ತಾತ್ವಿಕ ವಿಚಾರಗಳು ತುಂಬಿಹೋಗಿರುತ್ತವೆ. ಅವುಗಳಿಗೂ ಆರ್ಯ ಸಮಾಜದ ತತ್ವಗಳಿಗೂ ಯಾವ ರೀತಿಯ ಸಂಬಂಧವು ಇದ್ದುದು ನನಗೆ ಕಂಡುಬರಲಿಲ್ಲ.

## ಬ್ರಾಹ್ಮೋ ಮತ್ತು ಪ್ರಾರ್ಥನಾ ಸಮಾಜಗಳು

ಬ್ರಾಹ್ಮೋ ಸಮಾಜ ಮತ್ತು ಪ್ರಾರ್ಥನಾಸಮಾಜ ಇವುಗಳು ಅನೇಕ ಧಾರ್ಮಿಕ ಮತ್ತು ಸಾಮಾಜಿಕ ವಿಷಯಗಳುಳ್ಳ ಗ್ರಂಥಗಳನ್ನು ಆಧುನಿಕ ಪದ್ಧತಿಯಿಂದ ಹೊರಪಡಿಸಿರುತ್ತವೆ. ಅವುಗಳಲ್ಲಿಯ ಪದ್ಧತಿಗಳು ಹೆಚ್ಚಾಗಿ ಕ್ರಿಶ್ಚನ್ ಪದ್ಧತಿಗಳನ್ನು ಹೋಲುತ್ತವೆ. ಅವು ಅನೇಕ ಉಪಯುಕ್ತ ಗ್ರಂಥಗಳನ್ನು ಆಧುನಿಕ ಪದ್ಧತಿಯಿಂದ ಹೊರಪಡಿಸಿರುತ್ತವೆ. ಅವು ಉಪಯುಕ್ತ ಗ್ರಂಥಗಳಾಗಿದ್ದರೂ ಶರಣರ ಉಚ್ಚ ತತ್ವಗಳ ನಿರೂಪಣೆಯಲ್ಲಿ ಅವು ಸಹಾಯವಾಗುವಂತೆ ನನಗೆ ತೋರಿಬರಲಿಲ್ಲ.

## ಥಿಯಾಸಫಿ

ಥಿಯಾಸಫಿ ಸಂಘದವರು ಪ್ರಕಟಿಸುತ್ತ ಬಂದಿರುವ ಗ್ರಂಥಗಳನ್ನು ನೋಡಿದಲ್ಲಿ ಅವುಗಳಲ್ಲಿರುವ ವಿವೇಚನೆಗಳು ನನ್ನ ಕಾರ್ಯದಲ್ಲಿ ಬಹಳ ಸಹಾಯವಾಗುವಂತೆ ಕಂಡುಬಂದಿತು. ಮುಖ್ಯವಾಗಿ ಅದರಲ್ಲಿಯ 'ಪ್ಲೇನ್ಸ್' (ತರಗತಿ) ಗಳ ವಿಚಾರಗಳು ವೀರಶೈವರ ಆರು ಸ್ಥಲಗಳಿಗೆ ಬಹಳ ಹೋಲುತ್ತವೆ. ಈ ಸಂಸ್ಥೆಯವರು ಅಂಗೀಕರಿಸಿರುವ ಪ್ರತಿಮಾರ್ಗಕ್ಕೆ ಶಿವಶರಣರ ೬, ೩೬, ೨೧೬ ಈ ಮೊದಲಾದ ಸ್ಥಲಗಳ ಬಗ್ಗೆ ಕೆಲವೊಂದು

ಸಾಮ್ಯತೆಯನ್ನು ಕೊಡಬಹುದಾಗಿದೆ. ಆದರೆ ಈ ಥಿಯಾಸಫಿ ಸಮಾಜದವರ ಪದ್ಧತಿಗಳು ಮತ್ತು ಶಿವಶರಣರ ನಡೆನುಡಿಗಳು ಇವುಗಳಲ್ಲಿ ಪರಸ್ಪರ ಹೋಲಿಕೆ ಇದ್ದುದು ನನಗೆ ಕಂಡುಬರಲಿಲ್ಲ.

### ವಿವೇಕಾನಂದರು

ನಮ್ಮ ದೇಶದಲ್ಲಿ ವಿವೇಕಾನಂದರು ವೇದಾಂತ ಮಾರ್ಗವನ್ನು ತಮ್ಮದೇ ಆದ ರೀತಿಯಲ್ಲಿ ವಿವೇಚಿಸುತ್ತ ಅದರ ಮಹತ್ವವನ್ನು ಜಗತ್ತಿನ ಮುಂದೆ ಇಟ್ಟಿದ್ದಾರೆ. ಅವರ ಅನೇಕ ಗ್ರಂಥಗಳನ್ನು ನಾನು ನಿರೀಕ್ಷಿಸಿದೆನು. ಅವುಗಳಲ್ಲಿ ಪ್ರಕಟವಾದ ವಿಚಾರಗಳಿಗೂ ಶಿವಶರಣರ ತತ್ವಗಳಿಗೂ ಬಹಳ ಸಾಮ್ಯತೆ ಇದ್ದುದು ನನಗೆ ಕಂಡುಬಂದಿತು. ಅದ್ದರಿಂದ ರಾಮಕೃಷ್ಣ ಮಿಶನದವರ ವಾಙ್ಮಯದಿಂದ ನನ್ನ ಸಂಶೋಧನ ಕಾರ್ಯಗಳಲ್ಲಿ ಬಹುಮಟ್ಟಿಗೆ ಸಹಾಯವಾಗಿರುತ್ತದೆ ಆದರೆ ಈ ಉಭಯ ಮಾರ್ಗಗಳ ರೀತಿಗಳು ಭಿನ್ನ ಭಿನ್ನವಾಗಿರುತ್ತವೆ.

### ಶಿವಶರಣರ ಪದ್ಧತಿ

ಈ ಪರಿಸ್ಥಿತಿಯಲ್ಲಿ ನಾವು ಹೊರಗಿನ ವಾಙ್ಮಯಗಳನ್ನು ಅವಲಂಬಿಸದೆ ಸ್ವತಂತ್ರ ವಿಚಾರಗಳುಳ್ಳ ಶಿವಶರಣರು ಉಂಟುಮಾಡಿದ ವಾಙ್ಮಯವನ್ನೇ ಅವಲಂಬಿಸಿ ಅವರದೇ ಆದ ಪದ್ಧತಿಯನ್ನು ಕಂಡುಹಿಡಿದು ಅದಕ್ಕೆಯೇ ಅಂಟಿಕೊಂಡು ಅವರ ತತ್ವಗಳನ್ನೇ ಜನತೆಯ ಮುಂದೆ ಇಡುವದೇ ಯುಕ್ತಮಾರ್ಗವೆಂದು ನನಗೆ ತೋರಹತ್ತಿತು. ಅದ್ದರಿಂದ ಅವರ ರೀತಿಯನ್ನು ಅನುಸರಿಸಿಯೇ ನಾನು ಈವರೆಗೆ ವಚನವಾಙ್ಮಯವನ್ನು ಪ್ರಕಟಮಾಡುತ್ತ ಬಂದಿದ್ದೇನೆ. ಇದರ ವಿವರವನ್ನು ನಾನು ಕೆಳಗೆ ಕೊಟ್ಟಿದ್ದೇನೆ.

### ಷಟ್ಸ್ಥಲಾತ್ಮಕ ವಿವೇಚನೆ

ಶಿವಶರಣರ ವಚನಗ್ರಂಥಗಳೆಲ್ಲ ಷಟ್ಸ್ಥಲಗಳನ್ನನುಸರಿಸಿ ರಚಿಸಿದವುಗಳೆಂದು ಅವುಗಳಲ್ಲಿ ಉಲ್ಲೇಖಗಳಿರುತ್ತವೆ. ಅದ್ದರಿಂದ ಇವುಗಳ

ತತ್ವಗಳನ್ನು ಅನುಸರಿಸಿಯೇ ವಿಷಯ ನಿರೂಪಣೆ ಮಾಡುವದು ಸರಿಯಾದ ಮಾರ್ಗವಾಗಿರುತ್ತದೆ. ಆದರೆ ಷಟ್‌ಸ್ಥಲಗಳ ಸ್ವರೂಪವನ್ನು ಸಾದ್ಯಂತವಾಗಿ ವಿವರಣೆ ಮಾಡುವಂಥ ಗ್ರಂಥಗಳು ನನಗೆ ಈ ವರೆಗೂ ಉಪಲಬ್ಧವಾಗಿರುವದಿಲ್ಲ. ವಚನವಾಙ್ಮಯದಲ್ಲಿ ಈ ಹೆಸರುಳ್ಳ ಗ್ರಂಥಗಳು ಅನೇಕವಿರುತ್ತವೆ. ಅವುಗಳನ್ನು ನಾನು ಅವಲೋಕಿಸಲಾಗಿ ಷಟ್‌ಸ್ಥಲಗಳ ತತ್ವಗಳನ್ನು ಶಾಸ್ತ್ರೀಯವಾಗಿಯೂ ನಿಃಸಂದಿಗ್ಧವಾಗಿಯೂ ಹೇಳುವ ಗ್ರಂಥಗಳು ನನಗೆ ಈವರೆಗೂ ಸಿಕ್ಕಿರುವದಿಲ್ಲ. ಈ ಗ್ರಂಥಗಳಲ್ಲಿ ಕೆಲವೊಂದು ವಚನವು ಒಂದು ಸ್ಥಲದಲ್ಲಿ ಇದ್ದರೆ ಅದೇ ವಚನವು ಅಥವಾ ಆ ಭಾವವುಳ್ಳ ವಚನಗಳು ಬೇರೆ ಬೇರೆ ಸ್ಥಲಗಳಲ್ಲಿ ದೊರಕುತ್ತವೆ. ಇದರಿಂದ ಆಯಾ ಸ್ಥಲಗಳನ್ನು ವಚನಗಳ ಮೂಲಕ ವಿಂಗಡಿಸುವದು ಬಹು ಕಷ್ಟವಾಗುತ್ತದೆ.

### ೩೬ ಸ್ಥಲಗಳು

೧೫ನೆಯ ಮತ್ತು ೧೬ನೆಯ ಶತಮಾನಗಳಲ್ಲಿ ಕೆಲವು ಷಟ್‌ಸ್ಥಲಾತ್ಮಕ ಗ್ರಂಥಗಳು ಸ್ವತಂತ್ರವಾಗಿ ರಚಿಸಲ್ಪಟ್ಟಿರುತ್ತವೆ. ಅವುಗಳಲ್ಲಿ ೩೬ ಸ್ಥಲಗಳಂತೆ ವಿವೇಚನೆಗಳಿದ್ದಲ್ಲಿ ಈ ತರದ ಅವ್ಯವಸ್ಥಿತ ಸ್ವರೂಪವು ಬಹು ಹೆಚ್ಚಾಗಿ ತೋರಿಬರುತ್ತಿದೆ. ಈ ಸ್ಥಿತಿಯಲ್ಲಿ ಈ ವಚನಗಳನ್ನು ವರ್ಗೀಕರಣ ಮಾಡುವದು ಅಸಾಧ್ಯವೆಂದು ನನಗೆ ತೋರಿಬರಹತ್ತಿತು. ಆದರೂ ವಚನಗ್ರಂಥಗಳಲ್ಲಿ ಅಮೌಲ್ಯವಾದ ಉಚ್ಚ ವಿಚಾರಗಳು ಸುಂದರವಾದ ಭಾಷೆಯಲ್ಲಿ ಇರುವದು ಕಂಡುಬರುವದರಿಂದ ಈ ಗ್ರಂಥಗಳನ್ನು ನಿರಾಕರಿಸಿಬಿಡಬೇಕೆಂಬ ವಿಚಾರಗಳು ನನಗೆ ಆಗಿಂದಾಗ್ಗೆ ಬರುತ್ತಿದ್ದರೂ ಅವುಗಳನ್ನು ನಾನು ತಡೆಹಿಡಿಯಬೇಕಾಗುತ್ತಿತ್ತು.

ಈ ಸ್ಥಿತಿಯಲ್ಲಿ ನಾನು ಗ್ರಂಥಗಳನ್ನು ಪರಿಶೀಲಿಸುತ್ತಿರುವಾಗ ಕೆಲವು ವಚನಗಳಲ್ಲಿ ಷಟ್‌ಸ್ಥಲಗಳ ಭೇದವಿಭೇದಗಳ ನಿರೂಪಣೆಗಳು ಕಂಡು ಬಂದವು. ಅವುಗಳ ಸಹಾಯದಿಂದ ಈ ಸ್ಥಲಗಳಲ್ಲಿರುವ ಪರಸ್ಪರ ಸಂಬಂಧಗಳನ್ನು ಅರಿತುಕೊಳ್ಳಲು ಸಾಧ್ಯವೆಂದು ತೋರಿತು. ಅಪ್ರಕಾರ ನಾನು ಪ್ರಯತ್ನಿಸುತ್ತಿರಲು ಅವುಗಳ ಮೇಲೆ ಕೆಲವೊಂದು ಪ್ರಕಾಶವು ಬೀಳ

ಪತ್ತಿತು. ಇವುಗಳ ಕೂಡ ಕರಣಹಸಿಗೆ, ಶಿವಾನುಭವಶಾಸ್ತ್ರ, ಷಟಚಕ್ರ ಈ ತರದ ಗ್ರಂಥಗಳನ್ನು ನೋಡಲಾಗಿ ಷಟ್‌ಸ್ಥಲಗಳನ್ನು ಪರಸ್ಪರ ವಿಂಗಡಿಸುವದು ಶಕ್ಯವೆಂದು ತೋರಹತ್ತಿತು. ಕೂಡಲೇ ನಾನು ಸಂಗ್ರಹಿಸಿದ ವಚನಗಳನ್ನು ಈ ರೀತಿ ಸ್ಥಲಾನುಸಾರವಾಗಿ ವರ್ಗೀಕರಣ ಮಾಡಲು ಉದ್ಯುಕ್ತನಾದೆನು.

## ಏಕೋತ್ತರ ಶತಸ್ಥಲಗಳು

ಹೀಗೆ ವರ್ಗೀಕರಣ ಮಾಡುವಲ್ಲಿ ಪ್ರತಿಯೊಂದು ಸ್ಥಲದಲ್ಲಿ ಯಾವ ಯಾವ ವಿಷಯಗಳನ್ನು ಸೇರಿಸಬೇಕೆಂಬುದನ್ನು ನಿರ್ಣಯಿಸಬೇಕಾಯಿತು. ಆಗ ನಾನು ಏಕೋತ್ತರ ಶತಸ್ಥಲಗಳ ಪ್ರಕಾರ ಷಟ್‌ಸ್ಥಲಗಳ ನಿರೂಪಣೆ ಮಾಡಿದ ಗ್ರಂಥಗಳನ್ನು ಅವಲಂಬಿಸಿ ವಿಷಯಗಳನ್ನು ಆರಿಸತೊಡಗಿದೆನು. ಏಕೋತ್ತರ ಶತಸ್ಥಲಗಳು ಹೆಚ್ಚಿಗೆ ಶಾಸ್ತ್ರೀಯವಾದವುಗಳೂ ವ್ಯವಸ್ಥಿತವಾದವುಗಳೂ ಎಂದು ನನಗೆ ತೋರಿದ್ದರಿಂದ ಅವುಗಳ ವಿವರಣೆಗಳನ್ನು ನಾನು ಅವಲಂಬಿಸಹತ್ತಿದೆನು.

## ಆಧುನಿಕ ವಿಚಾರ ಪದ್ಧತಿಗಳು

ವಚನಶಾಸ್ತ್ರದಲ್ಲಿ ಆಧುನಿಕ ಕಾಲಕ್ಕೆ ಅನ್ವಯಿಸುವಂತೆ ವಿಷಯಗಳ ವಿವರಣೆಗಳು ಇದ್ದುದು ಕಂಡುಬರುತ್ತದೆ. ಆದ್ದರಿಂದ ಇಂಥ ವಿಷಯಗಳಿಗೆ ಸಂಬಂಧಿಸಿದ ವಚನಗಳನ್ನೆಲ್ಲ ಒತ್ತಟ್ಟಿಗೆ ತರಲು ಪ್ರಯತ್ನಿಸುತ್ತ ಬಂದೆನು. ಈ ವಚನಗಳು ಮುಖ್ಯವಾಗಿ ಜಾತಿಭೇದ ನಿರಾಕರಣೆ, ಧರ್ಮ ಮೂಢತೆ ಮತ್ತು ಕರ್ಮಠತನದ ನಿರಾಕರಣೆ, ಭಿಕ್ಷೆಯ ಬದಲು ಉದ್ಯೋಗ ಮಾಡುವದು, ಸ್ತ್ರೀಯರ ಸಮಾನತೆ ಇವೇ ಮೊದಲಾದ ವಿಷಯಗಳು ಇದ್ದು ಅವುಗಳಿಗೆ ಸಂಬಂಧಿಸಿದ ವಚನಗಳನ್ನು ನಾನು ಒತ್ತಟ್ಟಿಗೆ ಸೇರಿಸಲಿಕ್ಕೆಹತ್ತಿದೆನು.

## ನೈತಿಕ ವಚನಗಳು

ಈ ಕಾಲದಲ್ಲಿ ಅನೇಕ ಗ್ರಂಥಕರ್ತರು ಬಸವಾದಿ ಪ್ರಮಥರು ನೀತಿಯ ತತ್ವಗಳನ್ನು ಪರಿಪಾಲಿಸದೆ ದುಷ್ಟರೊಡನೆ ಸಹವಾಸ ಮಾಡುತ್ತಿದ್ದರೆಂಬ

ಆರೋಪಗಳನ್ನು ಯಾವಾಗಲೂ ಮಾಡುತ್ತಿದ್ದರು. ಆದ್ದರಿಂದ ನಾನು ನನ್ನ ಸಂಗ್ರಹದಲ್ಲಿ ನೈತಿಕ ಮತ್ತು ಭಕ್ತಿಯ ವಚನಗಳಿಗೆ ಹೆಚ್ಚಿನ ಸ್ಥಾನವನ್ನು ಕೊಟ್ಟೆನು.

ದುರ್ಮಾರ್ಗಿಗಳಾದ ಜಂಗಮರನ್ನು ಶಿವಶರಣರು ಪ್ರೋತ್ಸಾಹಿಸುತ್ತಿದ್ದರೆಂತಲೂ ವಿಧಾನಗಳು ಸಾರ್ವಜನಿಕವಾಗಿ ಅನೇಕರಿಂದ ಮಾಡಲ್ಪಡುತ್ತಿದ್ದವು. ಇದಕ್ಕೆ ಅವರು ಶಿವಶರಣರ ಚರಿತ್ರೆಗಳ ಮತ್ತು ಪುರಾಣಗಳ ಆಧಾರಗಳನ್ನು ಸಹ ಕೊಡುವರು. ಆದರೆ ದುರ್ಮಾರ್ಗಿಗಳಾದ ಜಂಗಮರನ್ನು ಕಡುತರವಾಗಿ ಟೀಕಿಸಿದ ವಚನಗಳು ಅನೇಕವಿದ್ದು, ಅವುಗಳನ್ನು ನಾನು ಆಯ್ದು ಜಂಗಮಸ್ಥಲದಲ್ಲಿ ಸೇರಿಸಿದೆನು.

ಮೇಲೆ ಕಾಣಿಸಿದ ಪದ್ಧತಿಯಂತೆ ವಿಷಯಾನುಸಾರವಾಗಿ ವಚನಗಳನ್ನು ಆಯ್ದು ಅವುಗಳನ್ನು ನಾನು ಪ್ರಕಟಿಸಿದ್ದನ್ನು ವಾಚಕರು ನನ್ನ ಎಲ್ಲ ವಚನ ಗ್ರಂಥಗಳಲ್ಲಿಯೂ ಕಾಣಬಹುದು. ಮಹತ್ವದ ವಿಷಯಗಳ ಬಗ್ಗೆ ಶಿವಶರಣರ ವಿಚಾರಗಳಾವವೆಂಬುದನ್ನು ವಾಚಕರು ಅರಿಯಬೇಕೆಂದ್ಕ ನಾನು ಈ ಪದ್ಧತಿಯನ್ನು ಸ್ವೀಕರಿಸಿದೆನು. ಈ ಕ್ರಮವನ್ನು ನಾನು ಅನ್ಸ ಸರಿಸಿದ್ದು ಉಪಯುಕ್ತವಾದುದೆಂದು ಈವರೆಗಿನ ಅನುಭವದಿಂದ ಕಂಡು ಬಂದಿರುತ್ತದೆ. ಇದರಿಂದ ಲೇಖಕರಿಗೆ ಲೇಖಗಳನ್ನು ಬರೆಯಲೂ ಉಪನ್ಯಾಸಕರಿಗೆ ಉಪನ್ಯಾಸ ಮಾಡಲೂ ಬಹಳ ಅನಕೂಲವಾಗಿರುತ್ತದೆ.

ಈ ಕ್ರಮಗಳನ್ನು ಅನುಸರಿಸಿ ನಾನು ವಚನವಾಙ್ಮಯವನ್ನು ಕೆಲ ಪೊಂದು ವ್ಯವಸ್ಥೆಗೆ ತರಲು ಹೋದ ೨೫ ವರ್ಷಗಳಿಂದಲೂ ಯಾವಾಗಲೂ ಪ್ರಯತ್ನಿಸುತ್ತ ಬಂದಿದ್ದೇನೆ. ಇದಕ್ಕೆ ಅನುಸರಿಸಿ ನಾನು ನನ್ನ ಹಿಂದಿನ ಎಲ್ಲ ಕೈಬರಹದ ಟಿಪ್ಪಣೆಗಳನ್ನೂ ಅವತರಣಗಳನ್ನೂ ಸಮಗೊಳಿಸಿದೆನು. ಇವುಗಳ ಸಹಾಯದಿಂದಲೇ ನಾನು ವಚನಶಾಸ್ತ್ರಸಾರ ಭಾಗ ೧, ೨, ೩, ಹೀಗೆ ಗ್ರಂಥಗಳನ್ನು ಸಿದ್ಧಪಡಿಸಿದೆನು. ಇವುಗಳು ಕೆಲಪೊಂದು ಪದ್ಧತಿಯಿಂದ ಕ್ರಮಗೊಳಿಸಿದ ಆಯಾ ವಚನಕಾರರ ವಚನಗಳಿರುತ್ತವೆ.

ನಾನು ಹೋದ ೨೫ ವರ್ಷಗಳಲ್ಲಿ ಅನೇಕ ಗ್ರಂಥಗಳನ್ನು ಪ್ರಕಟಿಸಿದ್ದು ಇವು ನನಗೆ ಆಯತವಾಗಿ ದೊರಕಿದವುಗಳಿದ್ದು ಅವುಗಳನ್ನು ನಾನು ಹಾಗೆಯೇ ಅಚ್ಚು ಹಾಕಿಸಿರಬಹುದೆಂದು ಅನೇಕರ ತಿಳುವಳಿಕೆ ಇದೆ. ಆದರೆ ವಸ್ತುಸ್ಥಿತಿಯು ಹೀಗಿರುವದಿಲ್ಲ. ನಾನು ೨೫ ವರ್ಷಗಳಿಗಿಂತಲೂ ಮೊದಲು ಅನೇಕ ವರ್ಷಗಳಿಂದ ಶಿವಶರಣರ ಉಕ್ತಿಗಳನ್ನು ಸಂಗ್ರಹಿಸುತ್ತಲೇ ಬಂದಿದ್ದು ಅವುಗಳನ್ನು ನಾನು ಮೇಲೆ ವಿವರಿಸಿದಂತೆ ಷಟ್‌ಸ್ಥಲಾತ್ಮಕ ರೀತಿಯಂತೆ ಕ್ರಮಗೊಳಿಸಿ ಈಚೆಗೆ ರಚಿಸಿದವುಗಳಿವೆ.

### ವಚನಶಾಸ್ತ್ರಸಾರಭಾಗ ೧

ಹೀಗೆ ಕ್ರಮಗೊಳಿಸುವ ಕಾರ್ಯವನ್ನು ನಾನು ಕೆಲವೊಂದು ಸಂದರ್ಭದಲ್ಲಿ ಒಂದು ರೂಪಕ್ಕೆ ತಂದದ್ದಾಗಿರುತ್ತದೆ. ನಾನು ೧೯೨೦ರಲ್ಲಿ ವಿಷಮಜ್ವರದಿಂದ ಪೀಡಿತನಾಗಿ ಮೂರು ತಿಂಗಳುಗಳವರೆಗೆ ಹಾಸಿಗೆಯನ್ನು ಹಿಡಿಯಬೇಕಾಯಿತು. ಈ ಕಾಲದಲ್ಲಿ ನಾನು ಮನೆಬಿಟ್ಟು ಹೋಗುವದು ಶಕ್ಯವಿರಲಿಲ್ಲ. ಈ ಕಾಲದಲ್ಲಿ ಕೆಲಸವಿಲ್ಲದೆ ಹೋಗಲು ನಾನು ಸಂಗ್ರಹಿಸಿದ ಅವತರಣಗಳನ್ನೂ ಟಿಪ್ಪಣಿಗಳನ್ನೂ ನಾನು ಷಟ್‌ಸ್ಥಲಾತ್ಮಕ ಪದ್ಧತಿಯಂತೆ ಹಂಗಡಿಸಿದೆನು. ಹೀಗೆ ವ್ಯವಸ್ಥೆಗೊಳಿಸಲಿಕ್ಕೆ ಕೆಲವು ದಿವಸಗಳು ಹಿಡಿದವು. ಆಮೇಲೆ ನಾನು ಒಬ್ಬ ಕಾರಕೂನನ್ನು ನಿಯಮಿಸಿಕೊಂಡು ಅವನಕಡೆಯಿಂದ ನಾನು ಸಂಗ್ರಹಿಸಿದ ಅವತರಣಗಳನ್ನು ಬರೆಯಿಸತೊಡಗಿದೆನು. ಮೊದಲು ವಚನಶಾಸ್ತ್ರಸಾರ ಭಾಗ ೧ ಇದನ್ನು ಹೀಗೆ ಸಿದ್ಧಪಡಿಸಿ ಬರೆಯಿಸಹತ್ತಿದೆನು. ಅದು ಎರಡು ತಿಂಗಳುಗಳಲ್ಲಿ ಪೂರ್ಣವಾಯಿತು. ನಾನು ಹಾಸಿಕೆಯ ಮೇಲಿದ್ದುಕೊಂಡೆ ಈ ಕಾರ್ಯಮಾಡಿದೆನು.

### ಶ್ರೀ ಹಾನಗಲ್ಲು ಕುಮಾರ ಸ್ವಾಮಿಗಳು

ಈ ಗ್ರಂಥವು ಪೂರ್ತಿಯಾಗುವ ಕಾಲದಲ್ಲಿ ಅಂದರೆ ೧೯೨೧ ಜೂನ ತಿಂಗಳಿನಲ್ಲಿ ನಾನು ವಿಷಮಜ್ವರದಿಂದ ವಿಶೇಷ ಪೀಡಿತನಾಗಿದ್ದೆನೆಂಬುದನ್ನು ತಿಳಿದು ನನ್ನ ಮಾವಂದಿರಾದ ಕೈ. ವಾ. ತಮ್ಮಣ್ಣಪ್ಪನವರು ನನ್ನನ್ನು ಕಾಣ

ಲಕ್ಕೆ ಬಂದಿದ್ದರು. ಅವರು ಈ ಗ್ರಂಥದಲ್ಲಿ ಸಂಗ್ರಹವಾದ ಉಕ್ತಿಗಳನ್ನು ನೋಡಿ ವಿಸ್ಮಯಪಟ್ಟರು. ಅವರು ಇಂಥ ಸಾಹಿತ್ಯವನ್ನು ತಾವು ಎಲ್ಲಿಯೂ ನೋಡಿದ್ದಿಲ್ಲವೆಂಬುದನ್ನು ಅವರು ಪತ್ರದಲ್ಲಿ ಅನೇಕರಿಗೆ ತಿಳಿಸಿದರು. ಅವರಲ್ಲಿ ಕೆಲವರು ನನ್ನೆಡೆಗೆ ಬರಲಾಗಿ ಅವರಿಗೆ ನಾನು ಈ ಗ್ರಂಥದ ಭಾಗಗಳನ್ನು ಓದಿ ತೋರಿಸುತ್ತಿದ್ದೆನು. ಈ ಗ್ರಂಥದ ವಿಚಾರವು ಕರ್ಣೋಪಕರ್ಣವಾಗಿ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳಿಗೆ ತಿಳಿಯಲಾಗಿ ಅವರು ಕೂಡಲೆ ಬಾಗಲಕೋಟೆಯ ಶ್ರೀ ಮುರಿಗೆಯ್ಯ ಬಂಗಿನ, ದೇ. ಮಠ. ಬುದ್ಧಯ್ಯ ಸ್ವಾಮಿ ಪುರಾಣಿಕಮಠ ಮತ್ತು ಧರ್ಮಸಿದ್ಧಶಾಸ್ತ್ರಿಗಳು ಇಷ್ಟು ಜನರು ಕೂಡಿಕೊಂಡು ವಿಜಾಪುರಕ್ಕೆ ಬಂದರು. ಅವರು ನಾನಿದ್ದ ಮನೆಗೆ ಸಮೀಪವಾಗಿ ನನ್ನ ಗ್ರಾಮದ ದೇಸಾಯರಾದ ಶ್ರೀ. ವಾ. ಗಂಗಪ್ಪ ದೇಸಾಯಿ ಇವರು ಕಟ್ಟಿಸಿದ ವಿಶಾಲವಾದ ಗೃಹವಿದ್ದು ಅಲ್ಲಿಗೆ ಬಂದು ಇಳಿದಿದ್ದರು. ಅವರು ಬಂದಕಾಲಕ್ಕೆ ನನಗೆ ಇನ್ನೂ ಚೆನ್ನಾಗಿ ಕುಳ್ಳಿರಲಿಕ್ಕೆ ಬರುತ್ತಿದ್ದಿಲ್ಲ. ದಿಬ್ಬಿಗೆ ಕುಳಿತರೆ ಕಾಲುಗಳಲ್ಲಿ ನೋವು ಉಂಟಾಗುತ್ತಿತ್ತು. ಅವರೂ ನಾನು ಸಂಗ್ರಹಿಸಿದ ಈ ಗ್ರಂಥದಲ್ಲಿಯ ವಚನಗಳನ್ನು ಅವರಿಗೆ ಓದಿ ತೋರಿಸುತ್ತಬಂದೆನು. ಶ್ರೀ ಸ್ವಾಮಿಗಳವರಿಗೆ ಇಂಥ ಸಾಹಿತ್ಯವು ವೀರಶೈವರಲ್ಲಿದ್ದದ್ದು ಬಹುಗೊತ್ತಿರಲಿಲ್ಲ. ನಾನು ಸಂಗ್ರಹಿಸಿದ ವಚನಗಳಲ್ಲಿಯ ಸುಂದರವಾದ ಉದ್ಧರಣಗಳನ್ನು ಸ್ವಾಮಿಗಳವರು ನೋಡಿ ಪರವಶರಾಗಿ ಇದನ್ನು ಅಚ್ಚು ಹಾಕಿಸುವದು ಅವಶ್ಯವೆಂದು ನನಗೆ ತಿಳಿಸಿದರು. ಹೀಗೆ ಶ್ರೀ. ಸ್ವಾಮಿಗಳೂ ಅವರ ಕೂಡ ಬಂದ ಮಹನೀಯರೂ ಮೂರು ನಾಲ್ಕು ದಿವಸ ವಿಜಾಪುರದಲ್ಲಿ ಗ್ರಂಥಭಾಗಗಳನ್ನು ಪರಿಶೀಲನೆ ಮಾಡುತ್ತ ಇದ್ದು ಅಮೇಲೆ ತಿರುಗಿಹೋದರು.

ಈ ಸಂಗತಿಯು ಸಂಭವಿಸಿದ ವರುಷವೇ ನಾನು ನನ್ನ ವಕೀಲಿಯ ಸನದನ್ನು ಬೆಳಗಾವಿಗೆ ವರ್ಗ ಮಾಡಿಸಿಕೊಂಡೆನು. ನಾನು ಅಲ್ಲಿಗೆ ೨೦-೧೧-೨೧ ರಲ್ಲಿ ಹೋದಬಳಿಕ ಬಿಡುವಿನ ದಿವಸಗಳಲ್ಲಿ ನಾನು ಸಂಗ್ರಹಿಸಿದ ಈ ವಚನ ಗ್ರಂಥವನ್ನು ಮತ್ತಿಷ್ಟು ಹೆಚ್ಚಿಗೆ ವ್ಯವಸ್ಥಿತ ಸ್ವರೂಪಕ್ಕೆ ತಂದೆನು. ಹೀಗೆ ಸಿದ್ಧವಾದ ಗ್ರಂಥಕ್ಕೆ "ವಚನಸಾರ" ಎಂಬ ಹೆಸರಿಟ್ಟೆನು.

## ಬ್ಯಾಸಲ್ ಮಿಶನ್ ಪ್ರೆಸ್ಸು

ಇದನ್ನು ಸುಂದರವಾಗಿ ಅಚ್ಚು ಹಾಕಿಸಬೇಕೆಂದು ಮಂಗಳೂರ ಬ್ಯಾಸಲ್ ಮಿಶನ್ ಪ್ರೆಸ್ಸಿಗೆ ಕಳಿಸಿಕೊಟ್ಟಿದ್ದಲ್ಲದೆ ಅವರು ತಿಳಿಸಿದಂತೆ ಈ ಕಾರ್ಯಕ್ಕೋಸ್ಕರ ೫೦೦ ರೂಪಾಯಿಗಳನ್ನು ಸಹ ಮುಂಗಡವಾಗಿ ಅವರಿಗೆ ಕಳಿಸಿಕೊಟ್ಟೆನು. ಆದರೆ ಆಶ್ಚರ್ಯದ ಸಂಗತಿಯೆಂದರೆ ಮಿಶನ್ ಪ್ರೆಸ್ಸಿನವರು ಪರಧರ್ಮದವರ ಗ್ರಂಥಗಳನ್ನು ನಾವು ಅಚ್ಚು ಹಾಕುವದಿಲ್ಲ ಮತ್ತು ನಿಮ್ಮ ಗ್ರಂಥದಲ್ಲಿ ಪರಮಾತ್ಮನ ಸಂಬಂಧವಾಗಿ ಇರುವ ವಿಚಾರಗಳನ್ನು ಪ್ರಕಾಶಪಡಿಸಲು ನಾವು ಇಷ್ಟಪಡುವದಿಲ್ಲ. ಅವು ನಮ್ಮ ಕ್ರಿಶ್ಚನ್ ಧರ್ಮತತ್ವಗಳನ್ನು ಹೋಲುತ್ತವೆ, ಇಂಥ ಧಾರ್ಮಿಕ ಗ್ರಂಥಗಳನ್ನು ಅಚ್ಚು ಹಾಕುವದರಿಂದ ನಮ್ಮ ಮಿಶನ್ನಿನ ಉದ್ದೇಶಕ್ಕೆ ಧಕ್ಕೆ ಬರುತ್ತದೆ ಎಂಬ ಕಾರಣವನ್ನು ತೋರಿಸಿ ನಾನು ಕಳಿಸಿದ ಹಸ್ತಲಿಖಿತ ಗ್ರಂಥವನ್ನೂ ೫೦೦ರೂ ಮುಂಗಡ ಹಣವನ್ನೂ ನನಗೆ ತಿರುಗಿ ಕಳಿಸಿದರು!

## ವಚನಶಾಸ್ತ್ರಸಾರ ಭಾಗ ೧ ಇದರ ಮುದ್ರಣ

ಗ್ರಂಥವು ನನ್ನ ಕಡೆಗೆ ತಿರುಗಿ ಬಂದಬಳಿಕ ಅದನ್ನು ಶ್ರೀಯುತ ಚೌಗಲೆ ಇವರ ಮಹಾವೀರ ಪ್ರೆಸ್ಸಿಗೆ ಮುದ್ರಣ ಮಾಡಲಿಕ್ಕೆ ಕೊಟ್ಟೆನು. ಅವರೇ ಈ ಗ್ರಂಥವನ್ನು ೧೯೨೩ರಲ್ಲಿ ಪೂರ್ಣವಾಗಿ ಮುದ್ರಣಗೊಳಿಸಿದರು.

ಹೀಗೆ ಗ್ರಂಥವನ್ನು ಮುದ್ರಿಸಲಿಕ್ಕೆ ಕೊಡುವ ಪೂರ್ವದಲ್ಲಿ ಗ್ರಂಥದ ಮೊದಲಿನ ಹೆಸರಿನಲ್ಲಿ ಬದಲು ಮಾಡಿ ಅದಕ್ಕೆ "ವಚನಶಾಸ್ತ್ರಸಾರ" ಎಂಬ ಹೆಸರನ್ನಿಟ್ಟೆನು. ಇದಕ್ಕೂ ಪೂರ್ವದಲ್ಲಿ ವಚನಗ್ರಂಥಗಳಿಗೆ "ವಚನಶಾಸ್ತ್ರ" ಎಂದು ಕರೆಯುವ ರೂಢಿಯು ಇರಲಿಲ್ಲ. ಬರೇ "ವಚನಗಳು" ಎಂದು ಕರೆಯುತ್ತಿದ್ದರು. ಆಗ ವಚನಗಳ ದೊಡ್ಡ ಸಮುದಾಯವಿದೆ ಮತ್ತು ಅಸಂಖ್ಯ ವಚನಕಾರರು ಆಗಿ ಹೋಗಿದ್ದಾರೆ. ಎಂಬುದರ ಪರಿಚಯವು ವೀರಶೈವ ಸಮಾಜದಲ್ಲಿ ಎಷ್ಟು ಮಾತ್ರವೂ ಇರಲಿಲ್ಲ. ಕೈ. ವಾ. ಆರ್. ನರಸಿಂಹಾಚಾರ್ಯರು ಕವಿಚರಿತೆಯ ೧ನೆಯ ಭಾಗವನ್ನು ಇಷ್ಟರಲ್ಲಿ ಹೊರಪಡಿಸಿದ್ದರು. ಅದರಲ್ಲಿ ೪೦–೫೦ ವಚನಕಾರರ ಉಲ್ಲೇಖಗಳಿದ್ದವು. ಆದರೆ

ನಾನು ಪ್ರಕಟಿಸಿದ ಗ್ರಂಥದಲ್ಲಿ ೨೧೪ ಜನ ವಚನಕಾರರ ಹೆಸರುಗಳಿದ್ದುದಲ್ಲದೆ ಸುಮಾರು ೧೩೦ ವಚನಕಾರರು ರಚಿಸಿದ ಅನೇಕ ವಚನಗಳನ್ನು ನಾನು ಈ ಗ್ರಂಥದಲ್ಲಿ ಉದಹರಿಸಿದ್ದೆನು. ವಚನವಾಙ್ಮಯದ ನನ್ನ ಸಂಶೋಧನೆಯಲ್ಲಿ ವಚನಗಳಿಗೆ ಒಂದು ಶಾಸ್ತ್ರದ ಸ್ವರೂಪು ಇದ್ದುದು ನನಗೆ ಕಂಡುಬಂದದ್ದರಿಂದ ಅದನ್ನು ಹಾಗೆ ಕರೆಯಲು ನನಗೆ ಯಾವ ಪ್ರತ್ಯವಾಯವು ಕಂಡುಬರಲಿಲ್ಲ. ಅವುಗಳ ಈ ಸ್ವರೂಪು ಸಾರ್ವಜನಿಕರಿಗೆ ಗೊತ್ತಾಗಬೇಕೆಂದು ನಾನು ಈ ಗ್ರಂಥಕ್ಕೆ "ವಚನಶಾಸ್ತ್ರಸಾರ" ಎಂಬ ಹೆಸರನ್ನಿಟ್ಟೆನು. ಹೀಗೆ ಈ ವಾಙ್ಮಯಕ್ಕೆ ಒಂದು 'ಶಾಸ್ತ್ರ'ವೆಂದು ಕರೆಯುವ ರೂಢಿಯು ಈಗ ಬಿದ್ದುಬಿಟ್ಟಿದೆ.

## ಮಹನೀಯರ ಅಭಿಪ್ರಾಯಗಳು

ವಚನ ಶಾಸ್ತ್ರಸಾರ ಗ್ರಂಥವು ಹೊರಬಿದ್ದ ಬಳಿಕ ಅನೇಕ ಮಹನೀಯರು ಅದನ್ನು ಬಹಳವಾಗಿ ಹೊಗಳಿ ನನಗೆ ಪತ್ರವನ್ನು ಬರೆದರು. ಸಾಹಿತ್ಯ ಪರಿಷತ್ತಿನ ಸೆಕ್ರೆಟರಿಗಳಾದ ದಿವಂಗತ ಶ್ರೀ ವೆಂಕಟನಾರಣಪ್ಪನವರು ಕನ್ನಡ ಭಾಷೆಯಲ್ಲಿ ಶಾಶ್ವತವಾದ ಒಂದು ಗ್ರಂಥವೊಂದನ್ನು ನೀವು ನಿರ್ಮಿಸಿದಿರೆಂದು ನನಗೆ ಪತ್ರ ಬರೆದರು. ದಿವಗಂತ ಆರ್. ನರಸಿಂಹಾಚಾರ್ಯರು ವಚನ ವಾಙ್ಮಯದಲ್ಲಿ ಮಹತ್ವದ ಸಂಶೋಧನೆ ಮಾಡಿದಿರೆಂದು ತಿಳಿಸಿದ್ದಲ್ಲದೆ ಈ ವಿಷಯವಾಗಿ ಅವರು ಕಾಲ ಕಾಲಕ್ಕೆ ತಮ್ಮ ಸಲಹೆ ಸೂಚನೆಗಳನ್ನು ಮಾಡುತ್ತ ಬಂದರು. ಇಷ್ಟೇ ಅಲ್ಲ ಅವರು ತಮ್ಮ ಮನ್ನಣೆಯನ್ನು ತೋರಿಸಲು ಕೆಲ ಒಂದು ಕಾಣಿಕೆಯನ್ನು ಸಹ ಕಳಿಸುವರು. ಶ್ರೀಯುತ ಬೆನಗಲ್ಲ ರಾಮರಾಯರು ೧೯೨೯ರಲ್ಲಿ ಬೆಳಗಾಂವಿಯ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಅವರು ತಮ್ಮ ಭಾಷಣದಲ್ಲಿ ವಚನಶಾಸ್ತ್ರಸಾರ ಗ್ರಂಥವು ಕನ್ನಡ ಭಾಷೆಯಲ್ಲಿ ಈಚೆಗೆ ಹೊರಪಟ್ಟ ಗ್ರಂಥಗಳಲ್ಲಿ ಮಹತ್ವವಾದದ್ದೆಂದು ವರ್ಣಿಸಿದರು. ಕೈ. ವಾ. ಕೆ. ಪಿ. ಪುಟ್ಟಣಶೆಟ್ಟರು ಕೆಲವೊಬ್ಬ ತಮಿಳು ದೇಶದ ಪಂಡಿತರು ಈ ಗ್ರಂಥವನ್ನು ನೋಡಿದ ಬಳಿಕ ತಮಿಳು ವಾಙ್ಮಯದಲ್ಲಿ ತಿರುಕ್ಕುರಳ ವೇದವೆಂದು ಕರೆಯಲ್ಪಡುವ ಸರ್ವಮಾನ್ಯವಾದ ಗ್ರಂಥ ಹೇಗಿದ್ದೋ ವಚನಶಾಸ್ತ್ರಸಾರವು ಅದಕ್ಕೆ ತಕ್ಕ ಗ್ರಂಥವೆಂದು

ದೆಂದು ಅಭಿಪ್ರಾಯಪಟ್ಟಿದ್ದನ್ನು ನನಗೆ ತಿಳಿಸಿದರು. ಕ್ರಿಸ್ತನ ಸಮಾಜ ದಲ್ಲಿ ಕಂಡು ಬಂದ ಪರಮಾತ್ಮನ ಸ್ವರೂಪದ ಬಗ್ಗೆ ಇದ್ದ ವಿಚಾರಗಳೂ [illegible] ಪ್ರತಿ ಭಾವದ ವಚನಗಳೂ ಇವುಗಳನ್ನು ಅನೇಕರು ಬಹಳ ಶ್ಲಾಘಿಸಿದರು. ಶ್ರೀ[illegible]ಗಲ್ಲ ಕುಮಾರ ಸ್ವಾಮಿಗಳವರು ಉಂಟುಮಾಡಿದ ಬಳಿಕ ಶಿವಾನುಭವ ಗೋಷ್ಠಿಗಳನ್ನು ನಡೆಸು ತ್ತಿರುವಾಗ್ಗ ಈ ಗ್ರಂಥದ ಉಕ್ತಿಗಳನ್ನು ಯಾವಾಗಲೂ ಓದಿ ಹೇಳಿ ಅವು ಗಳ ಅರ್ಥವನ್ನು ಅಲ್ಲಿದ್ದವರಿಗೆ ವಿವರಿಸಿ ಹೇಳುವ ಕ್ರಮವನ್ನು ಇಟ್ಟು ಕೊಂಡರು.

## ಮತಭೇದದ ವಿಷಯಗಳು

ಆದರೆ ಈ ಗ್ರಂಥದಲ್ಲಿ ಬಂದಿರುವ ಕೆಲವು ವಿಷಯಗಳ ಬಗ್ಗೆ ಮಾತ್ರ ವೀರಶೈವ ಸಮಾಜದಲ್ಲಿರುವ ಕೆಲವೊಂದು ವರ್ಗದವರು ತಮ್ಮ ಅಸಮಾ ಧಾನವನ್ನು ವ್ಯಕ್ತಪಡಿಸಿದ್ದು ತಿಳಿದುಬಂದಿತು. ಆ ವಿಷಯಗಳು ಯಾವ ವೆಂದರೆ–ವೇದಗಳ ಬಗ್ಗೆ ಪ್ರಕಟವಾದ ಶಿವಶರಣರ ಅಭಿಪ್ರಾಯಗಳೂ, ಭಿಕ್ಷೆಯನ್ನು ಬೇಡದೆ ಕೆಲವೊಂದು ಉದ್ಯೋಗ ಅಥವಾ ಕಾಯಕವನ್ನು ಮಾಡಬೇಕೆಂಬುದು, ಅಸ್ಪೃಶ್ಯರಿದ್ದರೂ ಅವರೊಡನೆ ಸಮರಸವಾಡುವದು, ಲಿಂಗ ಕಳೆದರೆ ಆತ್ಮಘಾತ ಮಾಡಿಕೊಳ್ಳಬಾರದೆಂಬ ವಿಚಾರಗಳು, ಪಂಚ ಸೂತಕಗಳನ್ನು ನಿರಾಕರಿಸಿದ ವಿಚಾರಗಳು, ಹಠಯೋಗವನ್ನು ನಿಷೇಧಿಸಿದ್ದು, ಜಾತಿಭೇದವನ್ನು ನಿರಾಕರಿಸಿದ್ದು, ಈ ವಿಷಯಗಳ ಬಗ್ಗೆ ಇವರು ತಮ್ಮ ಮತಭೇದವಿರುವದನ್ನು ವ್ಯಕ್ತಪಡಿಸಿದರು. ಆದರೆ ಈ ವಿಷಯಗಳ ಬಗ್ಗೆ ಆಧಾರಪೂರ್ವಕವಾದ ಶಿವಶರಣರ ಉಕ್ತಿಗಳನ್ನು ನಾನು ಉದಹರಿಸಿದ್ದ ರಿಂದ ಅವರು ಹೆಚ್ಚಿಗೆ ಬಹಿರಂಗವಾಗಿ ಮತ್ತು ಟೀಕಾತ್ಮಕವಾಗಿ ಲೇಖ ಗಳನ್ನು ಬರೆದಿರುವದಿಲ್ಲ ಅಥವಾ ಭಾಷಣ ಮಾಡಿರುವದಿಲ್ಲ. ಇವರೆಲ್ಲರೂ ಬಹುಶಃ ಬ್ರಾಹ್ಮಣ ಪದ್ಧತಿಗಳೇ ಮೇಲಾದವುಗಳೆಂದು ತಿಳಿದುಕೊಂಡು ಅವುಗಳನ್ನು ಅನುಸರಿಸುವವರಾಗಿದ್ದರು. ಆದರೆ ಆಧುನಿಕ ಕಾಲದಲ್ಲಿ ಉಂಟಾದ ಸಾಮಾಜಿಕ ಸುಧಾರಣೆಗಳ ಮಹತ್ವವನ್ನು ಇವರು ಅರಿಯದ ವರಾಗಿದ್ದರು. ೨೫ ವರ್ಷಗಳ ಹಿಂದೆ ಈ ಸ್ಥಿತಿಯು ಇದ್ದರೂ ಈಚಿಗೆ

ಇದು ಮಾರ್ಗವು ಹೊಂದಿದ್ದು ಶಿವಶರಣರ ತತ್ವಗಳಿಗೆ ಮಹತ್ವದ ಸ್ಥಾನವು ಪ್ರಾಪ್ತವಾದದ್ದು ಕಂಡುಬರುತ್ತಿದೆ.

## ವಿಜಾಪುರದಲ್ಲಿ ಸಂಶೋಧನೆಗಳು

ಈ ವರೆಗೆ ನಾನು ಬೆಳಗಾವಿ ಪಟ್ಟಣದಲ್ಲಿದ್ದು ೧೯೨೦ರಲ್ಲಿ ನಾನು ವಿಜಾಪುರ ಜಿಲ್ಲೆಯಲ್ಲಿ ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಗವ್ಹರ್ನಮೆಂಟ ಪ್ಲೀಡರನಾಗಿ ನಿಯಮಿಸಲ್ಪಟ್ಟೆನು. ಆಗ ನಾನು ನನ್ನ ವಕೀಲಿಯ ಸನದನ್ನು ವಿಜಾಪುರಕ್ಕೆ ವರ್ಗಮಾಡಿಸಿಕೊಂಡೆನು. ಹೀಗೆ ನಾನು ಮೂರು ವರ್ಷ ಇದೇ ಸ್ಥಾನದಲ್ಲಿ ಕಾರ್ಯಮಾಡುತ್ತ ಬಂದೆನು.

ಆದರೆ ಈ ಮೂರು ವರ್ಷಗಳಲ್ಲಿ ನನ್ನ ವಾಙ್ಮಯ ಸಂಶೋಧನ ಕಾರ್ಯಗಳನ್ನು ತಡೆದುನಿಲ್ಲಿಸದೆ ಅವುಗಳನ್ನು ಇನ್ನೂ ಹೆಚ್ಚು ಬಲವಾಗಿ ಮುಂದುವರಿಸಿದೆನು. ವಾಙ್ಮಯದಲ್ಲಿ ಕೆಲವೊಂದು ಪುಸ್ತಕವನ್ನು ಹೊರಪಡಿಸುವದಷ್ಟೇ ಅಲ್ಲ, ಅದರ ಜೊತೆಗೆ ಅದೇ ಅಭಿಪ್ರಾಯವುಳ್ಳ ಬೇರೆ ಗ್ರಂಥಗಳನ್ನು ಸಹ ಸಂಶೋಧಿಸಿ ಪ್ರಕಟಿಸಿದ್ದಾದರೆ ಅದು ಹೆಚ್ಚಿಗೆ ಪರಿಣಾಮಕಾರಿಯಾಗುವದೆಂದು ನನಗೆ ತೋರಿತು. ಬಸವೇಶ್ವರನ ಕಾಲದಲ್ಲಿ ಅಸಂಖ್ಯ ಶಿವಶರಣರು ಉದಯವಾಗಿ ತಮ್ಮ ವಿಚಾರಗಳನ್ನು ಇಂಥ ವಚನಗಳ ಮೂಲಕ ಅನೇಕ ರೀತಿಯಿಂದ ವ್ಯಕ್ತಪಡಿಸಿದ್ದರಿಂದ ಅವರ ಉಕ್ತಿಗಳನ್ನು ಸಹ ಸಂಶೋಧಿಸಿ ಪ್ರಕಟಪಡಿಸುವದಾದರೂ ಅಷ್ಟೇಮಹತ್ವದ್ದೆಂದು ನನಗೆ ತೋರಿತು

## ವಚನಗಳನ್ನು ಬರೆಯಿಸುವದು

ಆದರೆ ಶಿವಶರಣರ ಉಕ್ತಿಗಳುಳ್ಳ ಸ್ವತಂತ್ರಗ್ರಂಥಗಳು ಉಪಲಬ್ಧವಿರುವದಿಲ್ಲ. ಅವು ಅನೇಕ ವಚನಸಂಗ್ರಹ ಗ್ರಂಥಗಳಲ್ಲಿ ಚದುರಿದವಾಗಿ ಅಲ್ಲಲ್ಲಿ ದೊರಕುತ್ತವೆ. ಅವುಗಳನ್ನು ಬರೆಯಿಸಿ ಬೇರೆಯಾಗಿ ತೆಗೆಯಿಸಿ ಒತ್ತಟ್ಟಿಗೆ ಸಂಗ್ರಹಿಸುವ ಕಾರ್ಯವನ್ನು ಮಾಡದಹೊರತು ಇವರ ವಚನಗಳನ್ನು ಪ್ರಸಿದ್ಧಿಸುವದು ಶಕ್ಯವಿರಲಿಲ್ಲ. ನಾನು ಬರೇ ವಚನಶಾಸ್ತ್ರಸಾರ ಈ ಗ್ರಂಥದ ಭಾಗಗಳನ್ನು ಪ್ರಕಟ ಮಾಡುವದರಿಂದ ಈ ನನ್ನ ಉದ್ದೇಶವು

ಸಫಲವಾಗದೆಂದು ನನಗೆ ತೋರಹತ್ತಿತು. ಆದ್ದರಿಂದ ನಾನು ವಚನಗಳ ಸಂಗ್ರಹಕಾರ್ಯವನ್ನು ಮಾಡುವಲ್ಲಿ ಪ್ರವೃತ್ತನಾದೆನು.

## ದೇಣಿಗೆ ಬಂದದ್ದು

ಈ ಕಾರ್ಯವನ್ನು ಪ್ರಾರಂಭಿಸುವ ಕಾಲದಲ್ಲಿ ಶ್ರೀಯುತ ವೀರಭದ್ರಪ್ಪ ಹಾಲಭಾವಿಯವರು ಚಿಕ್ಕೋಡಿಯಲ್ಲಿ ಸಬ್‌ಜಡ್ಜರಾಗಿದ್ದರು. ಅವರು ನಾನು ಮಾಡುತ್ತಬಂದ ಕಾರ್ಯಗಳಲ್ಲಿ ನನಗೆ ಯಾವಾಗಲೂ ಪ್ರೋತ್ಸಾಹಿಸುತ್ತ ಬಂದಿದ್ದರು. ಈ ಕಾಲದಲ್ಲಿ ನಾನು ಕೈಕೊಳ್ಳಲಿಚ್ಛಿಸುವ ಕಾರ್ಯವನ್ನು ತಿಳಿದುಕೊಂಡವರಾಗಿ ಅವರಿಂದ ಪ್ರೇರಣೆಹೊಂದಿದ ಒಬ್ಬ ಮಹನೀಯರು ನನ್ನ ಕಡೆಗೆ ೨೦೦ರೂ. ಗಳನ್ನು ಕಾಣಿಕೆಯಾಗಿ ಕಳಿಸಿಕೊಟ್ಟರು. ಅವರು ಶ್ರೀಯುತ ಧರ್ಮಗೌಡ ಪಾಟೀಲ ಮು. ಚಿಂಚಣೆ ಇವರು ಇದ್ದಾರೆ. ಈ ಕಾಣಿಕೆಯು ನಾನು ಮಾಡಬೇಕೆಂದಿದ್ದ ಮುಂದಿನ ಕಾರ್ಯಗಳನ್ನು ಕೈಕೊಳ್ಳಲು ನನಗೆ ಬಹಳ ಸಹಾಯವಾಯಿತು.

## ಲೇಖಕರ ಯೋಜನೆ

ಈ ದೇಣಿಗೆಯು ನನಗೆ ತಲ್ಪಿದಕೂಡಲೆ ಅಂದರೆ ೧೯೨೪ರಲ್ಲಿ ನಾನು ಅವರಿಗೆ ಸಂಗ್ರಹಿಸಿದ್ದ ಹಸ್ತಲಿಖಿತ ಗ್ರಂಥಗಳನ್ನು ಶಬ್ದಶಃ ಬರೆಯಿಸಲಿಕ್ಕೆ ಪ್ರಾರಂಭಿಸಿದೆನು. ಹೀಗೆ ಪ್ರಾರಂಭಿಸುವ ಮೊದಲು ನನ್ನಲ್ಲಿದ್ದ ಪ್ರಸಿದ್ಧ ವಚನಕಾರರ ವಚನ ಸಂಗ್ರಹ ಗ್ರಂಥಗಳನ್ನೂ ಅತ್ಯಂತ ಮಹತ್ವದ ಬೇರೆ ಸ್ವತಂತ್ರ ವಚನಗಳನ್ನೂ ಆರಿಸಿಕೊಂಡು ಮೊದಲು ಅವುಗಳನ್ನು ಬರೆಯಿಸಲು ಪ್ರಾರಂಭಿಸಿದೆನು. ಈ ಗ್ರಂಥಗಳನ್ನು ನಾನು ವಚನಶಾಸ್ತ್ರಸಾರ ಭಾಗ ೧ ಇದರಲ್ಲಿ ಉಲ್ಲೇಖಿಸಿದ್ದೇನೆ. ಇವುಗಳ ಸಂಖ್ಯೆಯು ೩೦ ಇದ್ದು ಇವುಗಳಲ್ಲದೆ ಇವುಗಳಿಗೆ ಸಂಬಂಧಪಟ್ಟ ಇತರ ಶಿವಶರಣರ ಉಕ್ತಿಗಳುಳ್ಳ ಚಿಕ್ಕಪುಟ್ಟ ಗ್ರಂಥಗಳನ್ನು ಕೂಡ ಆರಿಸಿ ಅವುಗಳಲ್ಲಿಯ ವಚನಗಳ ನಕಲುಗಳನ್ನು ಮಾಡಿಸತೊಡಗಿದೆನು

ಹೀಗೆ ನಕಲುಮಾಡಿಸುವಲ್ಲಿ ಒಂದೊಂದು ವಚನವನ್ನು ಒಂದೊಂದೇ ಬಿಡಿ ಪುಟದಮೇಲೆ ಬರೆಯಿಸಿದೆನು. ಹೀಗೆ ಬರೆಯಿಸಲಾಗಿ ಆರು ಸಾವಿರಾರು ಬಿಡಿ ಓಲೆಗಳಾದವು. ಈ ಕಾರ್ಯವನ್ನು ಮಾಡಲು ನಾನು ಇಬ್ಬರು ಲೇಖಕರನ್ನು ನಿಯಮಿಸಿಕೊಂಡೆನು. ಅವರು ನನ್ನ ಸಂಶೋಧನ ಕಾರ್ಯದಲ್ಲಿ ಮಾಡಿದ ಸಹಾಯವನ್ನು ನಾನು ಎಂದೂ ಮರೆಯುವಂತಿಲ್ಲ. ಅವರು ಹೀಗೆ ಸಹಾಯಕರಾಗದೆ ಹೋಗಿದ್ದರೆ ವಚನವಾಙ್ಮಯ ಕಾರ್ಯವನ್ನು ನಾನು ನಡೆಸುವದು ಕಠಿಣವಾಗುತ್ತಿತ್ತು. ನಾನು ನಕಲು ಮಾಡಿಸತಕ್ಕ ಅನೇಕ ಗ್ರಂಥಗಳು ತಾಡ ಓಲೆಯ ಮೇಲೆ ಬರೆದವುಗಳಾಗಿದ್ದವು. ನಾನು ನೇಮಿಸಿದ ಲೇಖಕರು ಅವುಗಳ ಅಕ್ಷರಗಳ ಪರಿಚಯವನ್ನು ಮೊದಲು ಮಾಡಿಕೊಂಡು ಅವರು ಬರೆಯಬೇಕಾಗುತ್ತಿತ್ತು. ಇವು ಅತ್ಯಂತ ಸಣ್ಣ ಅಕ್ಷರಗಳು. ಬಹುತರವಾಗಿ ಹುಡಿಹತ್ತಿ ಅಕ್ಷರಗಳು ಕಾಣದಂತಹ ಸ್ಥಿತಿಯಲ್ಲಿರುತ್ತಿದ್ದವು. ಇಂಥ ಓಲೆಗಳನ್ನು ಮೊದಲು ತೊಳೆದು ಆಮೇಲೆ ಬರೆಯುವ ಕಾರ್ಯವನ್ನು ಅವರು ನಡೆಸಬೇಕಾಗುತ್ತಿತ್ತು. ಕೆಲವು ಗ್ರಂಥಗಳು ಕೋರೀ ಕಾಗದಗಳ ಮೇಲೆ ಹಳೇ ತರದ ಅಕ್ಷರಗಳಿಂದ ಬರೆದವುಗಳಿರುತ್ತಿದ್ದವು. ಅವುಗಳ ಭಾವವನ್ನು ಮೊದಲು ತಿಳಿದುಕೊಂಡು ಅದರ ಸಹಾಯದಿಂದ ಅಕ್ಷರಗಳ ಗುರುತು ಹಚ್ಚಿ ಬರೆಯಬೇಕಾಗುತ್ತಿತ್ತು. ಹೀಗಿದ್ದರೂ ಈ ಉಭಯ ಲೇಖಕರು ಬೇಸರಿಕೆಯಿಲ್ಲದೆ ಅತ್ಯಂತ ಶ್ರಮಪಟ್ಟು ಎರಡು ವರ್ಷ ಶ್ರಮಪಟ್ಟರು. ಅವರು ಹೀಗೆ ಉಕ್ತಿಗಳನ್ನು ನಕಲುಮಾಡಿದ ಬಳಿಕ ನಾನು ಅವುಗಳನ್ನು ಮೂಲ ಗ್ರಂಥಕ್ಕೆ ಒರೆಹಚ್ಚಿ ತಪ್ಪುಗಳನ್ನು ತಿದ್ದುತ್ತ ಬರುತ್ತಿದ್ದೆನು. ಹೀಗೆ ನಕಲುಗಳನ್ನು ಮಾಡುವಲ್ಲಿ ನನಗೆ ಸಹಾಯ ಮಾಡಿದವರು ಶ್ರೀಯುತ ಸಂಗಪ್ಪ ಮಿರ್ಜಿ ಮು॥ ಕ್ಯಾಪಿ ಬಬಲೇಶ್ವರ ತಾಲೂಕ ವಿಜಾಪುರ ಇವರು ಮತ್ತು ನನ್ನ ಮನೆತನದ ಗುರುಗಳಾದ ಶ್ರೀ॥ ಮು॥ ಚಂದ್ರಶೇಖರಯ್ಯ ಶಿವರುದ್ರಯ್ಯ ಮಠ. ಮು॥ ಕ್ಯಾಪಿ ಜೋಳದಗುಡ್ಡ ತಾಲೂಕ ಬದಾಮಿ ಇವರು ಇದ್ದರು. ಒಂದು ವೇಳೆ ಶ್ರೀಯುತ ಧರ್ಮಗೌಡ ಪಾಟೀಲ ಇವರ ಧನಸಹಾಯ ಮತ್ತು ಮೇಲ್ಕಂಡ ಉಭಯ ಲೇಖಕರ ಲೇಖನ ಸಹಾಯ ನನಗೆ ದೊರಕದೆ

ಹೋಗಿದ್ದರೆ ನನ್ನಿಂದ ಹೊಸ ವಾಙ್ಮಯವನ್ನು ಪ್ರಕಟಿಸುವ ಕಾರ್ಯವು ಆಗುತ್ತಿದ್ದಿಲ್ಲ.

ಹೀಗೆ ಹಲವಾರು ಹಿಂದಿನ ಗ್ರಂಥಗಳ ನಕಲುಗಳನ್ನು ಮಾಡಿದಂತೆ ಒಂದೇ ಮುದ್ರಿಕೆಯುಳ್ಳ ವಚನಗಳನ್ನು ಆಯ್ದು ಅವುಗಳನ್ನು ಒತ್ತಟ್ಟಿಗೆ ಸೇರಿಸುವ ಕಾರ್ಯವನ್ನು ಜರುಗಿಸುತ್ತ ಬಂದೆನು. ಹೀಗೆ ಆಯಾ ವಚನಕಾರರ ಸ್ವತಂತ್ರ ವಚನಗ್ರಂಥಗಳು ಸಿದ್ಧವಾಗ ಹತ್ತಿದವು.

## ವಿಷಯಾನುಸಾರ ಕ್ರಮಗೊಳಿಸುವದು

ಹೀಗೆ ಗ್ರಂಥಗಳು ಸಿದ್ಧವಾಗಹತ್ತಲು ಪ್ರತಿಯೊಂದು ಗ್ರಂಥದಲ್ಲಿದ್ದ ವಚನಗಳನ್ನು ವಿಷಯಾನುಸಾರವಾಗಿ ಕ್ರಮಗೊಳಿಸಲು ಪ್ರಾರಂಭಿಸಿದೆನು. ಹೀಗೆ ಮಾಡುವಲ್ಲಿ ವಚನಶಾಸ್ತ್ರಸಾರ ಗ್ರಂಥದಲ್ಲಿ ನಾನು ಸ್ವೀಕರಿಸಿದ ಮಾದರಿಯನ್ನೇ ತೆಗೆದುಕೊಂಡೆನು. ಹೀಗೆ ಯಾವ ವಚನ ಸಂಗ್ರಹಗಳು ಮೊದಲು ಅವ್ಯಸ್ಥಿತ ಸ್ಥಿತಿಯಲ್ಲಿ ಇದ್ದವೋ ಅವುಗಳು ನಾನು ಕೈಕೊಂಡ ಪದ್ಧತಿಯ ಮೂಲಕ ವ್ಯವಸ್ಥಿತವಾದ ಸಣ್ಣ ದೊಡ್ಡ ಗ್ರಂಥಗಳಾದವು.

## ಮುದ್ರಿಕೆಗಳು

ಹೀಗೆ ಉಕ್ತಿಗಳು ಗ್ರಂಥರೂಪವನ್ನು ಹೊಂದಿದ ಬಳಿಕ ಅವುಗಳನ್ನು ರಚಿಸಿದವರಾರು ಎಂಬುದನ್ನು ಗೊತ್ತುಹಚ್ಚುವ ಕಾರ್ಯವನ್ನು ನಾನು ಕೈಕೊಳ್ಳಬೇಕಾಯಿತು. ಕೆಲವೊಂದು ತಾಡವೋಲೆಯ ನಾಲ್ಕಾರು ಪುಟಗಳಲ್ಲಿ ವಚನಗಳಿಗೆ ಮುದ್ರಿಕೆಗಳಾವವು ಮತ್ತು ಆ ಮುದ್ರಿಕೆಗಳು ಯಾವ ಯಾವ ವಚನಕಾರರವು ಎಂಬುದರ ಉಲ್ಲೇಖವಿದ್ದ ಪುಟಗಳು ಅಕಸ್ಮಾತ್ತಾಗಿ ನನ್ನ ಸಂಗ್ರಹದಲ್ಲಿ ದೊರೆತವು. ಈ ಪುಟಗಳಲ್ಲದೆ ಕೆಲವು ವಚನಸಂಗ್ರಹ ಗ್ರಂಥಗಳಲ್ಲಿ ಬೇರೆ ಬೇರೆ ವಚನಗಳ ಮಗ್ಗುಲು ಅವುಗಳನ್ನು ರಚಿಸಿದವರ ಹೆಸರುಗಳೂ ಲಿಖಿಸಿದ್ದು ನನಗೆ ಕಂಡುಬಂದಿತು. ಇವಲ್ಲದೆ ವಚನಸಂಗ್ರಹ ಗ್ರಂಥಗಳಲ್ಲಿ ಕೆಲವು ವಾದ ವಚನಗಳಿರುತ್ತವೆ. ಇವು ಶೂನ್ಯ ಸಂಪಾದನೆ, ಸಿದ್ಧರಾಮೇಶ್ವರ ವಾದ ವಚಗಳು ಇವೇ ಇರುತ್ತವೆ. ಅವುಗಳಲ್ಲಿ ಯಾವ

ಮುದ್ರಿಕೆಗಳು ಬೇರೆ ಬೇರೆ ವಚನಕಾರರವು ಎಂಬುದರ ಉಲ್ಲೇಖವು ಆಯಾ ವಚನಗಳೊಂದಿಗೆ ಇರುವುದು ಕಂಡುಬರುತ್ತದೆ. ಈ ಎಲ್ಲ ಗ್ರಂಥಗಳ ಆಧಾರದ ಮೇಲಿಂದ ಆಯಾ ವಚನಕಾರರ ಹೆಸರುಗಳನ್ನು ನಾನು ಗೊತ್ತುಮಾಡಿದೆನು. ಹೀಗೆ ಗೊತ್ತುಮಾಡಿದ ಮುದ್ರಿಕೆಗಳ ಪಟ್ಟಿಯನ್ನು ವಚನಶಾಸ್ತ್ರಸಾರ ಭಾಗ ೧ ಇದರ ಮೊದಲಿನ ಆವೃತ್ತಿಯ ಅಂತ್ಯದಲ್ಲಿ ಮತ್ತು ಅದರ ಎರಡನೆಯ ಆವೃತ್ತಿಯ ಉತ್ತರ ಭಾಗದಲ್ಲಿ ಕೊಟ್ಟಿದ್ದೇನೆ. ಯಾವಲ್ಲಿ ನನಗೆ ಸಂದೇಹವು ಉತ್ಪನ್ನವಾಗಿರುತ್ತದೋ ಅದರ ವಿವರವನ್ನು ನಾನು ಗ್ರಂಥದ ಕೆಳಗಡೆ ಟಿಪ್ಪಣಿಯಲ್ಲಿ ಕೊಟ್ಟಿದ್ದೇನೆ. ಹೀಗೆ ೧ನೇ ಆವೃತ್ತಿಯ ಕಾಲಕ್ಕೆ ೩೧೨ ವಚನಕಾರರ ಹೆಸರುಗಳು ಮತ್ತು ಎರಡನೆಯ ಆವೃತ್ತಿಯ ಕಾಲಕ್ಕೆ ೩೪೬ ಹೆಸರುಗಳು ನನಗೆ ಉಪಲಬ್ಧವಾದವು.

ಈ ಸಂಶೋಧನ ಕಾರ್ಯವನ್ನು ನಾನು ಬಿಟ್ಟೂಬಿಡದೆ ಎರಡುವರ್ಷ ನಡಿಸಿದೆನು. ಇದರ ಮಧ್ಯದಲ್ಲಿ ನಾನು ಬೇಸಿಗೆಯ ಸೂಟಿಯಲ್ಲಿ ಬೆಳಗಾವಿಗೆ ಹೋಗಿದ್ದು ಆಗಲೂ ನನ್ನ ಕೂಡ ಒಬ್ಬ ಲೇಖಕರನ್ನು ತೆಗೆದುಕೊಂಡು ಹೋಗಿದ್ದೆವು. ಅವರು ಬರೆಯುವ ಕೆಲಸವನ್ನು ಅವ್ಯಾಹತವಾಗಿ ನಡಿಸಿದ್ದರು. ಈ ಕಾಲದಲ್ಲಿ ನಾನು ಪಬ್ಲಿಕ್ ಪ್ರೊಸಿಕ್ಯೂಟರನ ಭಾರವಾದ ಕಾರ್ಯಗಳನ್ನು ಮಾತ್ರವಲ್ಲ, ಅದರಲ್ಲಿ ವೇಳೆಯನ್ನು ಉಳಿಸಿಕೊಂಡು ವಾಙ್ಮಯ ಸಂಶೋಧನ ಕಾರ್ಯಗಳಲ್ಲಿಯೂ ತೊಡಗಿದ್ದೆನು.

## ಸಾರ್ವಜನಿಕ ವ್ಯಾಖ್ಯಾನಗಳು ಮತ್ತು ಲೇಖಗಳು

ಹೀಗೆ ಕನ್ನಡ ಭಾಷೆಯಲ್ಲಿ ಮೊದಲು ಪರಿಚಯವಿಲ್ಲದ ಒಂದು ವಾಙ್ಮಯವು ಉಂಟಾಗಿದ್ದರೂ ನಾನು ಅದರ ವಿಷಯವಾಗಿ ಸಾರ್ವಜನಿಕವಾಗಿ ವ್ಯಾಖ್ಯಾನಗಳನ್ನು ಎಲ್ಲಿಯೂ ಕೊಟ್ಟಿರುವದಿಲ್ಲ. ಅಥವಾ ಲೇಖಗಳನ್ನು ಬರೆದಿಲ್ಲ. ಆದರೆ ಇದಕ್ಕೆ ಅಪವಾದವಾಗಿ ೧೯೨೧ರಲ್ಲಿ ಚಿಕ್ಕಮಗಳೂರು ಸಾಹಿತ್ಯ ಪರಿಷತ್ತಿನಲ್ಲಿ ವಚನಗಳ ವಿಷಯವಾಗಿ ಒಂದು ವ್ಯಾಖ್ಯಾನವನ್ನು ಕೊಟ್ಟೆನು. ಶ್ರೀಯುತ ಆಲೂರು ವೆಂಕಟರಾಯರ ಸೂಚನೆಯ ಮೇರೆಗೆ ಜಯಕರ್ನಾಟಕ ಪತ್ರಿಕೆಯಲ್ಲಿಯೂ ಒಂದು ಲೇಖವನ್ನು ಪ್ರಸಿದ್ಧಿಸಿದೆನು.

ಆಗ ಇವುಗಳ ಮಹತ್ವ ಎಷ್ಟಿದೆಂಬುದು ಕರ್ನಾಟಕದಲ್ಲಿಯ ವಾಙ್ಮಯ ಸಂಶೋಧಕರ ಲಕ್ಷ್ಯಕ್ಕೆ ಬಂದಂತೆ ನನಗೆ ತೋರಿತು. ಯಾಕೆಂದರೆ ಈ ಸಂಗತಿಗಳನ್ನು ಅವರಲ್ಲಿ ಅನೇಕರು ಈಗಲೂ ಕೂಡ ಸ್ಮರಿಸುವದುಂಟು.

## ಬಸವೇಶ್ವರನ ವಚನಗಳ ಇಂಗ್ಲಿಷ ಭಾಷಾಂತರ

೧೯೧೫ರಲ್ಲಿ ನಾನು ಬಸವೇಶ್ವರನ ವಚನಗಳನ್ನು ಇಂಗ್ಲಿಷ ಭಾಷೆಯಲ್ಲಿ ಭಾಷಾಂತರಿಸಲು ಪ್ರಾರಂಭಿಸಿ ಅದನ್ನು ನಾನು ಮರುವರ್ಷ ಮುಗಿಸಿದೆನು. ನಾನು ಇದಕ್ಕೂ ಪೂರ್ವದಲ್ಲಿ ೧೦-೧೫ ವರ್ಷ ಅನೇಕ ವಚನಗಳನ್ನು ನೋಡುತ್ತ ಬಂದಿದ್ದರೂ ಅವುಗಳ ಭಾಷಾಪದ್ಧತಿ, ಸರಳತನ ಮತ್ತು ಮೋಹಕತನ ಇವುಗ ದೃಷ್ಟಿಯಿಂದ ಬಸವೇಶ್ವರನ ವಚನಗಳಿಗೆ ಶ್ರೇಷ್ಠ ಸ್ಥಾನವು ಸಲ್ಲುತ್ತದೆಂದು ನನಗೆ ತೋರಿದ್ದರಿಂದ ಇದರ ಭಾಷಾಂತರ ಮಾಡಿದೆನು. ನಾನು ರೆವ॥ ಜೇ. ಎಸ್. ಫಾರಕ್ಯುಹಾರ ಎಂಬ ಹೆಸರಿನ ವಾಙ್ಮಯ ಸಂಶೋಧಕರ ಸೂಚನೆಯ ಮೇರೆಗೆ ಬಸವೇಶ್ವರನ ಈ ವಚನಗಳಲ್ಲಿ ಮುಖ್ಯವಾದವುಗಳನ್ನು ಆರಿಸಿ ಇಂಡಿಯನ್ ಆ್ಯಂಟಿಕ್ವರಿ ಎಂಬ ಇಂಗ್ಲಿಷ ಪತ್ರಿಯಲ್ಲಿ ೧೯೨೨ನೇ ಇಸ್ವಿಯಲ್ಲಿ ಪ್ರಸಿದ್ಧಪಡಿಸಿದೆನು.

## ಶಿವಾನುಭವ ಪತ್ರಿಕೆಯ ಪ್ರಾರಂಭ

ವಿಜಾಪುರಕ್ಕೆ ೧೯೨೩ರಲ್ಲಿ ಬಂದ ಬಳಿಕ ಮೂರು ವರ್ಷಗಳ ತರುವಾಯ ನನ್ನ ಪಬ್ಲಿಕ್ ಪ್ರೊಸೀಕ್ಯೂಟರರ ಸ್ಥಳಕ್ಕಿದ್ದ ಅವಧಿಯು ಮುಗಿಯಿತು. ಇದರ ಅವಧಿಯು ೧೯೨೬ರಲ್ಲಿ ಮುಗಿಯುವದರ ಒಳಗಾಗಿ ಅಂದರೆ ೨೨-೧೧-೨೫ನೇ ದಿವಸ ಈ ವರೆಗೆ ನಾನು ಸಂಶೋಧಿಸುತ್ತ ಬಂದಿದ್ದ ವಚನವಾಙ್ಮಯವನ್ನು ಪ್ರಕಟಿಸುವ ಕಾರ್ಯವನ್ನು ಕೈಕೊಳ್ಳಬೇಕೆಂದು ನಿಶ್ಚಯಿಸಿ ಒಂದು ಅಚ್ಚುಕೂಟವನ್ನು ವಿಜಾಪುರದಲ್ಲಿಯೇ ಸ್ಥಾಪಿಸಿದೆನು. ಮತ್ತು ಅದರಲ್ಲಿ "ಶಿವಾನುಭವ" ಹೆಸರಿನ ಮಾಸಪತ್ರಿಕೆಯನ್ನು ೧-೨-೧೯೨೬ನೇ ದಿವಸ ಪ್ರಸಿದ್ಧಿಸಲು ಪ್ರಾರಂಭಿಸಿದೆನು.

ಶಿವಶರಣರ ತತ್ವಗಳ ಉದ್ದೇಶವು ಶಿವನ ಅನುಭವ ಎಂದರೆ ಶಿವನನ್ನು ಕಾಣುವದು ಅಥವಾ ಅರಿಯುವದು ಇದೇ ಮುಖ್ಯವಾಗಿದ್ದರಿಂದಲೂ ಬಸವಾದಿ ಪ್ರಮಥರು ಕಲ್ಯಾಣ ಪಟ್ಟಣದಲ್ಲಿದ್ದಾಗ ತಮ್ಮ ಶರಣರ ಕೂಟಕ್ಕೆ "ಶಿವಾನುಭವ ಮಂಟಪ" ಎಂಬ ಹೆಸರನ್ನು ಇಟ್ಟಿದ್ದರಿಂದಲೂ ನಾನು ಈ ಪತ್ರಿಕೆಗೆ "ಶಿವಾನುಭವ" ಎಂಬ ಹೆಸರನ್ನಿಟ್ಟೆನು. ಇಂಗ್ಲಿಷ ಭಾಷೆಯಲ್ಲಿ ಶಿವಾನುಭವ ತತ್ವಗಳನ್ನು 'ಮಿಸ್ಟಿಸಿಜಮ್' ಎಂದು ಕರೆಯಬಹುದು. ಈ ಶಬ್ದವು ಅದರ ಸ್ವರೂಪವನ್ನು ಚೆನ್ನಾಗಿ ವಿವರಿಸುವಂಥದಿರುತ್ತದೆ.

ನಾನು ಈ ಪತ್ರಿಕೆಯನ್ನು ಮೊದಲು ತ್ರೈಮಾಸಿಕವನ್ನಾಗಿ ಮಾಡಿದೆನು. ಒಂದು ವೇಳೆ ಇದನ್ನು ನಾನು ಮಾಸಿಕವಾಗಿ ಮಾಡಿದ್ದರೆ ಈ ವರೆಗೆ ಅಪರಿಚಿತವಾಗಿದ್ದ ಈ ವಾಙ್ಮಯದ ವಿಷಯವಾಗಿ ಸಾರ್ವಜನಿಕರಿಂದ ನಾನಷ್ಟು ಲಕ್ಷ ಕೊಡಲಾರರೆಂದು ನನಗೆ ತೋರಿತು. ಹೀಗೆ ಈ ಪತ್ರಿಕೆಯು ತ್ರೈಮಾಸಿಕವಾಗಿದ್ದರೂ ಅದರ ಪುಟ ಸಂಖ್ಯೆಯು ೧೬೦ ಇದ್ದಿತು. ಅದ್ದರಿಂದ ಪ್ರತಿಯೊಂದು ಸಂಚಿಕೆಯಲ್ಲಿ ಗ್ರಂಥಗಳನ್ನು ಸಮಗ್ರವಾಗಿ ಅಚ್ಚು ಹಾಕುವದು ಸುಲಭವಾಗುವದೆಂದು ನನಗೆ ತೋರಿತು. ಹೀಗೆ ನಾನು ಶಿವಾನುಭವ ಪತ್ರಿಕೆಯನ್ನು ೧೯೨೬ರಲ್ಲಿ ಪ್ರಾರಂಭಿಸಿ ಅಂದಿನಿಂದ ೨೫ ವರ್ಷಗಳವರೆಗೆ ಒಂದೇ ಸಮನೇ ಅದನ್ನು ಪ್ರಕಟಮಾಡುತ್ತ ಬಂದಿದ್ದೇನೆ. ಮಧ್ಯದಲ್ಲಿ ಅನಿವಾರ್ಯ ಕಾರಣಗಳ ಮೂಲಕ ನಾನು ಕೆಲವು ಸಂಚಿಕೆಗಳನ್ನು ನಿಲ್ಲಿಸಿರಬಹುದು. ಆದರೆ ಕೆಲವು ಅಪವಾದಗಳನ್ನುಳಿದು ವರ್ಷಾಂತ್ಯದಲ್ಲಿ ಪ್ರಕಟವಾಗಬೇಕಾದಷ್ಟು ಪುಟಗಳನ್ನು ಪೂರ್ತಿ ಮಾಡುತ್ತಲೇ ಬಂದಿದ್ದೇನೆ. ಈ ಪತ್ರಿಕೆಯ ಮೂಲಕ ಈ ವರೆಗೆ ಜರುಗಿದ ಕಾರ್ಯಗಳು ಸಾರ್ವಜನಿಕರ ಇದಿರಿಗೆ ಇರುತ್ತವೆ. ಆದರೂ ಅವುಗಳನ್ನು ನಾನು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸುತ್ತೇನೆ.

## ಒಟ್ಟು ಗ್ರಂಥಗಳ ಪ್ರಮಾಣ

ನಾನು ಹೋದ ೨೫ ವರ್ಷಗಳಲ್ಲಿ ಒಟ್ಟು ೭೫ ಗ್ರಂಥಗಳನ್ನು ಪ್ರಕಟಿಸುವ ಕಾರ್ಯ ಮಾಡಿದ್ದೇನೆ. ಇವುಗಳಲ್ಲಿ ನಾಲ್ಕೈದು ಗ್ರಂಥಗಳು ಮಾತ್ರ

ಪೂರ್ತಿಯಾಗಿರುವದಿಲ್ಲ. ಇವುಗಳು ಸಹ ಶಿವಾನುಭವ ಪತ್ರಿಕೆಯಲ್ಲಾಗಲೀ ಅಥವಾ ಸ್ವತಂತ್ರ ರೀತಿಯಿಂದಾಗಲೀ ಪ್ರಕಟವಾಗುವದರಲ್ಲಿವೆ. ಈ ಎಲ್ಲ ಗ್ರಂಥಗಳು ಪುರಾತನ ಮೂಲ ಗ್ರಂಥಗಳಾಗಿವೆ. ಇವೆಲ್ಲವುಗಳ ಒಟ್ಟು ಪುಟ ಸಂಖ್ಯೆ ೮೦೬೫ ಇರುತ್ತದೆ. ಪ್ರತಿಯೊಂದು ಗ್ರಂಥದ ಪುಟ ಸಂಖ್ಯೆ ೨೫ ರಿಂದ ೬೫೦ ಪುಟಗಳ ವರೆಗೂ ಇರುತ್ತದೆ. ಈ ಎಲ್ಲವುಗಳನ್ನು ಕೂಡಿಸಿ ಸರಾಸರಿ ಲೆಕ್ಕ ಮಾಡಿದಲ್ಲಿ ಒಂದು ಗ್ರಂಥವು ೧೧೦ ಪುಟವುಳ್ಳದ್ದಾಗುವದು. ಮತ್ತು ಒಂದು ವರ್ಷದಲ್ಲಿ ಮೂರು ಗ್ರಂಥಗಳನ್ನು ಹೊರ ಹಾಕಿದಂತಾಗುತ್ತದೆ. ಆ ಅವಧಿಯಲ್ಲಿ ಹಳೇ ಗ್ರಂಥಗಳನ್ನು ಬರೆಯಿಸುವದು ಶೋಧಿಸುವದು ಪ್ರತಿ ಮಾಡುವದು ಅಚ್ಚು ಹಾಕಿಸುವದು ಇವೆಲ್ಲವುಗಳು ಸಮಾವೇಶವಾಗುತ್ತವೆ. ಈ ಕಾರ್ಯಗಳಲ್ಲದೆ ಪ್ರತಿಯೊಂದು ಸಂಚಿಕೆಗೆ ವಿದ್ವಜ್ಜನರ ಲೇಖಗಳನ್ನು ಸಂಗ್ರಹಿಸುವದು ಮತ್ತು ನಾನು ಲೇಖಗಳನ್ನು ಬರೆಯುವದು ಈ ಕಾರ್ಯಗಳನ್ನು ಸಹ ಮಾಡಿದ್ದಾಗಿರುತ್ತದೆ. ಇಂಥ ಲೇಖಗಳ ಪುಟ ಸಂಖ್ಯೆ ಒಟ್ಟು ಸುಮಾರು ೧೨೦೦೦ ಆಗಿರುತ್ತದೆ. ಈ ಗ್ರಂಥಗಳಲ್ಲದೆ ನಾಲ್ಕಾರು ಗ್ರಂಥಗಳು ಸ್ವತಂತ್ರವಾಗಿ ಮುದ್ರಣ ಹೊಂದಿರುತ್ತವೆ. ಹೀಗೆ ೨೫ ವರ್ಷಗಳವರೆಗೆ ಬಿಡುವಿಲ್ಲದೆ ಒಂದೇ ಸಮನೆ ಕಾರ್ಯಮಾಡುತ್ತ ಬಂದಿದ್ದರ ಫಲವು ಇದಾಗಿರುತ್ತದೆ.

ನಾನು ಈ ಅವಧಿಯಲ್ಲಿ ಹೊರಗಿನ ಬೇರೆ ಯಾವ ಕೆಲಸಗಳಲ್ಲಿಯೂ ಸೇರಿಕೊಂಡಿರುವದಿಲ್ಲ. ಆದರೆ ಶಿಕ್ಷಣ ಕಾರ್ಯಗಳಿಗೆ ಸಂಬಂಧಿಸಿರುವ ಕಾರ್ಯಗಳು ಅಂದರೆ ಮುಂಬಯಿ ವಿಶ್ವವಿದ್ಯಾಲಯವು ಅಥವಾ ವಿಜಾಪುರ ಮುನಸಿಪಲ್ ಸ್ಕೂಲ ಬೋರ್ಡ ಇವುಗಳಲ್ಲಿ ಮಾತ್ರ ಸಭಾಸದನಾಗಿ ಕಾರ್ಯ ಮಾಡಿದ್ದೇನೆ. ಕೆಲವು ವರ್ಷ ನಾನು ವಿಜಾಪುರ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯಲ್ಲಿ ಸರ್ವಾಧಿಕಾರಿಯಾಗಿ ಕೆಲಸ ಮಾಡಿದೆನು. ನಾನು ಈ ಅವಧಿಯಲ್ಲಿ ಬಹುಶಃ ವ್ಯಾಖ್ಯಾನಗಳಿಗೋಸ್ಕರ ಪರ ಊರುಗಳಿಗೆ ಹೋಗಿರುವದಿಲ್ಲ. ಒಂದು ವೇಳೆ ನಾನು ಹೋಗುವ ಪರಿಸ್ಥಿತಿಯನ್ನು ಇಟ್ಟುಕೊಂಡಿದ್ದರೆ ನನ್ನ ಕಾಲವ್ಯಯವಾಗುತ್ತಿತ್ತು. ಇದರಿಂದ ಪ್ರಸ್ತುತ ಕಾರ್ಯಗಳಿಗೆ ವ್ಯತ್ಯಯವು ನಿಃಸಂಶಯವಾಗಿ ಬಂದು ನನಗೆ ಹಾನಿಯಾಗುತ್ತಿತ್ತು.

ಈ ಕಾಲದಲ್ಲಿ ಪರಗ್ರಾಮಗಳಿಗೆ ಹೋಗಲೇ ಬೇಕಾದರೆ ಅಲ್ಲಿ ಕೆಲಸ ತೀರಿದ ಕೂಡಲೆ ಒಂದು ದಿನವನ್ನಾದರೂ ಕಳೆಯದೆ ವಿಜಾಪುರಕ್ಕೆ ಓಡಿ ಬರುತ್ತಿದ್ದೆನು. ಇಷ್ಟೇ ಅಲ್ಲ, ಆ ಪಟ್ಟಣಗಳಲ್ಲಿರುವ ನೋಡತಕ್ಕ ಸ್ಥಳಗಳನ್ನು ಸಹ ನಾನು ನೋಡುವದರಲ್ಲಿ ವೇಳೆಗಳೆಯುತ್ತಿದ್ದಿಲ್ಲ. ನಾನು ಬೆಂಗಳೂರ ಮೈಸೂರು ಮೊದಲಾದ ಕೆಲವು ಪಟ್ಟಣಗಳಿಗೆ ಹೋಗಿದ್ದರೂ ಅವುಗಳಲ್ಲಿ ನೋಡತಕ್ಕಂಥ ಸ್ಥಳಗಳನ್ನು ಸಹ ನಾನು ಇನ್ನೂ ಪೂರ್ಣ ವಾಗಿ ನೋಡಿರುವದಿಲ್ಲ. ನಾನು ವಿಜಾಪುರದಲ್ಲಿ ನಾಲ್ಕೆಂಟುಬಾರಿ ಮಾತ್ರ ಸಿನೇಮಾ ಗೃಹಗಳಿಗೆ ಹೋಗಿದ್ದೇನೆಯೋ ಹೊರತು ಹೆಚ್ಚು ಬಾರಿ ನೋಡ ಲಿಕ್ಕೆ ಹೋಗಿರುವದಿಲ್ಲ. ಆದರೆ ಹೊರಗಿನಿಂದ ವ್ಯಾಖ್ಯಾನಕಾರರು ವಿಜಾ ಪುರಕ್ಕೆ ಬಂದಿದ್ದರೆ ಅಥವಾ ಇಲ್ಲಿ ಬೇರೆ ಸಭಾ ಕಾರ್ಯಗಳು ಜರುಗು ತ್ತಿದ್ದರೆ ಮಾತ್ರ ನಾನು ಅವುಗಳಿಗೆ ತಪ್ಪದೆ ಹೋಗುತ್ತಿರುತ್ತೇನೆ. ಆದರೂ ಒಕ್ಕಲುತನ ಸುಧಾರಣೆ ಅಥವಾ ಸಹಕಾರಿ ಸಂಘಗಳು ಇಂಥ ಉಪ ಯುಕ್ತ ಚಟುವಟಿಕೆಗಳಲ್ಲಿ ಭಾಗವಹಿಸುವ ಸಂಧಿಗಳು ಒದಗಿದರೆ ಅವು ಗಳಿಂದ ನಾನು ದೂರವಿರುವದಿಲ್ಲ. ಈ ಪ್ರಕಾರದ ನಾನು ಹೋದ ೨೫ ವರ್ಷಗಳಿಂದ ವಾಙ್ಮಯ ಕಾರ್ಯ ಮಾಡುತ್ತ ಬಂದಿದ್ದರಿಂದ ನಾನು ಮೇಲೆ ವಿವರಿದಂತೆ ನನ್ನಿಂದ ಕೆಲಮಟ್ಟಿಗಾದರೂ ಕಾರ್ಯಗಳು ಜರುಗಿರು ತ್ತವೆ. ಇನ್ನುಮೇಲೆ ನಾನು ಪ್ರಕಟಿಸಿದ ೭೫ ಗ್ರಂಥಗಳು ಯಾವ ರೀತಿಯ ವಾಗಿರುತ್ತವೆಂಬುದನ್ನು ಸ್ಥೂಲ ದೃಷ್ಟಿಯಿಂದ ವಿವರಿಸುತ್ತೇನೆ.

## (೧) ಮೂಲ ವಚನ ಗ್ರಂಥಗಳು

ನಾನು ಪ್ರಕಟಿಸಿದ ಗ್ರಂಥಗಳಲ್ಲಿ ಮೂಲ ವಚನ ಗ್ರಂಥಗಳು ಕೆಲವು ಇದ್ದು ಅವುಗಳನ್ನು ನಾನು ಇದ್ದಕ್ಕಿದ್ದಂತೆ ಪ್ರಕಟಿಸಿರುತ್ತೇನೆ. ಅವುಗಳಲ್ಲಿ ನಾನು ಯಾವ ಬದಲಾವಣೆಗಳನ್ನು ಮಾಡಿರುವದಿಲ್ಲ. ಇವು ವೀರಶೈವರಲ್ಲಿ ಮಹತ್ವದ ಗ್ರಂಥಗಳು. ಅವುಗಳನ್ನು ಕೆಳಗೆ ವಿವರಿಸಿದ್ದೇನೆ.

### ಬಸವೇಶ್ವರನ ವಚನಗಳು

ಈ ವಚನಗಳ ಸಮಗ್ರ ಗ್ರಂಥವನ್ನು ನಾನು ಶಿವಾನುಭವ ಪತ್ರಿ ಕೆಯ ೧ನೇ ಸಂಪುಟದ ಒಂದನೆಯ ಮತ್ತು ಎರಡನೆಯ ಸಂಚಿಕೆ

ಗಳಲ್ಲಿ ಪೂರ್ಣವಾಗಿ ಮುದ್ರಿಸಿದೆನು. ಈ ಆವೃತ್ತಿಯನ್ನು ನಾನು ಬಳ್ಳಾರಿಯಲ್ಲಿ ಪ್ರಸಿದ್ಧಿಸಿದ ಒಂದು ಅಚ್ಚುಹಾಕಿದ ಪ್ರತಿ ಮತ್ತು ಮುದ್ದೇಬಿಹಾಳ ತಾಲೂಕಿನಲ್ಲಿ ಕುಚಬಾಳ ಎಂಬ ಗ್ರಾಮದ ಗೌಡರಲ್ಲಿ ದೊರೆತ ಒಂದು ಹಸ್ತಲಿಖಿತ ಪ್ರತಿ ಇವುಗಳ ಸಹಾಯದಿಂದ ಸಿದ್ಧಮಾಡಿದೆನು. ಇದರಿಂದ ಈ ಪ್ರತಿಯು ಸ್ವಾಭಾವಿಕವಾಗಿಯೇ ಶುದ್ಧವಾಗಿರಲಿಲ್ಲ. ಈ ಕಾಲದಲ್ಲಿ ನನಗೆ ಈ ವಚನಗಳ ಪ್ರತಿಗಳು ಹೆಚ್ಚಿಗೆ ದೊರೆಕಿದ್ದಿಲ್ಲ. ಆದರೆ ೭-೮ ವರ್ಷಗಳ ತರುವಾಯ ಎರಡನೆಯ ಆವೃತ್ತಿಯನ್ನು ಸಿದ್ಧಪಡಿಸುವ ಸಂಧಿಯು ಬರಲಾಗಿ ಆಗ ನನಗೆ ದೊರೆತ ಮೂರು ನಾಲ್ಕು ಪ್ರತಿಗಳು ಮತ್ತು ಟೀಕಾತ್ಮಕ ಒಂದು ಹಸ್ತಲಿಖಿತ ಪ್ರತಿಯು ದೊರೆತದ್ದರಿಂದ ಈ ಗ್ರಂಥಗಳ ಸಹಾಯದಿಂದ ಹೆಚ್ಚು ಶುದ್ಧವಾದ ಪ್ರತಿಯನ್ನು ಸಿದ್ಧಪಡಿಸಲು ನನಗೆ ಶಕ್ಯವಾಯಿತು. ಮುಂದೆ ಕೆಲವು ವರ್ಷಗಳು ಆದ ಬಳಿಕ ಈ ಗ್ರಂಥವನ್ನು ಶಿವಾನುಭವ ಸಂಘಗಳಲ್ಲಿ ಉಪಯೋಗಿಸುವದಕ್ಕೆ ಹೆಚ್ಚು ಪ್ರಶಸ್ತವಾಗಿರಬೇಕೆಂಬ ಉದ್ದೇಶದಿಂದ ವಿಷಯಾನುಸಾರವಾಗಿ ಅದನ್ನು ಕ್ರಮಗೊಳಿಸಿ ಅಚ್ಚುಹಾಕಿದೆನು. ಅದು ಈಗ ಪ್ರಕಟಿತವಿರುತ್ತದೆ. ಈ ಗ್ರಂಥವನ್ನು ಈಚೆಗೆ ಶ್ರೀಯುತ ಸಿ. ಸಿ. ಬಸವನಾಳ ಇವರು "ಬಸವಣ್ಣನವರ ಷಟ್‌ಸ್ಥಲದ ವಚನಗಳು" ಈ ಹೆಸರಿನಿಂದ ಸಿದ್ಧಪಡಿಸಿದ್ದು ಅದನ್ನು ಈ ಪ್ರತಿಗೆ ಹೋಲಿಸಲಾಗಿ ಈ ವಚನಗಳಲ್ಲಿ ಕೆಲವು ಮಾತ್ರ ವ್ಯತ್ಯಾಸಗಳು ಕಂಡುಬರುತ್ತವೆಯೋ ಹೊರ್ತು ಅರ್ಥಕ್ಕೆ ಬಾಧೆ ಬರುವಂಥ ವಚನಗಳ ಸಂಖ್ಯೆ ಹೆಚ್ಚು ಇರುವದಿಲ್ಲ. ಇದಕ್ಕೆ ಅಪವಾದವಾಗಿ ಕೆಲವು ವಚನಗಳು ಮಾತ್ರ ಇವೆ. ಅವುಗಳನ್ನು ಶ್ರೀಯುತ ಬಸವನಾಳ ಇವರು ತಮ್ಮ ಗ್ರಂಥದ ಪ್ರಸ್ತಾವನೆಯಲ್ಲಿ ಉಲ್ಲೇಖಿಸಿರುತ್ತಾರೆ.

## ಪ್ರಭುದೇವರ ವಚನಗಳು

ಈ ಗ್ರಂಥದ ಕೆಲಭಾಗವನ್ನು ನಾನು ೧೯೦೨ ಇಸ್ವಿಯಲ್ಲಿ ಬರೆದಿಟ್ಟಿದ್ದೆನು. ಮುಂದೆ ಕೆಲವು ಪ್ರತಿಗಳು ದೊರೆಯಲಾಗಿ ಅವುಗಳ ಸಹಾಯದಿಂದ ಈ ಮಹತ್ವದ ಗ್ರಂಥವನ್ನು ನಾನು ಶಿವಾನುಭವದಲ್ಲಿ

ಪ್ರಕಟಿಸಿದೆನು. ಈ ಗ್ರಂಥದಲಿಯ ವಚನಗಳಲ್ಲದೆ ಅದರ ನನ್ನೂ ಅನೇಕ ವಚನಗಳು ನನಗೆ ದೊರೆತಿದ್ದು ಅವುಗಳನ್ನು ಈ ಗ್ರಂಥದ ಎರಡನೆಯ ಆವೃತ್ತಿಯಲ್ಲಿ ಸೇರಿಸಿ ಪ್ರಕಟಿಸಲು ಇಚ್ಛಿಸಿದ್ದೇನೆ.

### ಚನ್ನಬಸವೇಶ್ವರನ ವಚನಗಳು

ಇವನ್ನಾದರೂ ಮೂಲದಲ್ಲಿ ಇದ್ದಂತೆಯೇ ಪ್ರಸಿದ್ಧಿಸಿದ್ದೇನೆ. ಆದರೆ ಅನೇಕ ಹೊಸ ವಚನಗಳು ಈಚೆಗೆ ನನಗೆ ಉಪಲಬ್ಧವಾಗಿದ್ದು ಅವು ಬಹಳ ಮಹತ್ವದವಿರುತ್ತವೆ. ಅವುಗಳನ್ನು ಸಹ ಇದರಲ್ಲಿ ಸಮಾವೇಶ ಮಾಡುವದು ಅವಶ್ಯವಿದೆ. ಅವುಗಳನ್ನೊಳಕೊಂಡು ಈ ವಚನಗಳನ್ನು ಪ್ರಕಟನೆಗೆ ಸಿದ್ಧಪಡಿಸಿರುತ್ತೇನೆ.

### ಸಿದ್ಧರಾಮೇಶ್ವರನ ವಚನಗಳು

ಈ ಗ್ರಂಥದಲ್ಲಿಯ ಅನೇಕ ವಚನಗಳನ್ನು ವಚನಶಾಸ್ತ್ರಸಾರ ಭಾಗ ೩ ಇದರಲ್ಲಿ ಹೆಚ್ಚಾಗಿ ಉಪಯೋಗಿಸಿದ್ದೇನೆ. ಇದು ಒಂದು ಮಹತ್ವದ ವಚನ ಗ್ರಂಥವಾಗಿದೆ. ಈತನ ವಾದ ವಚನಗಳು ಎರಡು ಬೇರೆ ಬೇರೆ ಇದ್ದು ಅವುಗಳನ್ನು ಪ್ರಟಿಸಲು ನಾನು ಬರೆಯಿಸಿ ಇಟ್ಟಿದ್ದೇನೆ.

### **ಶೂನ್ಯ ಸಂಪಾದನೆ**

ಇದು ಅತ್ಯಂತ ಮಹತ್ವದ ವಚನಗ್ರಂಥವಾಗಿದೆ. ನಾನು ಪ್ರಕಟ ಮಾಡುವ ಪೂರ್ವದಲ್ಲಿ ಈ ಗ್ರಂಥದ ಅಸ್ತಿತ್ವವು ಸಹ ಸಾರ್ವಜನಿಕರಲ್ಲಿ ಗೊತ್ತು ಇರಲಿಲ್ಲ. ಆದರೆ ಇದು ಪ್ರಕಟವಾದ ಬಳಿಕ ಅದರ ಮಹತ್ವವು ಎಷ್ಟಿದೆಂಬುದು ಜನರಿಗೆ ತಿಳಿಯಹತ್ತಿದೆ. ಇದು ಬಹು ದೊಡ್ಡ ಗ್ರಂಥವಾಗಿರುತ್ತದೆ.

ಸಂಗನಬಸವೇಶ್ವರ ವಚನಗಳು. ಶಿವಾನುಭವ ಸೃಷ್ಟಿಯ ವಚನಗಳು ಇವು ಸ್ವತಂತ್ರ ವಚನಗ್ರಂಥಗಳಾಗಿರುತ್ತವೆ. ಮಹಾನುಭಾವ

ಪ್ರಕಾಶಿಕೆ ಎಂಬ ಗ್ರಂಥವನ್ನು ಹಾಗಲವಾಡಿ ಸಂಸ್ಥಾನದ ಒಬ್ಬ ರಾಜರು ಬರೆದಿದ್ದಾರೆ. ಅದನ್ನಾದರೂ ನಾನು ಇದ್ದಂತೆ ಪ್ರಕಟಿಸಿದ್ದೇನೆ.

· ಪ್ರಾಣಲಿಂಗ ಜ್ಞಾನದರ್ಪಣ

ಈ ಗ್ರಂಥವು ಬಹು ಅಮೌಲ್ಯವಾದದ್ದು. ಶಿವಾನುಭವ ಶಾಸ್ತ್ರದ ಒಳಗಿನ ಗುಟ್ಟುಗಳನ್ನು ಅರುಹುವಂಥದ್ದು. ಅದನ್ನು ನಾನು ಇದ್ದಕ್ಕಿದ್ದ ಹಾಗೆ ಈಚೆಗೆ ಪ್ರಕಟಪಡಿಸಿರುತ್ತೇನೆ.

ಮಹಿಮ್ನ ಸ್ತೋತ್ರ :— ಈ ಗ್ರಂಥವನ್ನು ಶ್ರೀ ಶಂಭುಲಿಂಗ ಶಿವಾಚಾರ್ಯರು ವಿಜಾಪುರ ಇವರು ಅರ್ಥ ಸಹಿತವಾಗಿ ಬರೆದು ಸಿದ್ಧಪಡಿಸಿರುವರು. ಇದನ್ನೇ ಪ್ರಸಿದ್ಧಿಸಿರುವೆನು.

(೨) ಮೂಲ ವಚನಗ್ರಂಥಗಳಲ್ಲಿ ವಿಷಯಾನುಸಾರ ಜೋಡಣೆ

ಅನೇಕ ವಚನ ಗ್ರಂಥಗಳು ಸಮಗ್ರವಾಗಿ ದೊರೆತಿದ್ದರೂ ಅವುಗಳ ಅಂತಸ್ಥ ಜೋಡಣೆಯಲ್ಲಿ ಯಾವ ಪದ್ಧತಿಯು ಇರದ್ದರಿಂದ ವಚನಕಾರನ ಭಾವವು ಚನ್ನಾಗಿ ಗೊತ್ತಾಗುವದಿಲ್ಲ. ಅದ್ದರಿಂದ ಇಂಥ ಸಂಗ್ರಹ ಗ್ರಂಥಗಳಲ್ಲಿರುವ ಹತ್ತೆಂಟು ವಚನಗಳನ್ನು ಓದಿದಲ್ಲಿ ವಚನಕಾರನ ಅಭಿಪ್ರಾಯವು ಯಾವ ವಿಷಯಗಳ ಸಂಬಂಧವಾಗಿ ಹೇಗಿರುತ್ತದೆಂಬುವದರ ತಿಳಿವಳಿಕೆಯು ವಾಚಕರಿಗೆ ಆಗುವದಿಲ್ಲ. ಇಂಥವುಗಳನ್ನು ನಾನು ಅಷ್ಟಾವರಣ ಅಥವಾ ಷಟ್‌ಸ್ಥಲಗಳಿಗನುಸಾರವಾಗಿ • ಜೋಡಣೆಯನ್ನು ಮಾಡಿದ್ದುಂಟು. ಹೀಗೆ ಮಾಡುವಲ್ಲಿ ಈ ವಿಷಯಗಳಿಗೆ ಸಂಬಂಧಿಸಿದ ಅವುಗಳೊಳಗಿನ ಅವಾಂತರ ವಿಷಯಗಳನ್ನು ಸಹ ವ್ಯವಸ್ಥೆಗೊಳಿಸಲು ಯತ್ನಿದ್ದೇನೆ. ಈ ಒಳಗಿನ ವಿಷಯಗಳಿಗೆ ಅವುಗಳಿಗೆ ತಕ್ಕ ಶೀರ್ಷಿಕೆಗಳನ್ನು ಹಾಕಿದ್ದೇನೆ. ವಚನಶಾಸ್ತ್ರಸಾರ ಗ್ರಂಥಗಳನ್ನು ರಚಿಸುವಲ್ಲಿ ನಾನು ಕೈಕೊಂಡ ಪದ್ಧತಿಯನ್ನೇ ಇವುಗಳಲ್ಲಿ ಸ್ವೀಕರಿಸಿದ್ದೇನೆ. ಈ ಪ್ರಕಾರದ ವ್ಯವಸ್ಥೆಯನ್ನು ಮಾಡಿದ ವಚನಗಳು ಯಾವವೆಂದರೆ —

ಗಣದಾಸಿ ವೀರಣ್ಣ, ಘನಲಿಂಗ, ಹಡಪದಪ್ಪಣ್ಣ, ಲಿಂಗಮ್ಮ ಮತ್ತು ಮರೆಮಿಂಡದೇವ ಇವರ ವಚನಗಳಲ್ಲಿ ಈ ತೆರದ ವ್ಯವಸ್ಥೆ ಮಾಡಿ ಪ್ರಸಿದ್ಧಿಸಿದ್ದೇನೆ.

### (೩) ಸಂಗ್ರಹ ಗ್ರಂಥಗಳು

ನನ್ನ ದೃಷ್ಟಿಗೆ ಬಿದ್ದ ವಚನಗಳಲ್ಲಿ ಅನೇಕ ಸಂಗ್ರಹ ವಚನಗಳಿರುತ್ತವೆ. ಅಂದರೆ ಅನೇಕ ವಚನಕಾರರ ವಚನಗಳು ಕೆಲಕೆಲವು ಮಾತ್ರ ಎಲ್ಲವುಗಳಲ್ಲಿ ದೊರೆಯುತ್ತವೆ. ಇಂಥವುಗಳನ್ನು ನಾನು ಬೇರೆಯಾಗಿ ತೆಗೆದು ಹಿಂದುಗಡೆ ಅವುಗಳನ್ನು ಒತ್ತಟ್ಟಿಗೆ ಸೇರಿಸಿ ಅನೇಕ ಗ್ರಂಥಗಳನ್ನು ಸಿದ್ಧಪಡಿಸಿದ್ದೇನೆ. ಹೀಗೆ ಸಿದ್ಧಪಡಿಸಿದಬಳಿಕ ಅವುಗಳನ್ನು ಮೇಲೆ ವಿವರಿಸಿದಂತೆ ಕೆಲವೊಂದು ಪದ್ಧತಿಯ ಮೇರೆಗೆ ವ್ಯವಸ್ಥೆಗೊಳಿಸಿದ್ದೇನೆ. ಇಂಥ ವಚನಗಳು ಯಾವವೆಂದರೆ—

ಮಹಾದೇವಿಯಕ್ಕ, ಅಂಬಿಗರ ಚೌಡಯ್ಯ, ಆದಯ್ಯ, ದೇವರ ದಾಸಿಮಯ್ಯ, ಸಕಳೇಶಮಾದರಸ, ಉರಿಲಿಂಗಪೆದ್ದಿ, ಮಡಿವಾಳ ಮಾಚಿದೇವ ಮತ್ತು ಲಿಂಗಪೂಜೆಯ ತತ್ವಗಳು ಈ ವಚನಗಳಲ್ಲಿ ಈ ರೀತಿಯನ್ನು ಅನುಸರಿಸಿದ್ದೇನೆ. ಇವೆಲ್ಲವೂ ಅತ್ಯಂತ ಮಹತ್ವದ ವಚನ ಗ್ರಂಥಗಳಾಗಿರುತ್ತವೆ.

### (೪) ಸಂಕೀರ್ಣ ವಚನಗಳು

ನನಗೆ ದೊರೆತ ವಚನ ಗ್ರಂಥಗಳಲ್ಲಿ ಸ್ವಲ್ಪ ಸಂಖ್ಯೆಯಿಂದ ಕೆಲವರ ವಚನಗಳು ದೊರೆತಿರುತ್ತವೆ. ಹೀಗಿದ್ದರೂ ಅವುಗಳಾದರೂ ಬಹಳ ಗಂಭೀರ ವಿಚಾರಗಳುಳ್ಳವು ಇರುತ್ತವೆ. ಅದ್ದರಿಂದ ನಾನು ಅವುಗಳನ್ನೆಲ್ಲ ಒಂದೊಂದೇ ಭಾಗದಲ್ಲಿ ಸೇರ್ಪಡೆ ಮಾಡಿ "ಸಂಕೀರ್ಣ ವಚನಗಳು" ಎಂದು ಮೂರು ಭಾಗಗಳನ್ನು ಮಾಡಿ ಪ್ರಸಿದ್ಧಿಸಿದೆನು. ಇವುಗಳಲ್ಲಿ ಅನೇಕ ವಚನಗಳು ಅತ್ಯಂತ ಮಹತ್ವದವಾಗಿದೆ. ಆದರೆ ಈ ಎಲ್ಲವುಗಳನ್ನು ಕೂಡಿಸಿ ಒಂದೊಂದೇ ಗ್ರಂಥದಲ್ಲಿ ಮುದ್ರಿಸಿದ್ದರಿಂದ ಅವುಗಳಲ್ಲಿ

ನಿರ್ದೇಶವಾದ ವಚನಕಾರರ ಹೆಸರುಗಳು ಸಾರ್ವಜನಿಕರಿಗೆ ಗೊತ್ತಾಗದೆ ಹೋಗಿವೆ. ಆದ್ದರಿಂದ ಇವುಗಳನ್ನು ಬೇರೆಯಾಗಿ ತೆಗೆದು ಯೋಗ್ಯವಾದ ಟಿಪ್ಪಣಿಗಳೊಂದಿಗೆ ಮುದ್ರಿಸಿದಲ್ಲಿ ಅವುಗಳ ಮಹತ್ವವು ಎಲ್ಲರಿಗೂ ತಿಳಿಯಬಹುದಾಗಿತ್ತು. ಅರುವಿನ ಮಾರಿತಂದೆ, ಚಂದಿಮರಸ, ಹಾವಿನಹಾಳ ಕಲ್ಲಯ್ಯ, ಮಧುವರಸ, ಗಜೇಶ ಮಸಣಯ್ಯ ಈ ಮೊದಲಾದವರ ವಚನಗಳ ಪರಿಚಯವು ಜನರಲ್ಲಿ ಈಗ ಏನೂ ಇರುವದಿಲ್ಲ. ಆದ್ದರಿಂದ ಅವರ ವಚನಗಳನ್ನು ಬೇರೆಯಾಗಿ ತೆಗೆದು ಸ್ವತಂತ್ರವಾಗಿ ಮುದ್ರಿಸಬೇಕೆಂದಿರುವೆನು.

## (೫) ವಚನಗ್ರಂಥಗಳಿಗೆ ಅರ್ಥ

ನಾನು ಹೀಗೆ ವಚನಗ್ರಂಥಗಳನ್ನು ಪ್ರಕಟಿಸುತ್ತಿರುವಲ್ಲಿ ಅವು ತಮಗೆ ತಿಳಿಯುವದಿಲ್ಲವೆಂದು ಬಹುಜನರು ಅಭಿಪ್ರಾಯಪಡಹತ್ತಿದರು. ಆದ್ದರಿಂದ ಅವುಗಳ ಅರ್ಥವನ್ನು ಸಿದ್ಧಪಡಿಸಬೇಕೆಂದು ನನಗೆ ಅನೇಕರ ಸೂಚನೆಗಳು ಬಂದದ್ದರಿಂದ ಕೆಲವು ವಚನಗ್ರಂಥಗಳಲ್ಲಿ ಅರ್ಥವನ್ನು ಪ್ರತಿಯೊಂದು ವಚನದ ಕೆಳಗೆ ಬರೆದು ಪ್ರಸಿದ್ಧಿಸತೊಡಗಿದೆನು. ಅವು ಯಾವವೆಂದರೆ--

ದೇವರದಾಸಿಮಯ್ಯ, ಅಂಬಿಗರ ಚೌಡಯ್ಯ, ಉರಿಲಿಂಗಪೆದ್ದಿ ಇವರ ವಚನಗಳಿಗೆ ಸಮಗ್ರ ಅರ್ಥವನ್ನು ಬರೆದಿದ್ದೇನೆ.

ಇದರಿಂದ ಗ್ರಂಥಗಳ ಗಾತ್ರವು ಬಹಳ ಬೆಳೆಯಹತ್ತಿತು. ಅವುಗಳ ಬೆಲೆ ಹೆಚ್ಚಾಯಿತು. ಆದ್ದರಿಂದ ಈ ಪದ್ಧತಿಯನ್ನು ಬಿಟ್ಟು ಪ್ರತಿಯೊಂದು ಶಿರೋಲೇಖದ ಕೆಳಗೆ ಅದರಲ್ಲಿ ಸೇರ್ಪಡೆಯಾದ ವಚನಗಳ ಸಂಕ್ಷಿಪ್ತ ವಿವರಣೆಯನ್ನು ಕೊಡಹತ್ತಿದೆನು. ಹೀಗೆ ನಾನು ಮಡಿವಾಳ ಮಾಚಿದೇವ ಮೊದಲಾದ ಅನೇಕರ ವಚನಗಳಿಗೆ ವಿವರಣೆಯನ್ನು ಕೊಡಹತ್ತಿದೆನು. ಆದರೆ ಕೆಲವು ವಚನಗಳಲ್ಲಿ ಹೀಗೆ ಮಾಡದೆ ಅವುಗಳ ಅಂತ್ಯದಲ್ಲಿ ಸಮಗ್ರವಾಗಿ ಆ ವಚನಗಳ ಭಾವವನ್ನು ಬರೆಯುವ ಪದ್ಧತಿಯನ್ನು ಇಟ್ಟುಕೊಂಡೆನು. ಆದರೆ ಈ ರೀತಿ ವಚನಗಳನ್ನು ಟೀಕಾತ್ಮಕವಾಗಿ ರಚಿಸುವದರಿಂದ ನನ್ನ ಕಾರ್ಯಗತಿಯು ಮಂದವಾಗತೊಡಗಿತು. ಗ್ರಂಥ

ಗಳು ದೊಡ್ಡವಾದ್ದರಿಂದ ಬೆಲೆಗಳನ್ನು ಹೆಚ್ಚಿಸಬೇಕಾಯಿತು. ಇದರಿಂದ ನಮ್ಮ ಈ ಪದ್ಧತಿಯನ್ನು ಬಿಟ್ಟುಕೊಟ್ಟು ವಚನಗಳ ಕೆಳಗೆಯೇ ಕಠಿಣ ಶಬ್ದಗಳ ಅರ್ಥಗಳನ್ನು ಮಾತ್ರ ಜೋಡಿಸುತ್ತಿದೆನು. ಈ ಪ್ರಕಾರ ನಾನು ಮಹಾದೇವಿಯಕ್ಕ ಮತ್ತು ಸಕಳೇಶ ಮಾದರಸ ಇವರ ವಚನ ಗ್ರಂಥ ಗಳಲ್ಲಿ ಮಾಡಿದ್ದೇನೆ. ಆದರೆ ಸಧ್ಯದಲ್ಲಿ ಈ ತರದ ಪ್ರಯತ್ನಗಳನ್ನು ಬಿಟ್ಟು ವಚನಗಳ ಪ್ರಕಟನಾ ಕಾರ್ಯವು ಕೆಲವು ಕಾಲ ಗತಿಸಿಹೋದಬಳಿಕ ಜನರಿಗೆ ಯಾವ ಪದ್ಧತಿಯು ಪ್ರಿಯವಾಗುವದೆಂಬುದನ್ನು ತಿಳಿದುಕೊಂಡು ಈ ಕಾರ್ಯ ವನ್ನು ಮುಂದುವರಿಸಬೇಕೆಂದಿದ್ದೇನೆ. ಹೀಗೆ ಮಾಡುವದನ್ನು ನಿಲ್ಲಿಸಿದ್ದೇನೆ.

## (೬) ವಚನಶಾಸ್ತ್ರಸಾರದ ಭಾಗಗಳು

ಶಿವಶರಣರ ತತ್ತ್ವಗಳು ಜನರಿಗೆ ಅರಿಕೆಯಾಗಬೇಕೆಂದು ನಾನು ವಚನ ಶಾಸ್ತ್ರಸಾರ ಭಾಗ ೧ ಪೂರ್ವಾರ್ಧ ಉತ್ತರಾರ್ಧ ಮತ್ತು ಭಾಗ ೨ ಮತ್ತು ಭಾಗ ೩ ಪೂರ್ವಾರ್ಧ, ಉತ್ತರಾರ್ಧ ಇವುಗಳನ್ನು ರಚಿಸಿದ್ದೇನೆ. ಇವುಗಳ ಬಗ್ಗೆ ನನ್ನ ವಿವರಣೆಗಳನ್ನು ಈ ವರದಿಯ ಆರಂಭದಲ್ಲಿ ವಿವರಿಸಿದ್ದೇನೆ. ಇವಾವರೂ ಮಹತ್ವದ ದೊಡ್ಡ ಗ್ರಂಥಗಳಾಗಿವೆ.

## (೭) ಶಿವಾನುಭವ ಪತ್ರ ಪುಸ್ತಕಗಳು

ಮೇಲೆ ವಿವರಿಸಿದ ಗ್ರಂಥಗಳು ಪೂರ್ತಿಯಾಗಲು ಕೆಲವು ವರ್ಷ ಗಳು ಗತಿಸಿದವು. ಈ ಅವಧಿಯಲ್ಲಿ ವಚನಶಾಸ್ತ್ರವು ಎಷ್ಟು ಮಹತ್ವ ದ್ದೆಂಬುದರ ತಿಳುವಳಿಕೆಯು ಜನರಲ್ಲಿ ಹೆಚ್ಚಿಗೆ ಬೆಳೆಯುತ್ತ ಬಂದಿತು. ಇಷ್ಟರಲ್ಲಿ ಈ ವಾಙ್ಮಯದ ವಿಷಯವಾಗಿ ಅನೇಕ ಮಹತ್ವದ ಲೇಖಗಳು ವಿದ್ವಾಂಸರಿಂದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದವು. ನಾಡಹಬ್ಬಗಳಲ್ಲಿ ಮತ್ತು ಬಸವೇಶ್ವರನ ಜಯಂತಿ ಕಾಲದಲ್ಲಿ ಶರಣರ ವಚನವಾಙ್ಮಯದ ಬಗ್ಗೆ ಯಾವಾಗಲೂ ಉಪನ್ಯಾಸಗಳು ಜರಗುತ್ತಿದ್ದವು. ಶಿವಾನುಭವ ಸಮ್ಮೇಲನಗಳ ಪರ್ಯಾದುಗಳು ಎಲ್ಲ ಕಡೆಗೂ ಆಗುತ್ತಿದವು. ಹೈಸ್ಕೂಲು ವಿದ್ಯಾಲಯಗಳ ಮೇಲ್ತರಗತಿಯ ವರ್ಗಗಳಲ್ಲಿ ವಚನಗ್ರಂಥಗಳು ಪಠ್ಯ

ವಿಸಲ್ಪಡಹತ್ತಿದವು. ಆದರೆ ಈ ಚಟುವಟಿಕೆಗಳೆಲ್ಲ ಉಚ್ಚತರಗತಿಯ ವಾಙ್ಮಯ ಪ್ರೇಮಿಗಳು ಮಾತ್ರ ತಮ್ಮಂಥವರಿಗೋಸ್ಕರ ಮಾಡಿದವುಗಳಾಗಿದ್ದವು. ಇವು ಗ್ರಾಮಾಂತರಗಳಲ್ಲಿ ವಾಸಿಸುವ ಹಿಂದುಳಿದ ಜನರಿಗೋಸ್ಕರ ಯಾವವೂ ಇರಲಿಲ್ಲ. ಆದರೆ ಹೀಗೆ ಪ್ರಯತ್ನಿಸುವದು ಅವಶ್ಯವೆಂದು ನನಗೆ ತೋರಹತ್ತಿತು. ಆದ್ದರಿಂದ ಗ್ರಾಮಗಳಲ್ಲಿ ಶಿವಾನುಭವ ಸಂಘಗಳನ್ನು ಏರ್ಪಾಡು ಮಾಡಿ ಅವುಗಳ ಮೂಲಕ ವಚನ ವಾಙ್ಮಯ ಪ್ರಸಾರ ಮಾಡುವದು ಅವಶ್ಯವೆಂದು ನಾನು ಶಿವಾನುಭವ ಮತ್ತು ನವಕರ್ನಾಟಕ ಪತ್ರಿಕೆಗಳಲ್ಲಿ ಹಾಗೆ ಪ್ರಚಾರ ಮಾಡಹತ್ತಿದೆನು. ಇದರ ಪರಿಣಾಮವಾಗಿ ಕರ್ನಾಟಕದಲ್ಲಿ ಸುಮಾರು ೧೫೦ ಗ್ರಾಮದವರು ಹೀಗೆ ಕಾರ್ಯಮಾಡಲು ಸಿದ್ಧರಾದರು. ಅವರಲ್ಲಿ ಕೆಲವರು ಕೂಡಲೇ ಈ ಕಾರ್ಯ ಕೈಕೊಂಡು ಶಿವಾನುಭವ ಗ್ರಂಥಗಳನ್ನು ಪರಿಶೀಲಿಸಹತ್ತಿದರು. ಆಗ ಇಂಥ ಸಂಘಗಳ ಉಪಯೋಗಕ್ಕೋಸ್ಕರ ಪಠ್ಯಪುಸ್ತಕಗಳನ್ನು ನಿರ್ಮಿಸುವದು ಅವಶ್ಯವೆಂದು ನನಗೆ ತೋರಲಾಗಿ ಆ ರೀತಿ ನಾನು ಪ್ರಯತ್ನಿಸಹತ್ತಿದೆನು. ಅದರ ಪರಿಣಾಮವಾಗಿ ನಾನು ಕೆಳಗೆ ಕಾಣಿಸಿದ ಗ್ರಂಥಗಳನ್ನು ಪ್ರಕಟಿಸಿದೆನು. ಅವು ಯಾವವೆಂದರೆ

(೧) **ಪರಮಾತ್ಮನ ವಚನಗಳು** :– ಇದರಲ್ಲಿ ಪರಮಾತ್ಮನ ಸ್ವರೂಪದ ವಿಷಯವಾಗಿ ಇರುವ ವಚನಗಳನ್ನು ಒತ್ತಟ್ಟಿಗೆ ಸಂಗ್ರಹಿಸಿದೆನು. ಇದರಲ್ಲಿಯ ಪ್ರತಿಯೊಂದು ವಚನದ ಕೆಳಗೆ ಅರ್ಥವನ್ನು ಸಹ ಕೊಟ್ಟಿದ್ದೇನೆ. ಧಾರ್ಮಿಕ ಶಿಕ್ಷಣದಲ್ಲಿ ಪರಮಾತ್ಮನ ಸ್ವರೂಪ ಹೇಗಿರುತ್ತದೆಂಬುದರ ತಿಳಿವಳಿಕೆಯು ಮೊದಲು ಆಗುವದು ಅವಶ್ಯವಾದುದು. ಆದ್ದರಿಂದ ನಾನು ಈ ಗ್ರಂಥಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟೆನು. ಬಹುಜನ ಸಮಾಜವಲ್ಲಿ ದೇವರ ಬಗ್ಗೆ ನಿಜವಾದ ತಿಳಿವಳಿಕೆಗಳು ಇರದ್ದರಿಂದ ಅವರಲ್ಲಿ ಅನೇಕತರದ ಧಾರ್ಮಿಕ ಮೂಢ ನಂಬಿಕೆಗಳೂ ಹಿಂಸಾಕರ್ಮಗಳೂ ಕೂಡ ಜರಗುತ್ತವೆ. ಇವುಗಳನ್ನು ದೂರಮಾಡುವ ಉದ್ದಿಶ್ಯವಾಗಿ ನಾನು ಈ ತೆರದ ವಚನಗ್ರಂಥವನ್ನು ರಚಿಸಿದೆನು.

(೨) ಭಕ್ತಿಯ ವಚನಗಳು :— ಭಕ್ತಿಯು ಧರ್ಮಕ್ಕೆ ತಳಹದಿಯಾಗಿರುತ್ತದೆ. ಆದ್ದರಿಂದ ಇಂಥ ವಚನಗಳನ್ನು ನಾನು ಈ ಗ್ರಂಥದಲ್ಲಿ ಸಂಗ್ರಹಿಸಿದೆನು. ಇವರಲ್ಲಿಯ ಪ್ರತಿಯೊಂದು ವಚನಕ್ಕೆ ಅರ್ಥವನ್ನು ಬರೆದಿದ್ದೇನೆ.

(೩) ಹೊಸ ಪದ್ಧತಿಯ ಬಸವೇಶ್ವರನ ವಚನಗಳು :— ಈ ವರೆಗೆ ನಾನು ಪ್ರಸಿದ್ಧಮಾಡುತ್ತ ಬಂದ ಬಸವೇಶ್ವರನ ವಚನಗ್ರಂಥದಿಂದ ಬಸವೇಶ್ವರನ ವಿಚಾರಗಳು ಬೇರೆ ಬೇರೆ ವಿಷಯಗಳ ಬಗ್ಗೆ ಯಾವವಿರುತ್ತವೆಂಬುದು ತಿಳಿಯುವದಿಲ್ಲ. ಆದ್ದರಿಂದ ನಾನು ವಚನಶಾಸ್ತ್ರಸಾರ ಗ್ರಂಥದಲ್ಲಿಯ ಪದ್ಧತಿಯ ಮೇರೆಗೆ ವಿಷಯಾನುಗುಣವಾಗಿ ಬಸವೇಶ್ವರನ ವಚನಗಳಲ್ಲಿ ಜೋಡಣೆಯನ್ನು ಮಾಡಿ ಇದನ್ನು ಪ್ರಕಟಿಸಿದೆನು. ಇದು ಬಹುಜನ ಸಮಾಜಕ್ಕೆ ಉಪಯುಕ್ತವಾದುದೆಂದು ತೋರಿಬಂದಿದೆ. ಇವರಲ್ಲಿ ೧೦೮ ಪಾಠಗಳಿರುತ್ತವೆ. ಅದಲ್ಲದೆ ಅನೇಕ ಶಿವಾನುಭವ ಸಂಘಗಳ ಸಭೆಗಳಿಗೆ ವೀರಶೈವರಲ್ಲದವರೂ ಕೂಡ ಹೋಗುತ್ತಿರುವದು ಕಂಡುಬರುತ್ತದೆ. ಆದ್ದರಿಂದ ಕೇವಲ ವೀರಶೈವವಾಚಾರ ಪರವಾಗಿ ಇರುವ ಸುಮಾರು ೧೫೦ ಉಕ್ತಿಗಳನ್ನು ಅಷ್ಟಾವರಣಕ್ಕೆ ಸರಿಯಾಗಿ ಕ್ರಮಗೊಳಿಸಿ ಇವರ ಕಡೆಯ ಭಾಗದಲ್ಲಿ ಪ್ರಕಟಿಸಿದ್ದೇನೆ. ಬೇರೆಯವುಗಳು ಸಾಮಾನ್ಯವಾಗಿರುತ್ತವೆ. ಈ ಗ್ರಂಥವು ವಿಶ್ವವಿದ್ಯಾಲಯಗಳಲ್ಲಿ ಈಗಲೂ ಕೂಡ ಉಪಯೋಗಿಸಲ್ಪಡುತ್ತಿದೆ. ಉಪನ್ಯಾಸಕರು ಈ ಗ್ರಂಥದಲ್ಲಿಯ ವಿಷಯಗಳನ್ನು ಅವಲಂಬಿಸಿ ತಮ್ಮ ಉಪನ್ಯಾಸಗಳನ್ನು ಮಾಡಲು ಅನುಕೂಲವಾಗಿರುತ್ತದೆ. ಕೆಲವು ಮಹನೀಯರು ಈ ಗ್ರಂಥವನ್ನು ಅವಲಂಬಿಸಿ ಸಣ್ಣ ಪುಟ್ಟ ವಚನಗ್ರಂಥಗನ್ನು ಸ್ವತಂತ್ರವಾಗಿ ಪ್ರಕಟಪಡಿಸಿದ್ದು ಸಹ ಕಂಡುಬರುತ್ತದೆ.

(೪) ದೇವರದಾಸಿಮಯ್ಯನ ವಚನಗಳು :— ಈ ವಚನ ಗ್ರಂಥವನ್ನಾದರೂ ಕೂಡ ಶಿವಾನುಭವ ಸಂಘದವರು ಉಪಯೋಗ ಮಾಡುತ್ತಿರುವದು ಕಂಡುಬರುತ್ತದೆ. ಮೈಸೂರು ಪ್ರಾಂತದಲ್ಲಿರುವ ಸಮಾಜ ಶಿಕ್ಷಣ ಕಾರ್ಯದಲ್ಲಿ ಇದರ ಉಯೋಗವು ಬಹಳವಾಗುತ್ತಲಿದೆಂದು ತಿಳಿಯುತ್ತಿದೆ.

(೫) ವಚನಗಾಯನ :— ಶಿವಾನುಭವ ಸಂಘಗಳ ಸಭೆಯಲ್ಲಿ ಗಾಯನದ ಕ್ರಮವನ್ನು ಇಟ್ಟುಕೊಳ್ಳುವದು ಅತ್ಯಂತ ಉಪಯುಕ್ತವಾಗಿರುತ್ತವೆ. ಆದರಿಂದ ವಿಜಾಪುರದಲ್ಲಿಯ ಸಿದ್ಧೇಶ್ವರ ಹಾಯಸ್ಕೂಲಿನಲ್ಲಿರುವ ಕೆಲವು ಶಿಕ್ಷಕರು ಮತ್ತು ಅಲ್ಲಿಯ ಗಾಯನ ಮಾಸ್ತರರಾದ ಶ್ರೀಯುತ ಪಾಟೀಲ ಇವರು ಅನೇಕ ವಚನಗಳನ್ನು ಗಾಯನಕ್ಕೆ ಹೊಂದಿಸಲು ಪ್ರಯತ್ನ ಮಾಡಿದರು. ಅದು ಸಫಲವಾದುದೆಂದು ಕಂಡುಬಂದದ್ದರಿಂದ 'ವಚನ ಗಾಯನ' ಎಂಬ ಹೆಸರಿನಿಂದ ಪುಸ್ತಕವನ್ನು ಅಚ್ಚು ಹಾಕಿಸಿದೆನು.

(೬) ಈ ಗ್ರಂಥವಲ್ಲದೆ ಮೈಲಾರ ಬಸಪ್ಪ, ಕರಿ ವೃಷಭೇಂದ್ರರು, ಹೊನ್ನುಡಿಕೆಯ ಗಂಗಾಧರರು ಈ ಕವಿಗಳು ಶಿವಾನುಭವ ತತ್ವಗಳ ವಿಷಯವಾಗಿ ಬಹು ಸುಂದರವಾದ ಹಾಡುಗಳನ್ನು ರಚಿಸಿದ್ದಾರೆ. ಈ ಸಾಧುವರ್ಯರ ಗ್ರಂಥಗಳನ್ನು ಕೂಡ ನಾನು ಪ್ರಕಟಿಸಿದೆನು.

(೭) ಗದ್ಯ ಗ್ರಂಥಗಳು :— ಶಿವಾನುಭವ ಪತ್ರಿಕೆಯಲ್ಲಿ ಬಸವೇಶ್ವರನ ತತ್ವಗಳು ಮತ್ತು ಶಿವಾನುಭವದ ಮಾರ್ಗ ಈ ವಿಷಯವಾಗಿ ಅನೇಕ ಮಹನೀಯರು ಲೇಖಗಳನ್ನು ಹರೆಯುತ್ತ ಬಂದಿದ್ದಾರೆ. ಅವುಗಳನ್ನು ನಾನು ಒತ್ತಟ್ಟಿಗೆ ಸಂಗ್ರಹಿಸಿ 'ಬಸವೇಶ್ವರನ ತತ್ವಗಳು' ಮತ್ತು 'ಶಿವಾನುಭವ ಸತ್ಯಮಾರ್ಗ' ಎಂಬ ಹೆಸರಿನ ಎರಡು ಗ್ರಂಥಗಳನ್ನು ಪ್ರಕಟಿಸಿದೆನು. ಇವುಗಳು ಸಹ ಪಠ್ಯಪುಸ್ತಕಗಳಾಗಿ ಉಪಯೋಗಿಸಲ್ಪಡುತ್ತವೆ.

(೮) ಕೃಷಿಜ್ಞಾನ ಪ್ರದೀಪಿಕೆ :— ಈ ಗ್ರಂಥವು ಸಾಧುವರ್ಯರಾದ ಘನಮಠದಾರ್ಯರಿಂದ ರಚಿಸಲ್ಪಟ್ಟದ್ದಿರುತ್ತದೆ. ಇದರಲ್ಲಿ ಒಕ್ಕಲಿಗರಿಗೆ ಉಪಯುಕ್ತವಿರುವ ಅನೇಕ ಮಹತ್ವದ ವಿಷಯಗಳು ನಿರೂಪಿಸಲ್ಪಟ್ಟಿವೆ. ಈ ಗ್ರಂಥದ ಅಂತ್ಯದಲ್ಲಿ ಶ್ರೀ ಸ್ವಾಮಿಗಳವರು ವೀರಶೈವ ಮಾರ್ಗವನ್ನು ಕುರಿತು ಬಹು ಚೆನ್ನಾಗಿ ವಿವೇಚನೆ ಮಾಡಿದ್ದಾರೆ. ಅವು ಪ್ರಮುಖರ ತತ್ವಗಳಿರುತ್ತವೆ. ಆದ್ದರಿಂದ ಈ ಗ್ರಂಥವು ಶಿವಾನುಭವ ಸಂಸ್ಥೆಗಳಲ್ಲಿ ಉಪಯೋಗಿಸಲು ಯೋಗ್ಯವಿರುತ್ತದೆಂದು ಭಾವಿಸಿ ನಾನು ಈ ಗ್ರಂಥವನ್ನು ಸ್ವಂತವಾಗಿ ಮುದ್ರಣ ಮಾಡಿಸಿರುತ್ತೇನೆ

(೯) ನೈತಿಕ ಮತ್ತು ಭಕ್ತಿಯ ವಚನಗಳು :— ಈ ಹೆಸರಿನಿಂದ ಒಂದು ಗ್ರಂಥವನ್ನು ಕೆಲವು ವರ್ಷಗಳ ಹಿಂದೆ ರಚಿಸಿ ಪ್ರಕಟಿಸಿದೆನು. ಇದರಲ್ಲಿ ಭಕ್ತಿಯ ಮತ್ತು ನೈತಿಕ ವಚನಗಳು ಮಿಶ್ರವಾಗಿದ್ದವು. ಆದರೆ ಇವುಗಳನ್ನು ನಾನು ಈಚೆಗೆ ವಿಂಗಡಿಸಿ ಪ್ರಸಿದ್ಧಿಸಲು ಪ್ರಾರಂಭಿಸಿದ್ದೇನೆ. ಇವುಗಳಲ್ಲಿ ಭಕ್ತಿಯ ವಚನಗಳು ಮಾತ್ರ ಪ್ರಕಟವಾಗಿವೆ. ನೈತಿಕ ವಚನಗಳು ಸಿದ್ಧವಾಗಿದ್ದು ಅವುಗಳನ್ನು ಬೇಗನೆ ಬೇರೆಯಾಗಿ ಮುದ್ರಣಗೊಳಿಸುವವನಿದ್ದೇನೆ.

(೧೦) ಜನಬಸಪ್ಪ ಧಾರವಾಡ ಎಜ್ಯುಕೇಶನ್ ಇನಸ್ಪೇಕ್ಟರ ಇವರ ಚರಿತ್ರೆ :— ಕರ್ನಾಟಕ ಭಾಷೆಯಗೋಸ್ಕರ ಜನತೆಯಲ್ಲಿ ಆಸಕ್ತಿಯನ್ನು ಹುಟ್ಟಿಸಿದವರಲ್ಲಿ ಇವರೇ ಮೊದಲಿನವರಿರುತ್ತಾರೆ. ಗ್ರಾಮಗಳಲ್ಲಿರುವ ವಿದ್ಯಾನುಭವ ಸಂಸ್ಥೆಗಳ ಅಭ್ಯಾಸಕರು ಇವರ ಚರಿತ್ರೆಯನ್ನು ಅರಿಯುವದು ಅವಶ್ಯವೆಂದು ನಾನು ಭಾವಿಸಿ ಈ ಗ್ರಂಥವನ್ನು ಸಿದ್ಧಪಡಿಸಿದ್ದೇನೆ.

(೧೧) ಲಿಂಗಪೂಜೆಯ ತತ್ವಗಳು :— ಇದರಲ್ಲಿ ಪುರಾತನ ವಚನಕಾರರ ವಚನಗಳಿವೆ.

## (೮) ಐತಿಹಾಸಿಕ ಗ್ರಂಥಗಳು

ನಾನು ಕೆಳಗೆ ಕಾಣಿಸಿದ ಐತಿಹಾಸಿಕ ಗ್ರಂಥಗಳನ್ನು ಸಹ ಪ್ರಕಟ ಮಾಡಿದೆನು. ವೀರಶೈವ ಸಮಾಜದಲ್ಲಿ ಪುರಾತನ ಮತ್ತು ಆಧುನಿಕ ಕಾಲಗಳಲ್ಲಿ ಅನೇಕ ರಾಜಕೀಯ ಮತ್ತು ಧಾರ್ಮಿಕ ಪುರುಷರು ಆಗಿಹೋಗಿದ್ದಾರೆ. ಅವರ ಚರಿತ್ರೆಗಳನ್ನು ಶೋಧಿಸಿ ಇದರಲ್ಲಿ ಪ್ರಕಟಿಸಿದ್ದೇನೆ. ಅವು ಯಾವುವೆಂದರೆ ; ...

### (೧) ರಾಜಕೀಯ ಪುರುಷರು

(೧) ಬೀಳಗಿ ಅರಸರುಗಳ ವಂಶಾವಳಿ : ಇದು ಒಂದು ಪುರಾತನ ಕಾವ್ಯವಾಗಿರುತ್ತದೆ. ಇದನ್ನು ದಿವಂಗತ ಚೆನಗಲ್ಲ ರಾಮರಾಯರು ಕನ್ನಡ ಟ್ರಾನ್ಸಲೇಟರರು ಮದ್ರಾಸ ಇವರು ಸಂಶೋಧಿಸಿ ...ಮಹಾನುಭವ

ಪತ್ರಿಕೆಯು ದ್ವಾರಾ ಪ್ರಕಟಿಸಿದ್ದಾರೆ. ಇದು ಒಂದು ಉಚ್ಚ ತರದ ಕಾವ್ಯವಾಗಿದೆ. ಇದರಲ್ಲಿ ಐತಿಹಾಸಿಕ ವಿಷಯಗಳೇ ಹೇಳಲ್ಪಟ್ಟಿರುತ್ತವೆ.

(೨) ರಾಜೇಂದ್ರನಾಮೆ :— ಇದು ಕೊಡಗು ರಾಜರಲ್ಲಿ ಹೆಸರಾದ ವೀರರಾಜೇಂದ್ರ ಇವರ ಸಹಾಯದಿಂದ ಅವರ ಕಾಲದಲ್ಲಿದ್ದ ಒಬ್ಬರು ರಚಿಸಿರುತ್ತಾರೆ. ಇದರ ಪತ್ರಿಕೆಯನ್ನು ದಿವಂಗತ ಬಿ. ರಾಮರಾವ ಇವರು ದೊರಕಿಸಿ ನಮ್ಮ ಕಡೆಗೆ ಪ್ರಕಟನೆಗೆ ಕಳಿಸಿಕೊಟ್ಟರು. ಇದು ಅರ್ಧ ಮುಗಿಯುವಷ್ಟರಲ್ಲಿಯೇ ಅವರು ತೀರಿಕೊಂಡಿದ್ದರಿಂದ ಗ್ರಂಥ ಮುದ್ರಣವು ಅಷ್ಟಕ್ಕೆ ನಿಂತಿರುತ್ತದೆ. ಅಚ್ಚಾದದ್ದು ಪ್ರಕಟವಾಗಿದೆ.

(೩) ಕೆಳದಿ ರಾಯರ ವಂಶಾವಳಿ :— ದಿವಂಗತ ಬಿ. ರಾಮರಾಯರು ಈ ಗ್ರಂಥವನ್ನು ಹುಡುಕಿ ಪ್ರಕಟನೆಗೋಸ್ಕರ ನಮ್ಮ ಕಡೆಗೆ ಕಳಿಸಿಕೊಟ್ಟರು. ಇದು ಮುದ್ರಣ ಹೊಂದಿರುತ್ತದೆ.

(೪) ವೀರಶೈವ ರಾಜಮನೆತನಗಳ ಇತಿಹಾಸ : ಬಸವೇಶ್ವರನ ಕಾಲದಿಂದ ಹಿಡಿದು ಈವರೆಗೆ ರಾಜ್ಯವಾಳಿದ ವೀರಶೈವ ರಾಜರ ಇತಿಹಾಸಗಳನ್ನು ನಾನು ಅನೇಕ ಗ್ರಂಥಗಳ ಸಹಾಯದಿಂದ ಸಂಗ್ರಹಿಸಿ ಪ್ರಸಿದ್ಧಿಸಿದೆನು. ಅದು ಈಗ ೧೫೦ ಪುಟಗಳುಳ್ಳ ಗ್ರಂಥವಾಗಿರುತ್ತದೆ. ಈ ಗ್ರಂಥದ ರಚನೆಯು ಇನ್ನೂ ಪೂರ್ಣವಾಗಿಲ್ಲ.

## (೨) ಧಾರ್ಮಿಕ ಪುರುಷರು

(೧) ಶಿವಶರಣರ ಚರಿತ್ರೆಗಳು : - ಶಿವಶರಣರ ಚರಿತ್ರೆಗಳು ಭಾಗ ೧, ಭಾಗ ೨, ಭಾಗ ೩. ಹೀಗೆ ಸುಮಾರು ೧೫೦ ಜನ ಧಾರ್ಮಿಕ ಪುರುಷರ ಚರಿತ್ರೆಗಳನ್ನು ಈ ಗ್ರಂಥಗಳಲ್ಲಿ ಪ್ರಕಟಿಸಿದ್ದೇನೆ. ಅವುಗಳಲ್ಲಿ ಶಕ್ಯವಿದ್ದಷ್ಟರಮಟ್ಟಿಗೆ ಇತಿಹಾಸಿಕ ವಿಷಯಗಳನ್ನು ಸಂಗ್ರಹಿಸಲು ಪ್ರಯತ್ನಿಸಿದ್ದೇನೆ. ಇವರಲ್ಲಿ ಬಹುಶಃ ಅನೇಕ ನಾಡುಗಳಲ್ಲಿದ್ದ ಶಿವಶರಣರಾಗಿದ್ದಾರೆ. ಅವರಲ್ಲಿ ವಚನಕಾರರೂ ಕೂಡ ಇದ್ದಾರೆ. ಅವರ ಚರಿತ್ರೆಗಳನ್ನೆಲ್ಲ ಪುರಾ

ತನ ಗ್ರಂಥಗಳ ಸಹಾಯದಿಂದ ಸಂಗ್ರಹಿಸಿ ಅವುಗಳನ್ನು ಪ್ರಕಟಿಸಿದ್ದೇನೆ. ಇನ್ನು ಮುಂದೆ ಇವುಗಳ ೪ನೆಯ ಭಾಗವನ್ನು ಪ್ರಾರಂಭಿಸುವವನಿದ್ದೇನೆ.

(೨) ನಿರಂಜನ ವಂಶರತ್ನಾಕರ :— ಶ್ರೀಮಜ್ಜಗದ್ಗುರು ಚಿತ್ರಕಲ್ಲ ದುರ್ಗ ಸಿಂಹಾಸನ ಮಠಾಧೀಶರ ವಂಶಾವಳಿಯು ಇದರಲ್ಲಿ ಕೊಡಲ್ಪಟ್ಟಿರುತ್ತದೆ. ಇದರಲ್ಲಿ ಬಸವೇಶ್ವರನ ಕಾಲದಿಂದ ೧೭ನೇ ಶತಮಾನದವರೆಗೆ ಆಗಿಹೋದ ಶ್ರೀಮನ್ನಿರಂಜನ ಸಿಂಹಾಸನಾಧೀಶ್ವರರ ಚರಿತ್ರೆಗಳಿವೆ. ಗ್ರಂಥವು ಅಪೂರ್ಣವಿದೆ. ಇದು ಹಿಂದಿನಕಾಲದಲ್ಲಿ ಸಿದ್ಧಪಡಿಸಿದ ಗ್ರಂಥವು.

(೩) ಕಾಲಜ್ಞಾನದ ವಚನಗಳು :— ಇದರಲ್ಲಿ ಬಸವೇಶ್ವರನಿಂದ ಹಿಡಿದು ೧೬ನೆಯ ಶತಮಾನದವರೆಗೆ ಆಗಿಹೋದ ಶಿವಶರಣರ ಮತ್ತು ರಾಜವಂಶಾವಳಿಗಳ ಚರಿತ್ರೆಗಳು ಬಂದಿರುತ್ತವೆ. ಆದರೆ ಇವುಗಳಲ್ಲಿ ದಂತಕಥೆಗಳು ಬಹಳ ಮಿಶ್ರವಾಗಿರುತ್ತವೆ.

### (೪) ಶಿವಾನುಭವದ ಸ್ವತಂತ್ರ ಗ್ರಂಥಗಳು

೧ **ಶಿವಾನುಭವ ಸೂತ್ರಸಾರ** :— ಷಟ್‌ಸ್ಥಲಶಾಸ್ತ್ರದಲ್ಲಿ ಅಸಂಖ್ಯ ಭೇದವಿಭೇದಗಳಿದ್ದು ಅವುಗಳೆಲ್ಲಕ್ಕೆ ಸ್ಥಲಗಳೆಂಬ ಹೆಸರು ಇದೆ. ಅವುಗಳ ಪರಸ್ಪರ ಸಂಬಂಧವನ್ನು ಕಂಡುಹಿಡಿಯುವದು ಬಹು ಕಷ್ಟಕರವಿರುತ್ತದೆ. ಇದು ತಿಳಿಯದ ಹೊರತು ಈ ಶಾಸ್ತ್ರದ ನಿಜಸ್ಥಿತಿಯನ್ನು ಅರಿಯುವದು ಕಠಿಣವೇ ಸರಿ. ಇವುಗಳ ರೀತಿಯನ್ನು ತಿಳಿಯಲು ಮೊಗ್ಗೆಯ ಮಾಯಿದೇವರ 'ಶಿವಾನುಭವ ಸೂತ್ರಸಾರ' ಎಂಬ ಸಂಸ್ಕೃತ ಗ್ರಂಥವು ಬಹಳ ಸಹಾಯಕಾರಿಯಾಗಿದೆ. ಇದರಲ್ಲಿ ಬಹುತರ ಎಲ್ಲ ಸ್ಥಲಗಳ ಮತ್ತು ಅವುಗಳ ಅವಾಂತರ ಭೇದಗಳ ವಿವರಣೆಗಳನ್ನು ಸ್ಪಷ್ಟವಾಗಿ ಗ್ರಂಥಕಾರರು ತಿಳಿಯಪಡಿಸಿದ್ದಾರೆ. ಇದರ ಕನ್ನಡ ಅನುವಾದವನ್ನು ಪಂಡಿತ ನಾಗೇಶಶಾಸ್ತ್ರಿಗಳವರು ಮಾಡಿದ್ದು ಈ ಗ್ರಂಥವನ್ನು ನಾನು ಪ್ರಸಿದ್ಧಿಸಿದ್ದೇನೆ. ಅದು ವಿಶ್ವವಿದ್ಯಾಲಯದಲ್ಲಿಯ ವಿದ್ಯಾರ್ಥಿಗಳಿಗೆ ಮತ್ತು ಸಾಮಾನ್ಯ ವಾಚಕರಿಗೆ ಸಹ ಬಹಳ ಉಪಯುಕ್ತವಾಗಿರುತ್ತದೆ.

೨ **ಶಿವಾನುಭವ ಶಬ್ದಕೋಶ :**— ಶಿವಾನುಭವ ಶಾಸ್ತ್ರದಲ್ಲಿ ವಿಶೇಷಾರ್ಥವುಳ್ಳ ಶಬ್ದಗಳ ಟಿಪ್ಪಣೆಗಳನ್ನು ಬರೆದು ಈ ಗ್ರಂಥದಲ್ಲಿ ಮುದ್ರಿಸಿದ್ದೇನೆ. ಇಂಥ ಶಬ್ದಗಳು ಶಿವಾನುಭವ ಶಾಸ್ತ್ರದಲ್ಲಿ ಒಂದು ಸಾವಿರಕ್ಕೆ ಮೇಲ್ಪಟ್ಟು ಇರುತ್ತವೆ. ಇವುಗಳಲ್ಲಿರುವ ಪರಸ್ಪರ ಸಂಬಂಧ ಮತ್ತು ವ್ಯತ್ಯಾಸಗಳನ್ನು ವಿವರಿಸಲು ಇದರಲ್ಲಿ ಪ್ರಯತ್ನಿಸಿದ್ದೇನೆ. ಇಡೀ ವಚನಶಾಸ್ತ್ರದ ಸಂಕ್ಷಿಪ್ತ ವಿವರಣೆಯು ಈ ಗ್ರಂಥದಲ್ಲಿ ಅಡಕವಾಗಿರುತ್ತದೆಂದು ಹೇಳಬಹುದು. ಇದಕ್ಕೆ ಆಧಾರವಾಗಿ ನಾನು ವಚನ ಗ್ರಂಥಗಳನ್ನೇ ಇಟ್ಟುಕೊಂಡಿದ್ದೇನೆ. ವಚನಶಾಸ್ತ್ರ ಅಥವಾ ಶಿವಾನುಭವಕ್ಕೆ ಮೂಲಗ್ರಂಥವಾವುದು, ಇದು ನಮಗೆ ಇನ್ನೂ ಅವಗತವಾಗಿಲ್ಲ. ಆದರೆ ಅನೇಕ ಗ್ರಂಥಗಳಲ್ಲಿ ಉಪಲಬ್ಧವಿರುವ ಬಿಡಿ ಬಿಡಿ ವಚನಗಳಲ್ಲಿರುವ ಅರ್ಥಪೂರ್ಣ ಶಬ್ದಗಳನ್ನು ಮೊದಲು ಸಂಗ್ರಹಿಸಿ ಅವುಗಳ ದ್ವಾರಾ ಮೂಲ ಸಿದ್ಧಾಂತವು ಹೇಗಿರಬೇಕೆಂಬುದನ್ನು ನಿರ್ಧರಿಸಲು ಮಾಡಿದ ಪ್ರಯತ್ನದ ಫಲವು ಇದಾಗಿದೆ. ಇನ್ನು ಮುಂದೆ ಷಟ್‌ಸ್ಥಲ ಶಾಸ್ತ್ರದ ಮೂಲ ಗ್ರಂಥವು ಎಂದಾದರೂ ದೊರಕಿದಲ್ಲಿ ಅದರಲ್ಲಿಯ ವಿವೇಚನಗಳು ನಾನು ಈ ಗ್ರಂಥದಲ್ಲಿ ಊಹಿಸಿದವುಗಳಂತೆಯೇ ಇರುವವೆಂದು ನಾನು ಭರವಸೆ ತಾಳಿದ್ದೇನೆ. ಈ ಗ್ರಂಥವನ್ನು ರಚಿಸುವಲ್ಲಿ ವಚನ ಗ್ರಂಥಗಳನ್ನೆಲ್ಲ ಮೊದಲು ಸಂಗ್ರಹಿಸಿ ಅವುಗಳಲ್ಲಿರುವ ವಿವೇಚನೆಗಳನ್ನು ಆಧಾರವಾಗಿಟ್ಟುಕೊಂಡು ರಚಿಸಿದ ಗ್ರಂಥವು ಇದಾಗಿದೆ. ಈ ಗ್ರಂಥದ ವಿವರಣೆಗಳನ್ನು ಇನ್ನೂ ಹೆಚ್ಚಿಗೆ ವಿಸ್ತರಿಸಬೇಕೆಂದು ನಾನು ಬಯಸಿದ್ದೆನು. ಆದರೆ ಅನೇಕ ಆತಂಕಗಳ ಮೂಲಕ ಇದು ಇನ್ನೂ ಸಿದ್ಧಿಗೆ ಹೋಗಿರುವದಿಲ್ಲ. ಇದನ್ನು ಕಾಲಾವಧಿಯೂ ಬೇಕಾಗುತ್ತದೆ.

## (೧೦) ಶಿವಾನುಭವದ ಕಾವ್ಯಗ್ರಂಥಗಳು

(೧) **ಸಿದ್ಧಲಿಂಗ ಏಕೋತ್ತರ ಶತಸ್ಥಲ :** ಇದು ೧೦೧ ಸ್ಥಲಗಳನ್ನು ವಿವರಿಸುವ ಅತ್ಯಂತ ಮಹತ್ವದ ಗ್ರಂಥವಾಗಿದೆ. ಇದು ಆದವಾನಿಯಿಂದ ಒಬ್ಬ ಸದ್ಗೃಹಸ್ಥರು ಕಳಿಸಿದ್ದಾರೆ. ಇದರ ನಿಜವಾದ ಗ್ರಂಥಕಾರರಾರೆಂಬುದು ತಿಳಿದಿಲ್ಲ. ಏಕೋತ್ತರ ಶತಸ್ಥಲದ ವಿಷಯವಾಗಿ ಬೇರೆ ಅನೇಕ ಗ್ರಂಥಗಳಿದ್ದು ಅವುಗಳಿಂದ ಇದನ್ನು ಎಂಗಡಿ [illegible]ಕ್ಕೇಸ್ಕರ

ನಾನು ಇದಕ್ಕೆ ಈ ಬಗೆಯ ಹೆಸರಿಟ್ಟು ಕರೆದಿದ್ದೇನೆ. ಈ ಗ್ರಂಥದ ಪ್ರಾರಂಭದಲ್ಲಿ ಸೂತ್ರ ರೂಪವಾಗಿ ಬರೆದ ಒಂದು ಉಕ್ತಿ, ಆಮೇಲೆ ಅದರ ಭಾವವನ್ನು ವ್ಯಕ್ತಪಡಿಸುವ ಒಬ್ಬ ಶಿವಶರಣನ ವಚನ ಮತ್ತು ಆ ವಚನದ ಅರ್ಥವನ್ನು ವಿಸ್ತರಿಸುವ ಕೆಲವು ಸುಂದರ ಪದ್ಯಗಳು ಮತ್ತು ಕಡೆಗೆ ಒಂದು ವೃತ್ತ ಹೀಗೆ ಈ ಗ್ರಂಥದ ರಚನೆ ಇದೆ. ಏಕೋತ್ತರ ಶತಸ್ಥಲಗಳನ್ನು ವಿವರಿಸುವ ಗ್ರಂಥಗಳಲ್ಲಿ ಇದು ಉತ್ತಮವಾದುದೆಂದು ಹೇಳಲು ಯಾವ ಪ್ರತ್ಯವಾಯವು ಇರುವುದಿಲ್ಲ.

(೨) ಟೀಕಾತ್ಮಕ ಸಿದ್ಧಾಂತ ಏಕೋತ್ತರ ಶತಸ್ಥಲ : ಮೇಲೆ ಹೇಳಿದ ಗ್ರಂಥದ ವಿಸ್ತೃತ ಟೀಕೆಯು ಇದರಲ್ಲಿದೆ. ಟೀಕಾಕಾರನು ಶಿವಾನುಭವದ ಶಾಸ್ತ್ರದ ತತ್ವಗಳನ್ನು ಬಹು ಚೆನ್ನಾಗಿ ಬಲ್ಲವನಾಗಿದ್ದಾನೆ. ಇದು ಬಹು ದೊಡ್ಡ ಗ್ರಂಥವಾಗಿರುತ್ತದೆ. ಇದರ ಕೆಲವು ಪುಟಗಳನ್ನು ಮಾತ್ರ ನಾನು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದೇನೆ.

(೩) ಶಿವಶರಣರ ಪದಗಳು : ಮೈಲಾರ ಬಸಪ್ಪನವರ ಶಿವಾನುಭವ ದರ್ಪಣ, ಸೋಮೋಕಟ್ಟಿ ಕಲ್ವೃಷಭೇಂದ್ರರ ಪದ್ಯಗಳು, ಗಂಗಾಧರ ಸ್ವಾಮಿಗಳು ಮತ್ತು ಇತರ ಸಾಧುವರ್ಯರ ಪದ್ಯಗಳು ಇದರಲ್ಲಿವೆ. ಈ ಪದ್ಯ ಗ್ರಂಥಗಳನ್ನು ಕುರಿತು ನಾನು ಹಿಂದೆಯೇ ವಿವರಿಸಿದ್ದೇನೆ.

## (೧೧) ಕಾವ್ಯಗಳು

ವೀರಶೈವ ವಾಙ್ಮಯದಲ್ಲಿ ಅನೇಕ ಉಚ್ಚ ತರದ ಕಾವ್ಯ ಗ್ರಂಥಗಳಿರುತ್ತವೆ. ಅವುಗಳಲ್ಲಿ ಪುರಾಣ ಗ್ರಂಥಗಳು ಬಹು ಮಹತ್ವದವಾಗಿರುತ್ತವೆ. ಅವುಗಳನ್ನು ಪ್ರಕಟಮಾಡುವ ಕಾರ್ಯವನ್ನು ಧಾರವಾಡ ಲಿಂಗಾಯತ ವಿದ್ಯಾವರ್ಧಕ ಸಂಘದ ವಾಙ್ಮಯ ಶಾಖೆಯವರೂ ಇತರ ಅನೇಕ ಸಭ್ಯ ಗೃಹಸ್ಥರೂ ಕೈಕೊಂಡಿರುವದರಿಂದ ನಾನು ಇಂಥ ಗ್ರಂಥಗಳನ್ನು ಪ್ರಕಟಿಸುವ ಕಾರ್ಯವನ್ನು ಹೆಚ್ಚಾಗಿ ಕೈಕೊಂಡಿರುವದಿಲ್ಲ. ಆದರೂ ವೀರಶೈವರ ಇತಿಹಾಸ, ಶಿವಶರಣರ ಚರಿತ್ರೆಗಳು ಮತ್ತು ವೀರಶೈವ ಮತತತ್ವಗಳು ಇವುಗಳನ್ನು ವಿವರಿಸುವ ಗ್ರಂಥಗಳಿದ್ದಲ್ಲಿ ಅವುಗಳನ್ನು ಪ್ರಕಟಿ

ಸುವ ಕಾರ್ಯವನ್ನು ಈ ೨೫ ವರ್ಷಗಳಲ್ಲಿ ಕೆಲಮಟ್ಟಿಗೆ ಮಾತ್ರ ಮಾಡಿದ್ದೇನೆ. ಆದರೆ ಇತ್ತಕಡೆಗೆ ನಾನು ನನ್ನ ಲಕ್ಷವನ್ನು ಪೂರ್ಣವಾಗಿ ಹಾಕಿರುವದಿಲ್ಲ. ನಾನು ಪ್ರಕಟಿಸಿದ ಕಾವ್ಯ ಗ್ರಂಥಗಳು ಯಾವವೆಂದರೆ—

(೧) ವರದಾನಿ ಗುಡ್ಡವ್ವೆಯ ಚರಿತ್ರೆ :— ಮಹಾಕವಿಯಾದ ಲಕ್ಕಣ್ಣದಂಡೇಶನು ರಚಿಸಿದ ಶಿವತತ್ವಚಿಂತಾಮಣಿ ಎಂಬ ಗ್ರಂಥದಲ್ಲಿರುವ ಭಾಗವು ಇದಾಗಿರುತ್ತದೆ. ಗುಡ್ಡವ್ವೆಯು ಒಬ್ಬ ಪ್ರಸಿದ್ಧ ಶಿವಶರಣೆಯು. ಅವಳು ಶೂರಳೂ ಮಹಾ ಯೋಗಿನಿಯೂ ಆಗಿ ಧರ್ಮಪ್ರಸಾರ ಕಾರ್ಯ ಮಾಡಿದ್ದಾಳೆ. ಇದು ವಾರ್ಧಿಕ ಷಟ್ಪದಿಯಲ್ಲಿ ಇದೆ.

(೨) ಅವಧೂತ ಗೀತೆ :— ಈ ಗೀತೆಯನ್ನು ೧೬ನೇ ಶತಮಾನದಲ್ಲಿದ್ದ ಗುರುಬಸವ ಕವಿಯು ರಚಿಸಿದ್ದಾನೆ. ಇದು ಚೌಪದನದಲ್ಲಿದ್ದು ಒಂದು ಹೊಸತರದ ಗ್ರಂಥವಾಗಿದೆ. ಅದ್ದರಿಂದ ಇದನ್ನು ನಾನು ಅಚ್ಚು ಹಾಕಿಸಿದೆನು.

(೩) ಮರಳಯ್ಯನ ತ್ರಿಪದಿ :— ಇಂಡೀ ತಾಲೂಕಿನಲ್ಲಿರುವ ಒಬ್ಬ ಸದ್ಗೃಹಸ್ಥರು ಈ ಚಿಕ್ಕ ಗ್ರಂಥವನ್ನು ತಂದುಕೊಟ್ಟರು. ಇದು ಒಬ್ಬ ಅಸ್ಪೃಶ್ಯ ಶರಣನ ಚರಿತ್ರೆಯಾಗಿರುವದರಿಂದ ಇದನ್ನು ಪ್ರಸಿದ್ಧಿಸಿದೆನು.

(೪) ಅದಿಶೆಟ್ಟಿ ಪುರಾಣ :— ಇದು ಮಹಾ ಕವಿಯಾದ ರಾಘವಾಂಕನಿಂದ ರಚಿತವಾದುದು. ಇದನ್ನು ಶ್ರೀ. ಮಾ. ಬಸವರಾಧ್ಯರು ಬೆಂಗಳೂರು ಇವರು ತಯಾರಿಸಿದ್ದು ಅವರ ಸ್ವಾಮಿತ್ವವು ನನ್ನ ಕಡೆಗೆ ಬಂದದ್ದರಿಂದ ಇದನ್ನು ನಾನು ಶಿವಾನುಭವ ಗ್ರಂಥಮಾಲೆಯಲ್ಲಿ ಸೇರ್ಪಡೆಮಾಡಿದೆನು.

(೫) ವೇಮಯ್ಯನ ಪ್ರಾಸಯೋಗದ ಪದ್ಯಗಳು :— ಈ ಪದ್ಯಗಳೆ ಮೊದಲು ಆಂಧ್ರ ಭಾಷೆಯಲ್ಲಿದ್ದವು. ಈ ಕವಿಯು ಹಿಂದುಗಡೆ ವೀರಶೈವನಾದನೆಂದು ತಿಳಿದದ್ದರಿಂದ ಮತ್ತು ಅವುಗಳು ಸರ್ವಜ್ಞನ ಪದಗಳನ್ನು ಹೋಲುತ್ತಿರುವದರಿಂದ ಈ ಗ್ರಂಥವನ್ನು ಶಿವಾನುಭವ ಪತ್ರಿಕೆಯಲ್ಲಿ ವಿಷಯಾನುಸಾರವಾಗಿ ಕ್ರಮಗೊಳಿಸಿ ಪ್ರಕಟಿಸಿದೆನು. ಈ ಪ್ರಕಾರ ಕೆಲವು ಕಾವ್ಯ

ಗ್ರಂಥಗಳನ್ನು ಪ್ರಕಟಿಸುವ ಕಾರ್ಯವು ಕೆಲಮಟ್ಟಿಗೆ ಮಾತ್ರ ನನ್ನಿಂದ ಆಗಿರುತ್ತದೆ.

## (೧೨) ರಗಳೆಗಳು

ಪದ್ಯ ವಾಙ್ಮಯದ ಪ್ರಕಟನೆಯು ನನ್ನ ಕಾರ್ಯದಲ್ಲಿ ಹರಿಹರ ಕವಿಯು ರಚಿಸಿದ ರಗಳೆಗಳನ್ನು ಪ್ರಕಟಮಾಡಿದ್ದು ಮುಖ್ಯವಾಗಿರುತ್ತದೆ. ಈತನ ಅಲೌಕಿಕ ಕಾವ್ಯಸಾಮರ್ಥ್ಯವನ್ನು ಈತನ ರಗಳೆಗಳಲ್ಲಿ ನಾವು ಸ್ಫುಟವಾಗಿ ಕಾಣಬಹುದು. ಈ ರಗಳೆಗಳು ಈಚೆಗೆ ಲೋಕಪ್ರಿಯುವಾಗಹತ್ತಿರುವದು ಸಮಾಧಾನಕರವು. ಆದರೆ ಕನ್ನಡದಲ್ಲಿ ಇಂಥ ಕಾವ್ಯಗಳು ಇದ್ದುದರ ಪರಿಚಯವು ಕೆಲವು ವಿದ್ವಜ್ಜನರಿಗೆ ಮಾತ್ರ ಇದ್ದಿತು. ಈ ರಗಳೆಗಳ ರಚನೆಯು ಬಹುಮಟ್ಟಿಗೆ ಪಾಶ್ಚಿಮಾತ್ಯ ಕಾವ್ಯ ಪದ್ಧತಿಯನ್ನು ಹೋಲುತ್ತದೆ. ಇವುಗಳನ್ನು ಹಿಂದಿನ ಕಾಲದ ಶಿವಶರಣರು ತಮ್ಮ ಧರ್ಮ ಪ್ರಚಾರ ಕಾರ್ಯದಲ್ಲಿ ಉಪಯೋಗಿಸುತ್ತಿದ್ದ ಹಾಗೆ ತೋರುತ್ತದೆ. ಈ ರಗಳೆಗಳು ಅತ್ಯಂತ ಸುಂದರವಾದ ಭಾಷೆಯುಳ್ಳವಾಗಿರುತ್ತವೆ. ಆದರೆ ಇವುಗಳನ್ನು ವೀರಶೈವರು ಈವರೆಗೆ ದುರ್ಲಕ್ಷಿಸುತ್ತ ಬಂದಿರುವರು. ಇದು ಅತ್ಯಂತ ದುರ್ದೈವದ ಸಂಗತಿಯಾಗಿರುತ್ತದೆ. ಆದ್ದರಿಂದ ಇವುಗಳನ್ನು ನಾನು ಶಿವಾನುಭವ ಪತ್ರಿಕೆಯಲ್ಲಿ ಕೆಲವು ವರ್ಷಗಳವರೆಗೆ ಪ್ರಕಟಿಸುತ್ತ ಬಂದೆನು. ಇವುಗಳ ಸಂಖ್ಯೆಯು ಈಗ ೯೦ರವರೆಗೆ ಹೋಗಿರುತ್ತದೆ.

ಹರಿಹರನು ತಮಿಳು ದೇಶದಲ್ಲಿದ್ದ ಪುರಾತನರ ರಗಳೆಗಳನ್ನು ರಚಿಸಿದ್ದಾನೆ. ನಾನು ಪ್ರಕಟಿಸಿದ ಇಂಥ ರಗಳೆಗಳ ಸಂಖ್ಯೆಯು ೧೮ ಇರುತ್ತದೆ. ಬಸವಾದಿ ಪ್ರಮಥರ ಕಾಲದಲ್ಲಿ ಪ್ರಸಿದ್ಧ ಹೊಂದಿದ ಶಿವಶರಣರ ರಗಳೆಗಳು ಹನ್ನೊಂದು ಇವೆ. ಇತರ ಶೈವ ವಿಭೂತಿಗಳ ರಗಳೆಗಳು ಆರು ಇವೆ. ಇವಲ್ಲದೆ ಹರಿಹರನು ಸ್ತೋತ್ರ ರೂಪವಾಗಿ ಕೆಲವು ರಗಳೆಗಳನ್ನು ರಚಿಸಿದ್ದಾನೆ. ಅವು ಅತ್ಯಂತ ಸುಂದರವಾದವುಗಳು. ಅವುಗಳ ಸಂಖ್ಯೆ ೫, ಹೀಗೆ ನಾನು ಒಟ್ಟು ೪೦ ರಗಳೆಗಳನ್ನು ಪ್ರಸಿದ್ಧಿಸಿದೆನು.

ಇವುಗಳಲ್ಲದೆ ತೋಂಟದಾರ್ಯರ ರಗಳೆ ಮತ್ತು ವೀರಶೈವ ರಗಳೆ ಎಂಬ ಬೇರೆ ಎರಡು ರಗಳೆಗಳನ್ನು ಅಚ್ಚು ಹಾಕಿಸಿದೆನು. ಈ ರಗಳೆಗಳು ಹರಿಹರ ಕವಿಯವಿರದೆ ಅವುಗಳನ್ನು ಬೇರೆ ಕವಿಗಳು ರಚಿಸಿರುತ್ತಾರೆ.

ಹರಿಹರನ ರಗಳೆಗಳನ್ನು ಪ್ರಸಿದ್ಧಿಸುವ ಕಾರ್ಯವು ಇಷ್ಟು ಮಾತ್ರ ಜರುಗಿದಷ್ಟರಲ್ಲಿ ಬೇರೆ ಕೆಲ ಮಹನೀಯರು ಈ ಕಾರ್ಯವನ್ನು ಕೈಕೊಂಡಿದ್ದರಿಂದ ನಾನು ಇದನ್ನು ಅಲ್ಲಿಯೇ ನಿಲ್ಲಿಸಿದೆನು.

ಹೀಗೆ ಶಿವಾನುಭವ ಪತ್ರಿಕೆಯ ಮೂಲಕವಾಗಿ ಹೋದ ೨೫ ವರ್ಷಗಳಲ್ಲಿ ನಾನಾವಿಧ ಗ್ರಂಥಗಳು ಪ್ರಕಟವಾಗುತ್ತಬಂದಿದೆ. ಇವುಗಳ ಸಂಖ್ಯೆಯು ೭೦ ಇದ್ದು ಅವುಗಳ ಹೆಸರುಗಳನ್ನು ನಾನು ಕಾಲಕಾಲಕ್ಕೆ ಹೊರಪಡಿಸಿದ ಪುಸ್ತಕಗಳ ಕ್ರಯಪಟ್ಟಿಗಳಲ್ಲಿ ವಾಚಕರು ಕಾಣಬಹುದು. ವಿಸ್ತಾರ ಭಯಕ್ಕಾಗಿ ನಾನು ಅವುಗಳನ್ನು ಇಲ್ಲಿ ಕೊಟ್ಟಿರುವದಿಲ್ಲ.

ಮನುಜನ ಸಮಾಜದಲ್ಲಿ ಚಳವಳಿಗಳು ಉದ್ಭವಿಸಿದ ಕಾಲದಲ್ಲಿ ಉದಾವ ವಾಙ್ಮಯವು ಅನೇಕ ಮುಖವಾಗಿ ಪ್ರವಹಿಸುತ್ತ ಹೋಗುವದುಂಟು. ಆದ್ದರಿಂದ ವೀರಶೈವ ವಾಙ್ಮಯವು ಅನೇಕ ವಿಧವಾಗಿ ಬೆಳೆದಿರುತ್ತದೆ. ಇದು ಈ ಪತ್ರಿಕೆಯಲ್ಲಿ ಪ್ರಕಟವಾದ ಗ್ರಂಥಗಳ ಮೇಲಿಂದ ತಿಳಿದುಬರುವಂತೆ ಇದೆ. ಇವುಗಳಲ್ಲಿ ಪ್ರಭುದೇವರು ಮತ್ತು ದೇವರದಾಸಿಮಯ್ಯನ ವಚನಗಳಂಥ ಕೇವಲ ತಾತ್ವಿಕ ಗ್ರಂಥಗಳು ಅನೇಕವಿರುತ್ತವೆ. ಬಸವೇಶ್ವರನ ವಚನಗಳು ಮತ್ತು ಅಂಬಿಗರ ಚೌಡಯ್ಯನ ವಚನಗಳು ಇವು ಭಕ್ತಿಯ ಮತ್ತು ನೈತಿಕ ವಿಷಯಗಳಿಗೆ ಮಹತ್ವದ ಸ್ಥಾನವನ್ನು ಕೊಟ್ಟಿವೆ. ಇಂಥ ಗ್ರಂಥಗಳು ಈ ಮಾಲೆಯಲ್ಲಿ ಅನೇಕವಾಗಿರುತ್ತವೆ. ಸಾಮಾಜಿಕ ವಿಚಾರಗಳನ್ನು ನಿರೂಪಣೆ ಮಾಡುವ ವಚನಗಳು ಅನೇಕವಿರುತ್ತವೆ. ಇವು ಪ್ರತಿಯೊಂದು ವಚನ ಗ್ರಂಥದಲ್ಲಿ ಹೇರಳವಾಗಿ ಕಾಣಬಹುದು. ಶಿವಾನುಭವ ಪತ್ರಿಕೆಯಲ್ಲಿ ಬೀಳಗಿ 'ರಾಜರ ವಂಶಾವಳಿ, ಕೊಡಗುರಾಜರ ವಂಶಾವಳಿಯಂಥ ಐತಿಹಾಸಿಕ ಗ್ರಂಥಗಳೂ ಇವೆ. ಪುರಾತನ ಶಿವಶರಣರ ಚರಿತ್ರೆಗಳು ಪತ್ರಿಕೆಯಲ್ಲಿ ಈಚೆಗೆ ಹೆಚ್ಚಾಗಿ ಪ್ರಕಟವಾ

ವಾಗಿರುತ್ತವೆ. ಆದಿಶೆಟ್ಟಿ ಪುರಾಣದಂಥ ಕಾವ್ಯಗಳೂ ಅನೇಕ ರಗಳೆಗಳೂ ಇದರಲ್ಲಿ ಪ್ರಸಿದ್ಧವಾಗಿವೆ. ವೀರಶೈವ ಸಮಾಜದಲ್ಲಿ ಅನೇಕ ಸಾಧು ಸತ್ಪುರುಷರು ಆಗಿಹೋಗಿದ್ದು ಅವರು ರಚಿಸಿದ ಪದ್ಯ ಗ್ರಂಥಗಳೂ ಇದರಲ್ಲಿ ಪ್ರಕಟವಾಗಿವೆ. ಪುರಾಣಗಳನ್ನು ಹೋಲುವ ಕಾಲಜ್ಞಾನ ಗ್ರಂಥಗಳೂ ಈ ಪತ್ರಿಕೆಯ ಮೂಲಕ ಪ್ರಕಟವಾಗಿವೆ. ಹೀಗೆ ಈ ಪತ್ರಿಕೆಯು ೨೫ ವರ್ಷಗಳಿಂದಲೂ ಬಿಟ್ಟೂಬಿಡದೆ ಕಾರ್ಯ ಮಾಡುತ್ತ ಬಂದಿದ್ದರಿಂದ ಅನೇಕ ಬಗೆಯ ಗ್ರಂಥಗಳು ಇದರಲ್ಲಿ ಪ್ರಕಟವಾಗಿವೆ.

ಈ ಕಾರ್ಯದಲ್ಲಿ ಕೆಲವು ಮಹನೀಯರು ನನಗೆ ಅನುಕೂಲವಾಗಿ ವರ್ತಿಸಿದ್ದರಿಂದ ಈ ವಾಙ್ಮಯ ಪ್ರಕಟನೆಯ ಕಾರ್ಯಗಳು ಮುಂದುವರಿದವೆಂದು ಇಲ್ಲಿ ಹೇಳುವದು ಅಗತ್ಯವಿರುತ್ತದೆ. ನಾನು ಈ ಕಾರ್ಯವನ್ನು ಕೈಕೊಂಡ ಕೆಲವು ವರ್ಷಗಳಲ್ಲಿಯೇ ಶ್ರೀಯುತ ರಂಗರಾವ ದಿವಾಕರ ಇವರು ವಚನಶಾಸ್ತ್ರದ ಮಹತ್ವವನ್ನು ತಿಳಿದವರಾಗಿ ಅದರ ವಿಷಯವಾಗಿ ಒಂದು ಮಹತ್ವದ ವಿಸ್ತಾರವಾದ ಗ್ರಂಥವನ್ನು ಪ್ರಸಿದ್ಧಿಸಿದರು. ಇದಕ್ಕೋಸ್ಕರ ನಾನು ಅವರಿಗೆ ಬಹಳ ಆಭಾರಿಯಾಗಿದ್ದೇನೆ. ಇದರ ತರುವಾಯ ಪ್ರೊ॥ ಕೆ. ಜಿ. ಕುಂದಣಗಾರ ಇವರು ಹರಿಹರ ಕವಿಯ ಪ್ರಶಸ್ತಿಯನ್ನು ಬರೆದರು. ಹಾಗೆಯೇ ಅನೇಕ ಮಹನೀಯರು ಮಹಾದೇವಿಯಕ್ಕನ ವಚನಗಳ ವಿಷಯವಾಗಿಯೂ ಬಸವೇಶ್ವರನ ವಿಷಯವಾಗಿಯೂ ಲೇಖನಗಳನ್ನೂ ಗ್ರಂಥಗಳನ್ನೂ ಬರೆಯುತ್ತ ಬಂದಿದ್ದಾರೆ. ಇದರಿಂದ ವಚನಗಳು ನಾಡಿನಲ್ಲಿ ಬಹಳ ಪ್ರಸಾರವಾಗಿವೆ. ಹೀಗೆ ಅನೇಕ ಪ್ರಸಿದ್ಧ ಗ್ರಂಥಕಾರರು ವಚನ ವಾಙ್ಮಯದ ಬಗ್ಗೆ ಜನರಲ್ಲಿ ಜಾಗ್ರತೆಯನ್ನು ಹುಟ್ಟಿಸುತ್ತ ಬಂದಿದ್ದಾರೆ. ಇವರೆಲ್ಲರಿಗೆ ನಾನು ಬಹಳ ಆಭಾರಿಯಾಗಿದ್ದೇನೆ.

ಇದಲ್ಲದೆ ಕರ್ನಾಟಕದಲ್ಲಿಯ ಅನೇಕ ವಿದ್ವಾಂಸರು ಶಿವಶರಣರ ವಿಚಾರಗಳನ್ನು ಕುರಿತು ಯಾವಾಗಲೂ ಸಾರ್ವಜನಿಕ ವ್ಯಾಖ್ಯಾನಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ಹೇಳುತ್ತ ಬಂದಿದ್ದಾರೆ. ಇವರಲ್ಲಿ ಶ್ರೀಯುತ ಶ್ರೀನಿವಾಸಮೂರ್ತಿಗಳು ಶ್ರೀ ಬಿ. ಎಮ್. ಶ್ರೀಕಂಠಯ್ಯನವರು ಮುಖ್ಯರಾಗಿದ್ದಾರೆ, ಇವರಿಗೆ ನಾನು ಅತ್ಯಂತ ಆಭಾರಿಯಾಗಿದ್ದೇನೆ.

ಈಚೆಗೆ ರಾಜಕೀಯ ರಂಗದಲ್ಲಿಯೂ ಕೂಡ ರಾಷ್ಟ್ರೀಯ ವೃತ್ತಿಯ ಅನೇಕ ಮಹನೀಯರು ಶಿವಶರಣರ ವಾಙ್ಮಯದಲ್ಲಿಯ ಉಕ್ತಿಗಳನ್ನು ತಮ್ಮ ಉಪನ್ಯಾಸಗಳಲ್ಲಿ ಹೇರಳವಾಗಿ ಉಪಯೋಗಿಸುತ್ತ ಬಂದಿದ್ದಾರೆ. ಇವರು ಮುಖ್ಯವಾಗಿ ಅಸ್ಪೃಶ್ಯತಾ ನಿವಾರಣೆ, ಕಾಯಕದ ಮಹತ್ವ, ವಿಶ್ವ ಬಂಧುತ್ವದ ವಿಚಾರಗಳು ಇವುಗಳುಳ್ಳ ವಚನಗಳು ಮತ್ತು ನೈತಿಕ ವಚನಗಳು ಇಂಥವುಗಳನ್ನು ಯಾವಾಗಲೂ ಉದಾಹರಿಸುವದುಂಟು. ಇದರಿಂದ ಶಿವಾನುಭವ ಪತ್ರಿಕೆಯ ಮೂಲಕ ಪ್ರಕಟವಾಗುತ್ತ ಬಂದ ಗ್ರಂಥಗಳಿಗೆ ಸಮಾಜದಲ್ಲಿ ಕೆಲವೊಂದು ಆದರ ಭಾವವು ಹೆಚ್ಚುತ್ತಲೇ ಬಂದಿರುತ್ತದೆ.

ವಚನವಾಙ್ಮಯದ ಕಾರ್ಯದಲ್ಲಿ ಶ್ರೀ ಮಹಾದೇವ ಸ್ವಾಮಿಗಳು ಸರ್ಪಭೂಷಣಮಠ ಬೆಂಗಳೂರ ಇವರು ನಮಗೆ ಮಾಡಿದ ಸಹಾಯವು ಘನತರವಾದದ್ದು. ಅವರು ಸಂಸ್ಕೃತ ಪಂಡಿತರಾಗಿದ್ದಾರೆ. ಆದರೂ ಅವರು ವಚನವಾಙ್ಮಯವನ್ನು ಬಹಳ ಪ್ರೀತಿಸುವವರಾಗಿದ್ದಾರೆ. ಅವರು ಶಿವಾನುಭವ ಗ್ರಂಥಮಾಲೆಯಲ್ಲಿರುವ ಗ್ರಂಥಗಳನ್ನೆಲ್ಲ ತಮ್ಮ ಮಠದಲ್ಲಿಟ್ಟುಕೊಂಡು ಮಠದಲ್ಲಿ ತಾವು ದಿನಾಲು ಪ್ರವಚನ ನಡಿಸುತ್ತಿರುವಾಗ್ಗೆ ಈ ಗ್ರಂಥಗಳ ಕಡೆಗೆ ತಮ್ಮ ಶ್ರೋತೃಗಳ ಲಕ್ಷ್ಯವನ್ನು ಯಾವಾಗಲೂ ಎಳೆಯುತ್ತ ಬಂದಿದ್ದಾರೆ. ಇದರಿಂದ ಅನೇಕರು ಈ ಗ್ರಂಥಗಳನ್ನು ಬೆಲೆಗೆ ತೆಗೆದುಕೊಂಡದ್ದುಂಟು. ಮುಂದೆ ಅವರು ಈ ಕಾರ್ಯವನ್ನು ಶ್ರೀಯುತ ಎಮ್. ಎನ್. ಶಿವಪ್ಪ ಇವರ ಕಡೆಗೆ ಒಪ್ಪಿಸಲಾಗಿ ಅವರು ಈ ಗ್ರಂಥಗಳನ್ನು ತಮ್ಮ ಹೋಟೆಲಿನಲ್ಲಿ ಇಟ್ಟುಕೊಂಡು ಅಲ್ಲಿ ಅವುಗಳ ಪ್ರಸಾರಮಾಡುತ್ತ ಬಂದಿದ್ದಾರೆ. ಇವರ ಪ್ರಯತ್ನಗಳು ಶಿವಾನುಭವ ಪತ್ರಿಕೆಗೆ ಬಹಳ ಸಹಾಯಕಾರಿಯಾಗಿರುತ್ತವೆ. ಅವರಿಗೆ ನಾನು ಅತ್ಯಂತ ಆಭಾರಿಯಾಗಿದ್ದೇನೆ. ಮುಂದೆ ಹುಬ್ಬಳ್ಳಿ, ಧಾರವಾಡ ಬೆಳಗಾಂವ ಕಲಬುರ್ಗಿ ಈ ಸ್ಥಳಗಳಲ್ಲಿಯೂ ಕೂಡ ಕೆಲವು ಬುಕ್ಕ ಡಿಪೋದವರು ಶಿವಾನುಭವ ಗ್ರಂಥಮಾಲೆಯ ಗ್ರಂಥಗಳನ್ನು ತಮ್ಮಲ್ಲಿ ತರಿಸುತ್ತ ಇದ್ದಾರೆ.

ಪತ್ರಿಕೆಯಲ್ಲಿ ಪ್ರಕಟವಾದ ಗ್ರಂಥಗಳನ್ನು ಮೈಸೂರು ವಿಶ್ವವಿದ್ಯಾಲಯದವರು ಯಾವಾಗಲೂ ಪಠ್ಯ ಪುಸ್ತಕಗಳನ್ನಾಗಿ ನಿಯಮಿಸುತ್ತಾ

ಬಂದಿದ್ದಾರೆ. ಇವುಗಳಲ್ಲಿ ಬಸವೇಶ್ವರ, ದೇವರ ದಾಸಿಮಯ್ಯ, ಆದಯ್ಯ, ಅಂಬಿಗರ ಚೌಡಯ್ಯ, ಮಹಾದೇವಿಯಕ್ಕ ಇವರ ವಚನಗಳು ಬಹು ಮುಖ್ಯ ಪಾಠವುಗಳು. ಮೈಸೂರು ಸಂಸ್ಥಾನದಲ್ಲಿರುವ ಪ್ರೌಢ ಶಿಕ್ಷಣ ಕಾರ್ಯಾಲಯದವರೂ ಕೂಡ ಈ ಗ್ರಂಥಗಳನ್ನು ತರಿಸುವದುಂಟು. ಈಚೆಗೆ ಮೈಸೂರ ವಿಶ್ವ ವಿದ್ಯಾಲಯದವರು "ವಚನ ಧರ್ಮ ಸಾರ" ಎಂಬ ಗ್ರಂಥವನ್ನು ಪ್ರಕಟಿಸಿ ಅದನ್ನು ತಮ್ಮಲ್ಲಿಯ ಕಾಲೇಜುಗಳಲ್ಲಿ ಉಚ್ಚ ಪರೀಕ್ಷೆಗಳಲ್ಲಿ ಉಪಯೋಗಿಸುತ್ತಲಿದ್ದಾರೆ. ಮುಂದೆ ಮುಂಬಯಿ ವಿಶ್ವವಿದ್ಯಾಲಯದವರು ಸಹ ವಚನ ಗ್ರಂಥಗಳನ್ನು ಉಚ್ಚ ಪರೀಕ್ಷೆಗಳಿಗಾಗಿ ಉಪಯೋಗಿಸುತ್ತ ಬಂದಿದ್ದಾರೆ. ಅವುಗಳಲ್ಲಿ ವಚನಶಾಸ್ತ್ರಸಾರ ಭಾಗ ೧ ಮತ್ತು ೨ ಇವುಗಳಲ್ಲಿಯ ಕೆಲವು ಭಾಗಗಳು, ಮಹಾದೇವಿಯಕ್ಕನ ವಚನಗಳು, ಬಸವೇಶ್ವರನ ವಚನಗಳು ಇವೇ ಮುಖ್ಯವಾಗಿರುತ್ತವೆ. ಹರಿಹರನ ರಗಳೆ ಗ್ರಂಥಗಳನ್ನು ಮೈಸೂರು ಮತ್ತು ಮುಂಬೈ ವಿಶ್ವವಿದ್ಯಾಲಯದವರು ಯಾವಾಗಲೂ ತಮ್ಮ ಪರೀಕ್ಷೆಗಳಿಗಾಗಿ ಉಪಯೋಗಿಸುತ್ತ ಬಂದಿದ್ದಾರೆ. ಈ ಪ್ರಕಾರ ಶಿವಾನುಭವ ಪತ್ರಿಕೆಯು ನಡಿಸುತ್ತ ಬಂದ ಕಾರ್ಯಗಳು ಕೆಲವೊಂದು ಸ್ವರೂಪಕ್ಕೆ ಬಂದಿದ್ದು ವಾಚಕರ ಲಕ್ಷ್ಯಕ್ಕೆ ಬಂದಿರಬಹುದು.

ಈ ಎಲ್ಲ ವಿವರಗಳಿಂದ ಶಿವಾನುಭವ ಗ್ರಂಥಗಳಿಗೆ ಅನೇಕ ಆವೃತ್ತಿಗಳು ಉಂಟಾಗಿರಬಹುದೆಂದು ಬಹುಜನರು ಭಾವಿಸಿರಬಹುದು. ಆದರೆ ವಸ್ತುಸ್ಥಿತಿಯು ಬೇರೆಯಾಗಿರುತ್ತದೆ. ಬಸವೇಶ್ವರ, ದೇವರ ದಾಸಿಮಯ್ಯ, ಘನಲಿಂಗ, ಮಹಾದೇವಿಯಕ್ಕ ಇವರ ವಚನಗಳು ಮಾತ್ರ ಒಂದರಕ್ಕಿಂತ ಹೆಚ್ಚು ಆವೃತ್ತಿಯನ್ನು ಕಂಡಿವೆಯು ಹೊರತು ಉಳಿದ ಗ್ರಂಥಗಳು ಖರ್ಚಾಗದೆ ನನ್ನ ಮುದ್ರಣಾಲಯದಲ್ಲಿ ಬಿದ್ದು ಬಿಟ್ಟಿರುತ್ತವೆ. ವೀರಶೈವ ಸಮಾಜದಲ್ಲಿ ವಿದ್ಯಾ ಪ್ರಸಾರವು ಬಹಳ ಕಡಿಮೆ ಇರುವದರಿಂದ ಇಂಥ ಉಚ್ಚ ವಾಙ್ಮಯವು ಅವರಿಗೆ ಇನ್ನೂ ಅಪರಿಚಿತವಾಗಿರುತ್ತದೆ. ಇದರಿಂದ ಹೀಗಾಗುವದು ಸ್ವಾಭಾವಿಕವೇ ಇರುತ್ತದೆ. ಇದಲ್ಲದೆ ಈಚೆಗೆ ಮುದ್ರಣದ ಖರ್ಚು ಮಿತಿಮೀರಿ ಬೆಳೆದಿರುವದರಿಂದ ಈ ಗ್ರಂಥಗಳ ಹೊಸ ಆವೃತ್ತಿಗಳನ್ನು ಪ್ರಸಿದ್ಧಿಸುವದು ಸಾಧ್ಯವಾಗಿರುವದಿಲ್ಲ.

ಶಿವಾನುಭವ ಪತ್ರಿಕೆಯ ಚಂದಾದಾರರ ಸಂಖ್ಯೆಯು ಬಹುಶಃ ೩೦೦ ಕ್ಕಿಂತಲೂ ಹೆಚ್ಚು ಯಾವಾಗಲೂ ಇರುವದಿಲ್ಲ. ಆದರೂ ಅದನ್ನು ಕರ್ನಾಟಕದಲ್ಲಿಯ ಮುಖ್ಯ ಮುಖ್ಯ ಜನರು ಗ್ರಹಿಸುತ್ತ ಬಂದಿದ್ದಾರೆ. ಮತ್ತು ಅವರು ವಚನ ವಾಙ್ಮಯದ ಮಹತ್ವದ ವಿಷಯವಾಗಿ ವಿದ್ವಾಂಸರ ಉಪನ್ಯಾಸಗಳನ್ನು ಆಗಿಂದಾಗ್ಗೆ ಕೇಳುತ್ತ ಬಂದಿದ್ದಾರೆ. ಈ ಬಗೆಯ ಪ್ರಚಾರವು ಬಹುದಿವಸಗಳಿಂದಲೂ ಎಲ್ಲಕಡೆಗೆ ನಡೆಯುತ್ತ ಬಂದಿರುವದರಿಂದ ಇದರ ಪರಿಣಾಮವು ಜನತೆಯಮೇಲೆ ಆಗದೆ ಹೋಗಿಲ್ಲವೆಂದು ಕಂಡುಬಂದಿದೆ. ಆದರೆ ಕೆಲವು ಭಾಗಗಳಲ್ಲಿ ಇದರ ಪ್ರಭಾವವು ಹೆಚ್ಚಾಗಿ ಮತ್ತು ಬೇರೆ ಭಾಗಗಳಲ್ಲಿ ಕಡಿಮೆ ಪ್ರಮಾಣದಿಂದ ಆಗಿದ್ದು ತೋರಿಬರುತ್ತದೆ. ಮೈಸೂರು ಪ್ರಾಂತವು ಸಾಂಸ್ಕೃತಿಕ ಪ್ರಯತ್ನಗಳಲ್ಲಿ ಮತ್ತು ನಾಗರಿಕತೆಯಲ್ಲಿ ಯಾವಾಗಲೂ ಮುಂದೆಬಂದದ್ದಾಗಿರುತ್ತದೆ. ಆದ್ದರಿಂದ ವಚನ ವಾಙ್ಮಯವನ್ನು ಅಲ್ಲಿಯವರು ಹೆಚ್ಚಿಗೆ ಆಳವಾಗಿ ಪರಿಶೀಲಿಸುತ್ತಿದ್ದುದರಿಂದ ಅಲ್ಲಿಯ ವೀರಶೈವ ಸಮಾಜದ ಮೇಲೆ ಅದು ಪರಿಣಾಮಕಾರಿಯಾಗಿದೆಯೆಂದು ಕಂಡುಬಂದಿದೆ. ಸುಮಾರು ೩೦ ವರ್ಷಗಳ ಹಿಂದೆ ಅಲ್ಲಿರುವ ವೀರಶೈವ ಪಂಗಡಗಳಲ್ಲಿ ಅನ್ನೋದಕ ವ್ಯವಹಾರಗಳೂ ಶರೀರ ಸಂಬಂಧಗಳೂ ಪರಸ್ಪರ ಎಷ್ಟು ಮಾತ್ರವೂ ನಡೆಯುತ್ತಿದ್ದಿಲ್ಲ. ಆದರೆ ಈಗ ಆ ಪ್ರಾಂತದಲ್ಲಿ ಇಂಥ ವ್ಯವಹಾರಗಳು ನಿರಾತಂಕವಾಗಿ ನಡೆದಿರುತ್ತವೆ. ಶಿವಶರಣರ ಉದಾರ ತತ್ವಗಳ ಪ್ರಭಾವವು ಅಲ್ಲಿ ಹೆಚ್ಚಾಗಿರುವದರಿಂದ ಯಾರೂ ಇಂಥ ವ್ಯವಹಾರಗಳಿಗೆ ಆಕ್ಷೇಪವನ್ನು ಎತ್ತುವದು ಕಂಡುಬಂದಿಲ್ಲ.

ಆದರೆ ಉತ್ತರ ಕರ್ನಾಟಕವು ಮೈಸೂರು ಪ್ರಾಂತದಷ್ಟು ವಾಙ್ಮಯ ಕಾರ್ಯಗಳಲ್ಲಿ ಮುಂದುವರಿದಿರುವದಿಲ್ಲ. ಜನತೆಯಲ್ಲಿ ವಿಶೇಷವಾಗಿ ವೀರಶೈವರಲ್ಲಿ ಓದುವ ಅಭಿರುಚಿಯು ಬಹಳ ಕಡಿಮೆ ಇರುತ್ತದೆ. ಆದ್ದರಿಂದ ಈ ಭಾಗದಲ್ಲಿ ಶಿವಾನುಭವ ಪತ್ರಿಕೆಯ ಪ್ರಸಾರವು ಮತ್ತು ವಚನಗ್ರಂಥಗಳ ಅಭ್ಯಾಸವು ಬಹಳ ಕಡಿಮೆ ಪ್ರಮಾಣದಿಂದ ನಡೆದಿರುತ್ತದೆ. ಈ ಭಾಗದಲ್ಲಿ ವೀರಶೈವರ ಉಪಪಂಗಡಗಳ ಮಧ್ಯದಲ್ಲಿ ಮೇಲಾಟಗಳು ನಡೆದಿರುತ್ತವೆ. ಆದ್ದರಿಂದ ಇಲ್ಲಿ ಲಗ್ನ ವ್ಯವಹಾರಗಳು ಉಪಪಂಗಡಗಳಲ್ಲಿ ಕ್ವಚಿ

ತ್ವಾಗಿ ಆಗಿರುತ್ತವೆ. ಇದಲ್ಲದೆ ಇತ್ತಕಡೆಗೆ ರಾಜಕೀಯ ಮೇಲಾಟಗಳು ಬಹಳ ಹೆಚ್ಚಾಗಿರುವದರಿಂದ ಸಾಂಸ್ಕೃತಿಕ ಚಟುವಟಿಕೆಗಳು ಸಾವಕಾಶವಾಗಿ ಸಾಗಿರುತ್ತವೆ. ಇದರಿಂದ ಈ ಭಾಗದಲ್ಲಿ ವಚನವಾಙ್ಮಯ ಪ್ರಸಾರವು ಬಹು ಮಂದವಾಗಿ ನಡೆದಿರುತ್ತದೆ.

ಹೈದ್ರಾಬಾದ ಸಂಸ್ಥಾನದಲ್ಲಿ ಶಿವಶರಣರ ವಾಙ್ಮಯದ ವಿಷಯವಾಗಿ ಅತ್ಯಂತ ಪೂಜ್ಯ ಭಾವವು ವ್ಯಾಪಿಸುತ್ತಿದ್ದುದು ಕಂಡುಬಂದಿದೆ. ಶಿವಾನುಭವ ಪತ್ರಿಕೆಯ ಪ್ರಸಾರವು ಇಲ್ಲಿ ಯಾವಾಗಲೂ ಹೆಚ್ಚಿಗಿರುತ್ತದೆ. ಉದಾಹರಣಾರ್ಥವಾಗಿ ಮಹಾರಾಷ್ಟ್ರಕ್ಕೆ ಗಡಿನಾಡಾದ ಉದಗಿರಿ ಭಾಗದಲ್ಲಿ ಕೆಲ ಮಹನೀಯರು ಒಬ್ಬ ಉಪದೇಶಕನನ್ನು ನಿಯಮಿಸಿಕೊಂಡು ಶಿವಾನುಭವದ ತತ್ವ ಪ್ರಸಾರ ಮಾಡುತ್ತಿರುವದು ನನಗೆ ಕಂಡುಬಂದಿದೆ. ಇಲ್ಲಿ ಕಾರ್ಯ ಮಾಡುತ್ತಿದ್ದ ಒಬ್ಬ ಉಪದೇಶಕನು ನನಗೆ ಭೆಟ್ಟಿಯಾದಾಗ ತಾನು ಹಳ್ಳಿ ಹಳ್ಳಿಗೆ ಪಾದಚಾರಿಯಾಗಿ ಹೋಗಿ ಶಿವಶರಣರ ತತ್ವ ಪ್ರಸಾರ ಮಾಡುತ್ತಿರುವದನ್ನು ಕೇಳಿ ನಾನು ವಿಸ್ಮಯಬಟ್ಟೆನು. ಈ ಭಾಗದ ಜನತೆಯಲ್ಲಿ ಬಸವೇಶ್ವರ ಮತ್ತು ಶಿವಶರಣರ ವಿಷಯವಾಗಿ ಅತುಲ ಭಾವ ಆದರವು ವಾಸಿಸುತ್ತಿದೆ. ಆದ್ದರಿಂದ ಈ ಸ್ಥಿತಿಯು ಅಲ್ಲಿ ಉಂಟಾಗಿದೆಯೆಂದು ನನಗೆ ತೋರುತ್ತದೆ. ಆದರೆ ಈ ಭಾಗದಲ್ಲಿ ಕನ್ನಡದ ಪ್ರಚಾರವು ಇನ್ನೂ ಬಹಳ ಕಡಿಮೆಯಿದೆ. ಇದು ಮುಂದೆ ಹೆಚ್ಚುತ್ತ ಹೋದಹಾಗೆ ಶಿವಶರಣರ ವಿಚಾರಗಳ ಪ್ರಭಾವವು ಅಲ್ಲಿ ಬೆಳೆಯುತ್ತ ಹೋಗಬಹುದೆಂದು ನನಗೆ ತೋರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ಶಿವಶರಣರ ವಿಚಾರಗಳ ವಿಷಯವಾಗಿ ಕೆಲವು ಕಾರಣಗಳ ಮೂಲಕ ಜನತೆಯಲ್ಲಿ ಕೆಲವು ವರ್ಷಗಳ ಹಿಂದೆ ವಿರೋಧ ಭಾವವು ಬಲವಾಗಿ ಇದ್ದಿತು. ಆದ್ದರಿಂದ ಇಲ್ಲಿ ಶಿವಾನುಭವ ಪ್ರಚಾರವು ಬಹಳ ಕಡಿಮೆ ಇದ್ದಹಾಗೆ ನನಗೆ ತೋರುತ್ತಿದೆ. ಈಗಿನ ಪರಿಸ್ಥಿತಿಯು ಹೇಗಿದೆಂಬುದು ನನಗೆ ತಿಳಿದಿಲ್ಲ.

ವಿಜಾಪುರ ಮತ್ತು ಸೊಲ್ಲಾಪೂರ ಜಿಲ್ಲೆಗಳು ವಾಙ್ಮಯ ಚಟುವಟಿಕೆಗಳಲ್ಲಿ ಬಹು ಹಿಂದೆಬಿದ್ದ ಪ್ರದೇಶಗಳಾಗಿರುತ್ತವೆ. ಆದ್ದರಿಂದ ಶಿವಾನುಭವದ ಪ್ರಚಾರವಾದರೂ ಇಲ್ಲಿ ಈಗಲೂ ಅಲ್ಪ ಪ್ರಮಾಣದಲ್ಲಿ ಇರುತ್ತದೆ.

ಈ ಪ್ರಕಾರ ಕರ್ನಾಟಕದ ಆಯಾ ಭಾಗಗಳಲ್ಲಿ ಶಿವಶರಣರ ತತ್ತ್ವಗಳ ಪ್ರಸಾರವು ಹೇಗೆ ನಡೆದಿದೆಯೆಂಬುದನ್ನು ನಾನು ಸಂಕ್ಷಿಪ್ತವಾಗಿ ವಿವರಿಸಿದ್ದೇನೆ. ಶಿವಾನುಭವವು ಉಚ್ಚ ತಾತ್ವಿಕ ವಿಚಾರಗಳಿಗೆ ಮಹತ್ವ ಕೊಡುವಂತಹದಿರುತ್ತದೆ. ಆದ್ದರಿಂದ ನಾಗರಿಕತೆಯಲ್ಲಿ ಮುಂದುವರಿಯದ ಸಮಾಜಗಳಲ್ಲಿ ಅದರ ತತ್ವಗಳು ತೀವ್ರ ಪ್ರಸಾರವಾಗುವ ಸಂಭವವು ಕಡಿಮೆ. ಆದರೆ ಕರ್ನಾಟಕದಲ್ಲಿಯ ವೀರಶೈವ ಸಮಾಜವು ಈ ದೃಷ್ಟಿಯಿಂದ ಬಹು ಹಿಂದೆ ಇರುವದರಿಂದ ಇವರಲ್ಲಿ ವಿಶೇಷ ಪ್ರಯತ್ನಗಳು ನಡೆಯುವದು ಬಹು ಅವಶ್ಯವೆಂದು ನಮಗೆ ತೋರುತ್ತದೆ. ವಾಙ್ಮಯ ಸಂಶೋಧನೆಯು ಯಶಸ್ವಿಯಾಗಬೇಕಾದರೆ ಅದರೊಡನೆ ಪ್ರಚಾರ ಕಾರ್ಯವೂ ಬಲವಾಗಿ ಸಾಗಬೇಕು. ಆದ್ದರಿಂದ ಈ ವಿಷಯವನ್ನು ಕುರಿತು ನಾವು ಇಲ್ಲಿ ಹೆಚ್ಚಾಗಿ ವಿವರಣೆ ಮಾಡಿದ್ದೇವೆ.

## ಲೇಖಗಳು

ಈವರೆಗೆ ನಾವು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟವಾದ ಗ್ರಂಥಗಳ ವಿಷಯವಾಗಿ ಉಲ್ಲೇಖಿಸಿದೆವು. ಇನ್ನು ಮುಂದೆ ಈ ಪತ್ರಿಕೆಯಲ್ಲಿ ಹೋದ ೨೫ ವರ್ಷಗಳಲ್ಲಿ ಪ್ರಕಟವಾದ ಲೇಖಗಳ ವಿಷಯವಾಗಿ ಸಂಕ್ಷಿಪ್ತವಾಗಿ ಇಲ್ಲಿ ವಿವರಿಸುವೆವು. ಈ ವರೆಗೆ ಇದರಲ್ಲಿ ಪ್ರಕಟವಾದ ಲೇಖಗಳ ಪುಟ ಸಂಖ್ಯೆಯು ಕನಿಷ್ಟ ೧೨೦೦೦ದವರೆಗೆ ಇದೆ. ಈ ಲೇಖಗಳು ಅನೇಕ ವಿಷಯಗಳ ಬಗ್ಗೆ ಇರುತ್ತವೆ. ಇವುಗಳನ್ನು ಬರೆದವರು ಕರ್ನಾಟಕದ ಎಲ್ಲ ಭಾಗಗಳಲ್ಲಿಯವರಿದ್ದು ಅವರ ಸಂಖ್ಯೆಯು ಬಹಳ ದೊಡ್ಡದಾಗಿರುತ್ತದೆ. ವಿಸ್ತಾರ ಭಯಕ್ಕೋಸ್ಕರ ನಾವು ಅವರೆಲ್ಲರ ಹೆಸರುಗಳನ್ನು ವಿವರಿಸುವದು ಶಕ್ಯವಿಲ್ಲ. ಆದರೆ ಅವರಲ್ಲಿ ಮುಖ್ಯರಾದ ಕೆಲವರ ಹೆಸರುಗಳನ್ನು ಮಾತ್ರ ಇಲ್ಲಿ ಕೊಡುವದು ಅವಶ್ಯವೆನಿಸುತ್ತದೆ.

ಕೈ. ವಾ. ಸಿದ್ಧರಾಮಪ್ಪ ದುಂಡಪ್ಪ ಪಾವಟೆ, ಬಿ.ಎ.ಎಲ್.ಎಲ್.ಬಿ. ಹುಬ್ಬಳ್ಳಿ, ಕೈ. ವಾ. ವೀರಪ್ಪ ಬಸಪ್ಪ ಬೆಳೇಅಂಗಡಿ ಬಿ.ಎ.ಎಲ್.ಎಲ್.ಬಿ. ಹುಬ್ಬಳ್ಳಿ ಮತ್ತು ಕೈ.ವಾ. ಜೀರಗೆ ಬಸವಲಿಂಗಪ್ಪ ಮು. ಬೆಂಗಳೂರು ಈ ಮಹನೀಯರು ವೀರಶೈವ ಸಮಾಜವು ಪ್ರಮುಖರ ತತ್ವಗಳಿಂದ ದೂರಾಗಿ ದೆಂದು ಭಾವಿಸಿ ಅವುಗಳನ್ನು ಅದರಲ್ಲಿ ಪುನಃ ಪ್ರತಿಷ್ಠಿಸಬೇಕೆಂದು ಬಹಳ ಶ್ರಮವಹಿಸಿದರು. ಈ ಮಹನೀಯರು ಶಿವಾನುಭವದ ಆರಂಭದ ಕಾಲ ದಲ್ಲಿ ಅನೇಕ ಮಹತ್ವದ ಲೇಖನಗಳು ಪ್ರಕಟಿಸಿದರು. ಈ ಕಾಲದಲ್ಲಿ ಬೆಂಗ ಳೂರಿನ ನಿವೃತ್ತ ಪೋಲೀಸ ಸುಪರಿಂಟೆಂಡೆಂಟರಾದ ಶ್ರೀಯುತ ಜೀ. ಶಾಂತ ವೀರಪ್ಪನವರು ಮತ್ತು ನಿವೃತ್ತ ಸಬ್‌ಜಜ್ಜರಾದ ವ್ಹಿ. ಜಿ. ಹಾಲಭಾವಿ ಯವರು ಕಾಲಕಾಲಕ್ಕೆ ಅನೇಕ ಲೇಖನಗಳನ್ನು ಇದರಲ್ಲಿ ಬರೆದಿದ್ದಾರೆ. ಹಾಗೆಯೇ ಪ್ರೊ. ಎಸ್. ಎಸ್. ವಾಳವಾಡ, ಪ್ರೊ. ಕೆ. ಜಿ. ಕುಂದಣ ಗಾರ ಇವರು ವೀರಶೈವ ಗ್ರಂಥಕಾರರ ಮತ್ತು ಶಿವಶರಣರ ವಿಷಯ ವಾಗಿ ಅನೇಕ ಲೇಖನಗಳನ್ನು ಬರೆದಿರುವರು. ಹಾಗೆಯೇ ವಿದ್ಯಾವಾಚಸ್ಪತಿ ಶ್ರೀಶಂಭುಲಿಂಗಸ್ವಾಮಿಗಳು ಹಿರೇಮಠ ವಿಜಾಪುರ, ಶ್ರೀ ಬಂಥನಾಳ ಶಿವಯೋಗಿಗಳು ಬಂಥನಾಳ, ಡಾ. ಎಸ್. ಸಿ. ನಂದೀಮಠ ಎಮ್. ಎ. (ಪಿ.ಎಚ್.ಡಿ.) ಪ್ರಿನ್ಸಿಪಾಲ ಬಸವೇಶ್ವರ ಕಾಲೇಜ ಬಾಗಲಕೋಟೆ ಇವರು ವೀರಶೈವ ವಾಙ್ಮಯ ಮತ್ತು ಅನೇಕ ಶಿಲಾಶಾಸನಗಳ ಬಗ್ಗೆ ಮಹತ್ವದ ಲೇಖನಗಳನ್ನು ಇದರಲ್ಲಿ ಬರೆದಿದ್ದಾರೆ. ಇದರಂತೆಯೇ ಶ್ರೀಯುತ ಕೆ. ಡಿ. ಬ್ಯಾಳಿ ಹುನಗುಂದ, ಶ್ರೀ ಮಹಾದೇವ ಸ್ವಾಮಿಗಳು ಸರ್ಪಭೂಷಣ ಮಠ ಬೆಂಗಳೂರು, ಹಲಸಂಗಿಯ ಮಧುರಚೆನ್ನ, ಸಿಂಪಿ ಲಿಂಗಣ್ಣ, ಚಡಚಣ, ಶ್ರೀ ವ್ಹಿ. ಸಿ. ಯುಗಟೆ ಬಿ.ಎ.ಎಲ್.ಎಲ್.ಬಿ. ಹಾವೇರಿ, ಆಸ್ಥಾನ ವಿದ್ವಾನ್ ವೇ. ಮೂ. ಶಿವಮೂರ್ತಿಶಾಸ್ತ್ರಿಗಳು ಬೆಂಗಳೂರು, ಶ್ರೀ ಜಗದ್ಗುರು ನಿಡುಮಾಮಿಡಿ ಮಹಾಸ್ವಾಮಿಗಳು, ಪಂ. ನಾಗೇಶ ಶಾಸ್ತ್ರಿಗಳು ಬಳ್ಳಾರಿ, ಶ್ರೀಬುದ್ಧಯ್ಯಸ್ವಾಮಿ ಪುರಾಣಿಕಮಠ ಧಾರವಾಡ, ಶ್ರೀಯುತ ಟಿ.ಎಚ್.ಎಂ. ಸದಾಶಿವಯ್ಯನವರು ಎಂ.ಎ.ಎಲ್.ಎಲ್.ಬಿ. ಜ್ಯುಡಿಶಿಯಲ್. ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟ ಮು। ನೆಲ್ಲೂರ, ಶ್ರೀ ಮೂರುಸಾವಿರಪ್ಪ ಸಾದರಹಳ್ಳಿ, ಮು। ಹುಬ್ಬಳ್ಳಿ, ಶ್ರೀಯುತ ಅನ್ನದಾನೇಶ್ವರ ವಿರಕ್ತಮಠ ಬಾಗಲಕೋಟ

ಶ್ರೀ ಬಸವಪ್ಪ ಕೆ. ಜೀರಗೆ ಬಿ.ಎ. ಮು। ಬೆಂಗಳೂರ, ಶ್ರೀ ವ್ಹಿ. ಆರ್. ಕೊಪ್ಪಳ ಎಂ.ಎ. ಧಾರವಾಡ, ಶ್ರೀ ಎಸ್. ವ್ಹಿ. ಹಂಜಿ ಮು। ಬಾಗಲಕೋಟ, ಶ್ರೀಯುತ ವ್ಹಿ. ಸಿ. ಬ್ಯಾಹಟ್ಟಿ ಪ್ರಿನ್ಸಿಪಾಲ ಬಸವೇಶ್ವರ ಕಾಲೇಜ ಬಾಗಲಕೋಟ, ಶ್ರೀ ಲಕ್ಕಪ್ಪ ಶಿರಹಟ್ಟಿ ಅಸಿ. ಡೆ. ಎಜ್ಯು. ಇನಸ್ಪೆಕ್ಟರ ವಿಜಾಪುರ, ಶ್ರೀ ಮ. ಮಲ್ಲಪ್ಪ ಮು। ಹುಲಗೂರು ಈ ಮೊದಲಾದ ಮಹನೀಯರು ಕಾಲ ಕಾಲಕ್ಕೆ ಶಿವಾನುಭವ ಪತ್ರಿಕೆಗೆ ಲೇಖನಗಳನ್ನು ಕಳಿಸುತ್ತ ಇದ್ದಾರೆ. ಇವರಲ್ಲದೆ ಶ್ರೀಯುತ ಶಿ.ನಾ. ಮಹಾಂತಣ್ಣವರ ಮು। ಹೂನೂರು ತಾ। ಜಮಖಂಡಿ, ಮತ್ತು ಶ್ರೀ ಬಸಪ್ಪ ಚನ್ನಪ್ಪ ಪಟ್ಟೇದ ಮು. ಹುಕ್ಕೇರಿ ಇವರು ಷಟ್‌ಸ್ಥಲ ಶಾಸ್ತ್ರದ ತತ್ವಗಳನ್ನು ಆಳವಾಗಿ ಅಭ್ಯಾಸ ಮಾಡಿ ಈ ವಿಷಯವಾಗಿ ಅನೇಕ ಮಹತ್ವದ ಲೇಖಗಳನ್ನು ಯಾವಾಗಲೂ ಪ್ರಕಟ ಮಾಡುತ್ತ ಬಂದಿದ್ದಾರೆ. ಇವರಲ್ಲದೆ ಇನ್ನೂ ಅನೇಕ ಮಹನೀಯರು ಪತ್ರಿಕೆಯಲ್ಲಿ ಆಗಿಂದಾಗ್ಗೆ ಲೇಖಗಳನ್ನು ಕಳಿಸಿಕೊಡುತ್ತ ಇದ್ದಾರೆ. ಇವರೆಲ್ಲರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಈ ಯಾವತ್ತು ಲೇಖಗಳ ಅನುಕ್ರಮಣಿಕೆಯನ್ನು ನಾನು ಸಿದ್ಧ ಮಾಡಿದ್ದು ಅದನ್ನು ಪ್ರಸಿದ್ಧಿಸಿದರೆ ಅದು ಒಂದು ದೊಡ್ಡ ಗ್ರಂಥವೇ ಆಗುವದು. ಅದರಲ್ಲಿ ಎಲ್ಲ ಲೇಖಕರ ಲೇಖಗಳೂ ಬರಹಗಾರರ ಹೆಸರುಗಳೂ ಇವೆ. ಅದರಿಂದ ಸಂಶೋಧಕರಿಗೆ ಬಹಳ ಸಹಾಯವಾಗಬಹುದಾಗಿದೆ. ಆದರೆ ಅಂಥ ಕಾಲವು ವೀರಶೈವ ಸಮಾಜದಲ್ಲಿ ಇನ್ನೂ ಪ್ರಾಪ್ತವಾಗಿಲ್ಲ. ಪತ್ರಿಕೆಯ ಹಳೇ ಸಂಪುಟಗಳನ್ನು ಕಾದಿಟ್ಟುಕೊಂಡವರು ಕೆಲವರು ಮಾತ್ರ ಇದ್ದಾರೆ ಆದ್ದರಿಂದ ಇಂಥ ಗ್ರಂಥವನ್ನು ಪ್ರಸಿದ್ಧಿಸುವದರಿಂದ ಬಹಳ ಜನರಿಗೆ ಸದ್ಯಕ್ಕೆ ಪ್ರಯೋಜನವಾಗಲಾರದೆಂದು ನಾನು ಭಾವಿಸಿದ್ದೇನೆ.

ನಾನು ಪತ್ರಿಕೆಯಲ್ಲಿ ಲೇಖಗಳನ್ನು ಪ್ರಸಿದ್ಧಿಸುವಲ್ಲಿ ಸಂಶೋಧನಾತ್ಮಕವಾಗಿ ಬರೆದವುಗಳಿಗೆ ಪ್ರಧಾನ ಸ್ಥಾನವನ್ನು ಕೊಡುತ್ತ ಬಂದಿದ್ದೇನೆ. ನಾನು ಕೇವಲ ಕಥೆ, ಕಾದಂಬರಿ ನಾಟಕ, ಕವಿತೆಗಳಿಗೆ ಮಹತ್ವದ ಸ್ಥಾನವನ್ನು ಕೊಟ್ಟಿರುವದಿಲ್ಲ.

ಪತ್ರಿಕೆಯಲ್ಲಿ ಪ್ರಕಟವಾದ ಲೇಖಗಳಲ್ಲಿ ಕೆಲವು ವರ್ಗಗಳನ್ನು ನಾನು ಮಾಡಬಹುದಾಗಿದೆ. ಅವುಗಳನ್ನು ನಾನು ಇಲ್ಲಿ ಸ್ಥೂಲವಾಗಿಯೂ ಬಹು ಸಂಕ್ಷಿಪ್ತವಾಗಿಯೂ ವಿವರಿಸಲು ಯತ್ನಿಸುತ್ತೇನೆ. ಇದರಿಂದ ಶಿವಾನುಭವ ಪತ್ರಿಕೆಯು ಯಾವ ಯಾವ ಕಾರ್ಯಗಳನ್ನು ಹೇಗೆ ಮಾಡಿದೆಂಬುದರ ಕಲ್ಪನೆಯು ವಾಚಕರಿಗೆ ಉಂಟಾಗಬಹುದೆಂದು ಭಾವಿಸಿದ್ದೇನೆ.

## ವಾಙ್ಮಯ ಸಂಶೋಧನ

ಶಿವಾನುಭವ ಪತ್ರಿಕೆಯ ಮೂಲಕ ಜರುಗಿದ ಕಾರ್ಯಗಳಲ್ಲಿ ಗ್ರಂಥ ಸಂಶೋಧನ ಮತ್ತು ಗ್ರಂಥಗಳ ಪ್ರಕಟನೆ ಇವೇ ಬಹು ಮಹತ್ವದವಾಗಿರುತ್ತವೆ. ಇವುಗಳ ವಿವರಣೆಯನ್ನು ನಾನು ಹಿಂದೆಯೇ ಮಾಡಿದ್ದೇನೆ. ಆದರೆ ಇದರಲ್ಲಿ ನಾನು ಕರ್ನಾಟಕದಲ್ಲಿ ಉಂಟಾದ ವಾಙ್ಮಯ ಪ್ರಯತ್ನಗಳಿಗೆ ಮಾತ್ರ ಮಹತ್ವದ ಸ್ಥಾನವನ್ನು ಕೊಟ್ಟಿದ್ದೇನೆ. ಅಂಧ್ರ, ದ್ರಾವಿಡ ಭಾಷೆಗಳಲ್ಲಿ ಮತ್ತು ಸಂಸ್ಕೃತದಲ್ಲಿ ಆದ ಪ್ರಯತ್ನಗಳಿಗೆ ನಾನು ವಿಶೇಷ ಲಕ್ಷ್ಯವನ್ನು ಪೂರೈಸಿರುವದಿಲ್ಲ. ಬಸವೇಶ್ವರನ ಕಾಲದಲ್ಲಿ ಕರ್ನಾಟಕದಲ್ಲಿ ಒಂದು ಅದ್ಭುತ ಸಾಮಾಜಿಕ ಮತ್ತು ವಾಙ್ಮಯಾತ್ಮಕ ಕ್ರಾಂತಿಯುಂಟಾದ್ದರಿಂದಲೂ ಅದರ ಪರಿಚಯವು ನಾಡಿನಲ್ಲಿ ಇಲ್ಲದ್ದರಿಂದಲೂ ಈ ಕಾರ್ಯಕ್ಕೆ ನಾನು ಮಹತ್ವದ ಸ್ಥಾನವನ್ನು ಕೊಡುತ್ತ ಬಂದಿದ್ದೇನೆ.

## ಐತಿಹಾಸಿಕ ಸಂಶೋಧನೆಗಳು

ಹೋದ ಸಾವಿರ ವರ್ಷಗಳಲ್ಲಿ ವೀರಶೈವ ಐತಿಹಾಸದಲ್ಲಿ ಯಾವ ಘಟನೆಗಳುಂಟಾದವೆಂಬುದನ್ನು ತಿಳಿಯುವದು ಬಹಳ ಮಹತ್ವದ್ದಾಗಿದೆ, ಭಾರತದಲ್ಲಿ ಗತಕಾಲದ ಇತಿಹಾಸವನ್ನು ಬರೆದಿಡುವ ಪದ್ಧತಿಯು ಇರುವದಿಲ್ಲ. ಆದ್ದರಿಂದ ಭಾರತ ಇತಿಹಾಸಜ್ಞರು ಶಿಲಾಶಾಸನಗಳ ಮೇಲೆ ಮುಖ್ಯವಾಗಿ ಅವಲಂಬಿಸಬೇಕಾಗುತ್ತದೆ. ಆದ್ದರಿಂದ ವೀರಶೈವ ಪುರಾತನ ಇತಿಹಾಸದ ವಿಷಯವಾದ ಅಂಥ ಶಾಸನಗಳನ್ನು ನಾವು ಅವಲಂಬಿಸಿ ಅನೇಕ ಲೇಖನಗಳನ್ನು ಇದರಲ್ಲಿ ಪ್ರಸಿದ್ಧಿಸಿದ್ದೇವೆ. ಸೊಲ್ಲಾಪುರದ ಅಮುಗಿ

ದೇವಯ್ಯನ ಶಿಲಾಶಾಸನವು ಭೀಮಾತೀರದಲ್ಲಿರುವ ಪ್ರಳುಜ ಗ್ರಾಮದಲ್ಲಿದ್ದು ಅದನ್ನು ನಾವು ಈ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದೇವೆ. ಹುಕ್ಕೇರಿ ಗ್ರಾಮಕ್ಕೆ ಸಮೀಪವಾಗಿರುವ ಅರ್ಜುನವಾಡದಲ್ಲಿ ದೊರೆತ ಶಾಸನದಲ್ಲಿ ಬಸವೇಶ್ವರನ ಮತ್ತು ಅವನು ಜನ್ಮ ತಾಳಿದ ಗ್ರಾಮದ ಮತ್ತು ಅವನ ತಂದೆಯ ಉಲ್ಲೇಖಗಳಿರುತ್ತವೆ. ಅಲ್ಲದೆ ಅವನ ಅಣ್ಣನ ವಂಶದವರ ಉಲ್ಲೇಖಗಳೂ ಸಹ ಅದರಲ್ಲಿ ಇವೆ. ಈ ಶಿಲಾಶಾಸನವನ್ನು ಸಮಗ್ರವಾಗಿ ನಾವು ಈ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದೇವೆ. ಏಕಾಂತ ರಾಮಯ್ಯನ ಅಬ್ಬಲೂರು ಗ್ರಾಮದ ಶಿಲಾಶಾಸನ, ಸೊನ್ನಲಿಗೆಯ ಕಪಿಲಸಿದ್ಧ ದೇವಾಲಯವನ್ನು ಉಲ್ಲೇಖಿಸುವ ಸಂಗೂರು ಶಿಲಾಶಾಸನ, ಜೌಡದಾನಪುರದಲ್ಲಿ ದೊರೆತ ಅನೇಕ ಶಿಲಾಶಾಸನಗಳು, ಶಿವಮೊಗ್ಗಾ ಜಿಲ್ಲೆಯ ಕೋಳೀಸಾಲೆ ಎಂಬ ಗ್ರಾಮದಲ್ಲಿಯ ಸಿದ್ಧರಾಮನ ಶಿಲಾಶಾಸನ ಇವುಗಳು ಈ ಪತ್ರಿಕೆಯಲ್ಲಿ ಪ್ರಸಿದ್ಧವಾಗಿರುತ್ತವೆ. ಡಾ॥ ಎಸ್. ಸಿ. ನಂದೀಮಠ ಎಂ. ಎ. (ಪಿ.ಎಚ್.ಡಿ.) ಇವರು ತಮಗೆ ಲಂಡನ್ ಮ್ಯುಜಿಯಮದಲ್ಲಿ ದೊರೆತ ರೇವಣಸಿದ್ಧೇಶ್ವರನ ಸಿರಿವಾಳ ಶಾಸನ. ದೇವರ ದಾಸಿಮಯ್ಯನ ಉಲ್ಲೇಖವಿದ್ದ ಗೊಬ್ಬೂರು ಶಿಲಾಶಾಸನ, ಕರುಪಟ್ಟದ ಶಾಸನ ಇವುಗಳನ್ನು ಈ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದಾರೆ. ಈ ಎಲ್ಲ ಶಾಸನಗಳ ಮೂಲಕ ೧೨ನೇ ಮತ್ತು ೧೩ನೇ ಶತಮಾನಗಳಲ್ಲಿ ವೀರಶೈವ ಸಮಾಜದ ಪರಿಸ್ಥಿತಿಯು ಹೇಗಿತ್ತೆಂಬುದನ್ನು ನಾವು ಕಂಡುಹಿಡಿಯಬಹುದಾಗಿದೆ.

## ಮಧ್ಯಯುಗದಲ್ಲಿಯ ವೀರಶೈವೇತಿಹಾಸ

ಮುಂದೆ ಮಧ್ಯಯುಗದಲ್ಲಿ ವಿಜಾಪುರ, ಕಲಬುರಗಿ, ಬೀದರ ಜಿಲ್ಲೆಗಳಲ್ಲಿ ಮುಸಲ್ಮಾನರ ರಾಜ್ಯಗಳು ಉಂಟಾದವು. ದಕ್ಷಿಣದಲ್ಲಿ ವಿಜಯನಗರ, ಕೆಳದಿ, ಸ್ವಾದಿ, ಬೀಳಗಿ. ಕೊಡಗು, ಮೈಸೂರು ರಾಜ್ಯಗಳು ಉದ್ಭವಿಸಿದವು. ಅಲ್ಲದೆ ಈ ಕಾಲದಲ್ಲಿ ಅನೇಕ ದೇಸಗತಿಗಳೂ ಉಂಟಾದವು. ಆದರೆ ಈ ಮನೆತನಗಳಲ್ಲಿರುವ ಮೂಲ ಕಾಗದಪತ್ರಗಳು ನಮಗೆ ಉಪಲಬ್ಧವಾಗಿರುವದಿಲ್ಲ. ಆದರೂ ಈ ಮನೆತನಗಳ ಬಗ್ಗೆ ನಮಗೆ ದೊರೆತ ಐತಿಹಾಸಿಕ ವಿವರಗ

ಳನ್ನು ನಾವು ಈ ಪತ್ರಿಕೆಯಲ್ಲಿ ಸವಿಸ್ತಾರವಾಗಿ ಕಾಲಕಾಲಕ್ಕೆ ನಿರೂಪಿಸುತ್ತ ಬಂದಿದ್ದೇವೆ ಅವು ಯಾವವೆಂದರೆ--

ಬೆಳಗಾಂವ ಜಿಲ್ಲಾ ಕೊಕ್ಕಟನೂರು ದೇಸಗತಿಯು ಶಿರಸಂಗಿ ದೇಸಗತಿಗೆ ಸಂಬಂಧಪಟ್ಟಿದೆ. ಇದರ ಮನೆತನದ ಇತಿಹಾಸವು ನಮಗೆ ಸಮಗ್ರವಾಗಿ ದೊರೆತದ್ದರಿಂದ ಅದನ್ನು ಈ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದೇವೆ. ಪಾಗಲವಾಡಿಯ ಗತಸಿದ ರಾಜರು ತಮ್ಮ ಮನೆತನದ ಕೈಬರಹದ ಇತಿಹಾಸವನ್ನು ನನಗೆ ಓದಿ ತೋರಿಸಿದ್ದನ್ನು ಈ ಪತ್ರಿಕೆಯಲ್ಲಿ ಅಚ್ಚುಹಾಕಿದ್ದೇವೆ. ಬೀಳಗಿ ರಾಜರ ವಂಶಾವಳಿಯು ಕಾವ್ಯರೂಪದಲ್ಲಿದ್ದು ಅದನ್ನು ನಾವು ಸಮಗ್ರ ಅಚ್ಚುಹಾಕಿಸಿದ್ದೇವೆ, ಕೊಡಗು ರಾಜರ ಮೂಲ ಇತಿಹಾಸವನ್ನು ಸ್ವತಂತ್ರವಾಗಿ ಪ್ರಕಟಿಸಿದ್ದೇವೆ. ಪೋರ್ತುಗೀಜ ಪ್ರವಾಸಿಗರು ಸ್ವಾದಿ ಮತ್ತು ಕೆಳದಿ ರಾಜರ ಸೀಮೆಗಳಲ್ಲಿ ಪ್ರವಾಸ ಮಾಡಿದಾಗ್ಗೆ ಅವರು ತಾವು ಕಂಡ ವಿಷಯಗಳನ್ನು ಬರೆದಿಟ್ಟಿದ್ದಾರೆ. ಅವುಗಳ ವಿವರಣೆಗಳು ಗ್ಯಾಝೀಟಿಯರಗಳಲ್ಲಿವೆ. ಇವುಗಳಲ್ಲದೆ ವಿಲ್ಕ್ಸ ಸಾಹೇಬರು ಬರೆದ ಇತಿಹಾಸ ಮತ್ತು ಬುಚಾನಾನ ಎಂಬ ಇಂಗ್ಲೀಷ ಅಧಿಕಾರಿಯು ಬರೆದ ವಿವರಣೆ ಇವುಗಳ ಸಹಾಯದಿಂದ ಕೆಳದಿ ಸ್ವಾದಿ ಮತ್ತು ಕೊಡಗು ರಾಜರುಗಳ ಬಗ್ಗೆ ಅನೇಕ ಲೇಖಗಳನ್ನು ಈ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದೇವೆ.

## ಐತಿಹಾಸಿಕ ಮಹಾಪುರುಷರ ಕಥೆಗಳು

ಕೆಳದಿಯ ಚೆನ್ನಮ್ಮ ರಾಣಿ, ಬಿದನೂರಿನ ಶಿವಪ್ಪ ನಾಯಕ ಇವರಲ್ಲದೆ ಸ್ವಾದಿಯ ಸದಾಶಿವರಾಯ, ಬಸವರಾಜ ಇವರ ಚರಿತ್ರೆಗಳು ಮತ್ತು ಕೊಡಗಿನ ವೀರರಾಜೇಂದ್ರ ಇವರ ಚರಿತ್ರೆಯು ಈ ಪತ್ರಿಕೆಯಲ್ಲಿ ಬಂದಿರುತ್ತವೆ. ಬೆಳವಡಿ ಮಲ್ಲಮ್ಮನು ಯಾವ ಮನೆತನದವಳು ಮತ್ತು ಯಾವ ಗ್ರಾಮದವಳು ಎಂಬುದರ ಬಗ್ಗೆ ಒಂದು ಕಾಲದಲ್ಲಿ ಬಹಳ ಮತಭೇದವಿತ್ತು. ಮಹಾರಾಷ್ಟ್ರ ಇತಿಹಾಸಕಾರರು ಅವಳು ಪ್ರಭು ಅಥವಾ ಕೊಂಕಣಸ್ಥ ಬ್ರಾಹ್ಮಣಳು ಎಂದು ತಿಳಿದು ಆಕೆಯು ಮಹಾರಾಷ್ಟ್ರದವಳೆಂದು ವಾದಿಸುತ್ತಿದ್ದರು. ಹಿಂದಿನ ಕಾಲದ ಮುಸಲ್ಮಾನ ಇತಿಹಾಸಕಾರರು ಸಹ ಅವಳ ವಿವ

ರಣೆಗಳನ್ನು ಭಿನ್ನ ಭಿನ್ನವಾಗಿ ತಮ್ಮ ಇತಿಹಾಸಗಳಲ್ಲಿ ಕೊಡುತ್ತ ಬಂದಿದ್ದಾರೆ. ಆದರೆ ಈ ಬಗ್ಗೆ ಬೈಲಹೊಂಗಲದ ಕೈ. ವಾ. ಮಲ್ಲಿನಾಯಕ ಪಾಟೀಲ ಇವರ ಪ್ರಯತ್ನಗಳ ಮೂಲಕ ಆಕೆಯ ಉಲ್ಲೇಖಗಳಿದ್ದ ಮೂಲ ಕಾಗದ ಪತ್ರಗಳು ನಮಗೆ ದೊರೆತದ್ದರಿಂದ ಮತ್ತು ಇತ್ತೀಚೆಗೆ ಪ್ರಸಿದ್ಧವಾದ ಈಸ್ಟ ಇಂಡಿಯಾ ಕಂಪನಿಯ ಕಾಗದಪತ್ರಗಳ ಮೇಲಿಂದ ಇವಳು ಸಂಪಗಾವ ತಾಲೂಕಿನಲ್ಲಿರುವ ಬೇಳವಡಿ ಗ್ರಾಮದಲ್ಲಿದ್ದ ವೀರಶೈವ ದೇಸಗತಿಯವಳೆಂದು ಕಂಡುಬಂದಿತು. ಆದ್ದರಿಂದ ಈಕೆಯ ಸಮಗ್ರ ಚರಿತ್ರೆಯನ್ನು ನಾನು ಮೊದಲು ಶ್ರೀಯುತ ಆಲೂರು ವೆಂಕಟರಾಯರ ಸೂಚನೆಯ ಮೇರೆಗೆ ಜಯಕರ್ನಾಟಕ ಪತ್ರಿಕೆಯಲ್ಲಿ ಪ್ರಸಿದ್ಧಿಸಿದೆನು. ಆಮೇಲೆ ಅದನ್ನೇ ಮುಂದೆ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟ ಮಾಡಿದ್ದೇನೆ. ಶ್ರೀಯುತ ಕಲ್ಮೇಶ್ವರ ಶೆಟ್ಟಿ ಮು. ಬೈಲಹೊಂಗಲ ಇವರು ಕಿತ್ತೂರು ರಾಜರ ವಂಶಾವಳಿಯನ್ನು ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದಾರೆ. ಈ ಪ್ರಕಾರ ಅನೇಕ ಮಹನೀಯರ ಸಹಾಯದಿಂದ ವೀರಶೈವ ರಾಜ ಮನೆತನಗಳ, ಸಂಸ್ಥಾನಗಳ ಮತ್ತು ದೇಸಗತಿಗಳ ಇತಿಹಾಸಗಳು ಇದರಲ್ಲಿ ಪ್ರಕಟವಾಗಿದೆ. ಸುರಪುರ ರಾಜರ ಆಡಳಿತೆಯಲ್ಲಿ ನಿಷ್ಠೀ ಮದೆತನದ ಕಲ್ಲಪ್ಪ, ವೀರಪ್ಪ ಈ ಮಂತ್ರಿಗಳು ಬಹು ಪ್ರಸಿದ್ಧರಾಗಿದ್ದಾರೆ. ಇವರ ಚರಿತ್ರೆಗಳನ್ನು ಶ್ರೀಯುತ ಕೃಷ್ಣರಾವ ಕಪಟಪ್ರಳ ಮು. ಕಲಬುರ್ಗಿ ಇವರು ಪತ್ರಿಕೆಯಲ್ಲಿ ಪ್ರಸಿದ್ಧಿದ್ದಾರೆ. ಈ ಪ್ರಕಾರ ವೀರಶೈವ ಇತಿಹಾಸದ ಮೇಲೆ ಮಹತ್ವದ ಪ್ರಕಾಶವನ್ನು ಕೊಡುವಂತಹ ಅನೇಕ ಲೇಖಗಳು ಈ ಪತ್ರಿಕೆಯಲ್ಲಿ ಕಾಲಕಾಲಕ್ಕೆ ಪ್ರಸಿದ್ಧವಾಗಿರುತ್ತವೆ.

## ಮಠಾಧಿಕಾರಿಗಳು ಮತ್ತು ಸಾಧುಸತ್ಪುರುಷರು

ವೀರಶೈವ ಸಮಾಜದಲ್ಲಿ ಮಠಾಧಿಕಾರಿಗಳೂ ಸಾಧು ಸತ್ಪುರುಷರೂ ಅನೇಕರಾಗಿದ್ದು ಅವರು ಸಮಾಜೋದ್ಧಾರ ಕಾರ್ಯಗಳಲ್ಲಿ ಬಹು ಮಹತ್ವದ ಅಂಗವನ್ನು ವಹಿಸುತ್ತ ಬಂದಿದ್ದಾರೆ. ಹೀಗೆ ಕಾರ್ಯ ಮಾಡಿದಂಥ ಅನೇಕ ಮಠಾಧೀಶರ ಮಠಗಳ ಮತ್ತು ಸಾಧುಸತ್ಪುರುಷರ ಚರಿತ್ರೆಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸುತ್ತ ಬಂದಿದ್ದೇವೆ. ವಿಜಯ

ನಗರ ರಾಜ್ಯಕ್ಕಿಂತ ಮೊದಲಿದ್ದ ಮಠಗಳ ಮತ್ತು ಮಠಾಧಿಕಾರಿಗಳ ಚರಿತ್ರೆಗಳು ಇನ್ನೂ ಸಾಕಷ್ಟು ಸಂಶೋಧಿಸಲ್ಪಟ್ಟಿಲ್ಲ. ನಾವು ಪ್ರಕಟಿಸಿದ ಷಠರಗಾರ ಚರಿತ್ರೆಗಳಲ್ಲಿ ಮತ್ತು ಕಾಲಜ್ಞಾನ ವಚನಗಳಲ್ಲಿ ಮತ್ತು ಶಿರಂಜನವಂಶರತ್ನಾಕರದಂತ ಗ್ರಂಥಗಳಲ್ಲಿ ಅವರ ವಿವರಣೆಗಳು ಕೆಲ ಮಟ್ಟಿಗೆ ಮಾತ್ರ ಉಪಲಬ್ಧವಿರುತ್ತವೆ. ಆದರೆ ವಿಜಯನಗರ ರಾಜರ ಮತ್ತು ವಿಜಾಪುರ ಬಾದಶಹರ ಕಾಲದಲ್ಲಿ ಮಹತ್ವದ ಮಠಗಳುಂಟಾಗಿದ್ದು ಅವುಗಳಲ್ಲಿ ಆಗಿಹೋದ ಅನೇಕ ಮಠಾಧೀಶರ ಚರಿತ್ರೆಗಳನ್ನು ಪತ್ರಿಕೆಯಲ್ಲಿ ಪ್ರಕಟ ಮಾಡುತ್ತ ಬಂದಿದ್ದೇವೆ. ಸಾರಂಗದೇವ, ಅವನ ತಮ್ಮ ಶಿವಸಂಗಪ್ಪಯ್ಯ ಮತ್ತು ಈತನ ಮಗ ಸಣ್ಣ ಸಾರಂಗದೇವ ಇವರು ಧರ್ಮ ಜಾಗೃತಿಯ ಮಹತ್ವದ ಕಾರ್ಯಗಳನ್ನು ಮಾಡಿದ್ದಾರೆ. ಅವುಗಳ ವಿವರಣೆಗಳುಳ್ಳ ಮೂಲ ಲೇಖಗಳು ಕಪ್ಪಡಿ ಸಂಗಮೇಶ್ವರ ಸ್ಥಾನದಲ್ಲಿದ್ದ ಅವರ ಮಠದ ಅಧಿಕಾರಿಗಳ ಕಡೆಗೆ ಈಗಲೂ ಇರುತ್ತವೆ. ಅದರಂತೆ ಗುಳೇದಗುಡ್ಡ ಮಠದಲ್ಲಿಯೂ ಇವು ಇವೆ. ಅವುಗಳ ಆಧಾರದ ಮೇಲಿಂದ ಅವರ ಚರಿತ್ರೆಗಳನ್ನು ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದೇನೆ. ಅದರಂತೆ ಪಂಚವಣ್ಣಿಗೆಯ ಹೋಳಿಯ ಮಠ, ಹುನಗುಂದ ತಾಲೂಕಿನಲ್ಲಿಯ ಹಡಗಲಿ ಮಠ, ಬೀಳಗಿ ಮಠ, ಹಲಗಲಿಯ ಪ್ರಣೇದ ಮಠ, ಬೆಳಗಾವ ಜಿಲ್ಲೆಯಲ್ಲಿಯ ಮುರದುಂಡೇಶಮಠ ಇವುಗಳ ವಿವರಣೆಗಳು ಪತ್ರಿಕೆಯಲ್ಲಿ ಬಂದಿರುತ್ತವೆ. ಹಾಗೆಯೇ ಮಲ್ಲೇನಹಳ್ಳಿ ಚನ್ನಬಸವದೇವರು, ಸರ್ಪಭೂಷಣ ಸ್ವಾಮಿಗಳು ಬೆಂಗಳೂರು, ಮರಿಸ್ವಾಮಿಗಳು ಬಳ್ಳಾರಿ, ಹೊನ್ನುಡಿಕೆಯ ಗಂಗಾಧರ ಸ್ವಾಮಿಗಳು, ನಾಗಭೂಷಣ ಘನಮಠದಾರ್ಯರು, ಸೋಮೋಕಟ್ಟೆಯ ಕರಿವೃಷಭ ಸ್ವಾಮಿಗಳು, ವೈರಾಗ್ಯ ಚೆನ್ನಬಸವಸ್ವಾಮಿಗಳು, ಕಡಕೋಳ ಮಡಿವಾಳಪ್ಪನವರು, ಗುರುಪಾದ ಶಿವಯೋಗಿಗಳು ಬಬಲೇಶ್ವರ, ತುಮಕೂರ ನಂಜುಂಡ ಶಿವಯೋಗಿಗಳು, ಶ್ರೀ ನಯನಸ್ವಾಮಿಗಳು, ಮಲೆಯ ಮಹದೇಶ್ವರರು, ನೀಲಗುಂದದ ಶಿವಪ್ಪಯ್ಯನವರು, ಶ್ರೀ ಜಗದ್ಗುರು ನಿಡುಮಾಮಿಡಿ ಮಠಾಧೀಶ್ವರರು, ರಾಜವಟ್ಟಿ ಮಠಾಧೀಶ್ವರರು, ಮೈಲಾರ ಬಸಪ್ಪನವರು ಹೀಗೆ ಅನೇಕ ಮಹತ್ವಿಕರಾದ ಶಿವಯೋಗೀಶ್ವರರ, ಮಠಾಧಿಕಾರಿಗಳ

ಮತ್ತು ಮಠಗಳ ವೃತ್ತಾಂತಗಳು ಪತ್ರಿಕೆಯಲ್ಲಿ ಪ್ರಕಟವಾಗಿರುತ್ತವೆ. ಅವುಗಳೆಲ್ಲವು ಮೂಲ ಗ್ರಂಥಗಳ ಆಧಾರದಿಂದ ಅಥವಾ ಸ್ಥಾನಿಕ ಸಂಶೋಧನಗಳ ಸಹಾಯದಿಂದ ಅನೇಕ ಲೇಖಕರು ಬರೆದವುಗಳಾಗಿರುತ್ತವೆ. ಇಂಥ ಧಾರ್ಮಿಕ ಪುರುಷರು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಕಾಲಕಾಲಕ್ಕೆ ಉತ್ಪನ್ನರಾಗಿ ವೀರಶೈವ ಸಮಾಜಕ್ಕೆ ಮಹತ್ವವನ್ನು ತಂದು ಕೊಟ್ಟಿದ್ದಾರೆ. ಅಂಥವರ ಚರಿತ್ರೆಗಳನ್ನು ವೀರಶೈವರು ಅರಿಯುವದು ಅವಶ್ಯವೆಂದು ತೋರಿದ್ದರಿಂದ ಇವುಗಳನ್ನು ನಾನು ಪತ್ರಿಕೆಯಲ್ಲಿ ಸಂಗ್ರಹಿಸಿದ್ದೇನೆ.

## ಶಿವಶರಣರ ಚರಿತ್ರೆಗಳು

ಶಿವಶರಣರ ಚರಿತ್ರೆಗಳ ಮೂರು ವಿಭಾಗಗಳನ್ನು ನಾನು ಈ ವರೆಗೆ ಪ್ರಕಟಿಸಿದ್ದು ಇನ್ನು ಎರಡು ಭಾಗಗಳು ಪ್ರಕಟನೆಗೆ ಸಿದ್ಧವಾಗಿರುತ್ತವೆ. ಈ ಕಡೆಯವುಗಳಲ್ಲಿ ಬಸವೇಶ್ವರನ ಸಮಕಾಲೀನರ ಚರಿತ್ರೆಗಳು ಮುಖ್ಯವಾಗಿ ಕೊಡಲ್ಪಡುವವು. ಐತಿಹಾಸಿಕ ದೃಷ್ಟಿಯಿಂದ ಸಂಬಲರ್ಹವಾದ ಸಂಗತಿಗಳನ್ನು ಆರಿಸಿ ಈ ಎಲ್ಲ ಭಾಗಗಳಲ್ಲಿ ಸಂಗ್ರಹಿಸಲು ಶಕ್ಯವಿದ್ದಷ್ಟರ ಮಟ್ಟಿಗೆ ನಾನು ಪ್ರಯತ್ನಿಸಿದ್ದೇನೆ. ಅವುಗಳನ್ನು ಬರೆಯುವಲ್ಲಿ ಸ್ಥಾನಿಕ ಐತಿಹ್ಯಗಳನ್ನೂ ಕಾಗದ ಪತ್ರಗಳನ್ನೂ ಅವಲಂಬಿಸಿ ಬರೆದಿದ್ದೇನೆ. ಬಸವೇಶ್ವರನ ಕಾಲದ ಮತ್ತು ಅವನಕಿಂತ ಪೂರ್ವದಲ್ಲಿದ್ದ ಜಂಗಮ ವರ್ಗದವರು ವೀರಶೈವ ಧರ್ಮದ ಪ್ರಸಾರ ಕಾರ್ಯದಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿದ್ದಾರೆ. ಇವುಗಳ ವಿವರಗಳನ್ನು ನಾನು ಶಿವಶರಣರ ಚರಿತ್ರೆಗಳು ಮೂರನೆಯ ಭಾಗ ಇದರ ಅಂತ್ಯದಲ್ಲಿ ಕೊಟ್ಟಿದ್ದೇನೆ.

## ಬಸವೇಶ್ವರನ ಚರಿತ್ರೆ

ಬಸವೇಶ್ವರನ ಕಾಲ ವಿಚಾರದ ಬಗ್ಗೆ ಮತ್ತು ಅವನ ಚರಿತ್ರೆಯ ಬಗ್ಗೆ ನಾನು ೨೬ ಲೇಖನಗಳನ್ನು ಬರೆದು ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದೇನೆ. ಇದಲ್ಲದೆ ಅವನ ವಿಚಾರಗಳು ಅವನು ಮಾಡಿದ ಸಮಾಜ ಸುಧಾರಣೆಯ ಕಾರ್ಯಗಳು, ಅವನ ತತ್ವಬೋಧೆಗಳು, ಇವುಗಳ ವಿಷಯವಾಗಿ ಬಹು ಜನರು ಲೇಖಗಳನ್ನು ಬರೆದು ಯಾವಾಗಲೂ ಪತ್ರಿಕೆಯಲ್ಲಿ ಪ್ರಕಟಿಸುತ್ತಾ ಬಂದಿ

ದ್ದಾರೆ. ಅವುಗಳನ್ನೆಲ್ಲ ಇಲ್ಲಿ ವಿವರಿಸುವದು ಅಶಕ್ಯವೇ ಸರಿ. ಬಸವೇಶ್ವರನು ಮಾಡಿದ ಕ್ರಾಂತಿಕಾರಕ ಕಾರ್ಯಗಳನ್ನು ವಿವರಣೆ ಮಾಡಿದಲ್ಲಿ ಅವರ ಬಗ್ಗೆ ಒಂದು ದೊಡ್ಡ ಗ್ರಂಥವೇ ಆಗುವದು. ಇಷ್ಟು ಲೇಖನ ಸಾಮಗ್ರಿಗಳು ಶಿವಾನುಭವ ಪತ್ರಿಕೆಯಲ್ಲಿ ಕಾಣಬಹುದೆಂದು ಹೇಳಿದಲ್ಲಿ ಅದು ಅತಿಶಯೋಕ್ತಿಯಾಗಲಾರದೆಂದು ನಾನು ಭಾವಿಸಿದ್ದೇನೆ.

### ಪುಣ್ಯಕ್ಷೇತ್ರಗಳು ಮತ್ತು ಐತಿಹಾಸಿಕ ಪ್ರಸಿದ್ಧಸ್ಥಳಗಳು

ವೀರಶೈವ ಸಮಾಜದಲ್ಲಿ ಅನೇಕ ಧಾರ್ಮಿಕ, ಮತ್ತು ರಾಜಕೀಯ ಪುರುಷರು ಆಗಿಹೋಗಿರುವದರಿಂದ ಅವರ ಹೆಸರಿನ ಪುಣ್ಯ ಸ್ಥಳಗಳು ಕರ್ನಾಟಕ ಮಾತ್ರವಲ್ಲ, ಆದರ ಸುತ್ತಲಿನ ಪ್ರದೇಶಗಳಲ್ಲಿ ಸಹ ಉಂಟಾಗಿರುತ್ತವೆ. ಅನೇಕ ಲೇಖಕರು ಅಂಥ ಸ್ಥಳಗಳನ್ನು ಸಂದರ್ಶಿಸಿ ಅವುಗಳ ವೃತ್ತಾಂತಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿರುತ್ತಾರೆ. ಆಸ್ಥಾನ ವಿಧ್ವಾನ್ ಜಿ. ಶಿವಮೂರ್ತಿಶಾಸ್ತ್ರಿಗಳು ರೇವಣಸಿದ್ಧೇಶ್ವರನ ಸ್ಥಾನಗಳನ್ನು ನೋಡಿ ಅನೇಕ ಮಹತ್ವದ ಲೇಖನಗಳನ್ನು ಬರೆದಿದ್ದಾರೆ. ಅವು ಮಂಗಳಪಾದ, ಮಾಸನೂರು, ಸಿದ್ಧನಕೆರೆ, ಕೊಲ್ಲಿಪಾಕಿ, ಸಿದ್ಧಗಿರಿ, ಮುಂತಾದವುಗಳು ಇರುತ್ತವೆ. ಶ್ರೀಯುತ ವೀರಭದ್ರಪ್ಪ ಹಾಲಭಾವಿಯವರು ಸಾತಾರಾ ಜಿಲ್ಲೆಯಲ್ಲಿರುವ ರೇವಣಸಿದ್ಧನ ರೇಣಾವಿ ಕ್ಷೇತ್ರ, ಶಂಕರದಾಸಿಮಯ್ಯನ ಕೃಷ್ಣಾತೀರದಲ್ಲಿರುವ ನವಿಲಿ ಗ್ರಾಮದಲ್ಲಿರುವ ಜಡೆ ಶಂಕರ ದೇವಾಲಯ ಇವುಗಳ ವಿವರಣೆಗಳನ್ನು ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದಾರೆ. ಶ್ರೀಯುತ ಗೊಲ್ಲಾಳ ಪೂಜಾರಿ ಬಿ. ಕಾಮ್ ಇವರು ದೇವರದಾಸಿಮಯ್ಯನ ಗ್ರಾಮವಾದ ಮುದನೂರು ಮತ್ತು ಅದಕ್ಕೆ ಸಮೀಪವಿರುವ ಕೆಂಭಾವಿ. ಆಗ್ನ ಮುಂತಾದ ಸ್ಥಳಗಳನ್ನು ಸಂದರ್ಶಿಸಿ ಲೇಖಗಳನ್ನು ಬರೆದಿದ್ದಾರೆ. ಇದಲ್ಲದೆ ಪತ್ರಿಕೆಯ ಸಂಚಿಕೆಗಳಲ್ಲಿ ದಾವಿನಹಾಳ, ಸೊನ್ನಲಿಗೆ, ಬಿಪ್ಪರಿಗೆ, ಶ್ರೀಶೈಲ, ಬಳ್ಳಿಗಾವಿ. ಉಡುತಡಿ, ಗುಬ್ಬಿ, ಏಕಾಂತದರಾಮಯ್ಯನ ಸ್ಥಾನವಾದ ಆಲಂದೆ, ಅಲ್ಲದೆ ಪುಲಿಗೆರೆ ಸುತ್ತೂರು, ಸಿದ್ದಗಂಗಾ, ಎಡೂರು. ಕೂಡಲಸಂಗಮ, ಗೊಬ್ಬೂರು. ದ್ರಾಕ್ಷಾರಾಮ. ಹರದನಹಳ್ಳಿ, ಬಳ್ಳಿಗಾವಿ. ತಲಕಾಡು ಶಂಭುಲಿಂಗನಭಟ್ಟ, ಜಂಬೂರು, ಮುತ್ತಗಿ, ಉಡುತಡಿ,

ಕೊಲ್ಲಾಪೂರ, ಪಾಲ್ಕುರಿಕೆ, ಕೇದಾರ, ಸೋಸಲೆ, ಗುಡ್ಡಾಪೂರ ಮುಂತಾದ ಕ್ಷೇತ್ರಗಳ ಬಗ್ಗೆ ವರ್ಣನಾತ್ಮಕ ಲೇಖಗಳು ಪತ್ರಿಕೆಯು ಅನೇಕ ಸಂಚಿಕೆಗಳಲ್ಲಿ ಬಂದಿರುತ್ತವೆ. ಹಾಗೆಯೇ ವೀರಶೈವ ರಾಜಮನೆತನಗಳು ರಾಜ್ಯವಾಳಿದ ಸ್ಥಳಗಳಾದ ಬೀಳಗಿ, ಸ್ವಾದಿ, ಇಕ್ಕೇರಿ, ಕೆಳದಿ, ಹಾಗಲವಾಡಿ ಈ ಮೊದಲಾದ ಗ್ರಾಮಗಳ ವರ್ಣನೆಗಳೂ ಬಂದಿರುತ್ತವೆ.

ವೀರಶೈವರು ಯಾವ ಕ್ಷೇತ್ರವನ್ನೂ ಮನ್ನಿಸಬಾರದೆಂದು ಪ್ರಮಥರ ಸ್ಪಷ್ಟ ಉಕ್ತಿಗಳು ಇರುತ್ತವೆ. ಅಂದರೆ ಕೇವಲ ದರ್ಮದೃಷ್ಟಿಯಿಂದ ವಿಚಾರ ಮಾಡಲು ಅಲ್ಲಿಯ ಮೂರ್ತಿಗಳು ವೀರಶೈವನು ಸಾಧಿಸಬೇಕಾದ ಇಷ್ಟ ಪ್ರಾಣ, ಭಾವಲಿಂಗಗಳಿಗೆ ಪ್ರತಿಯಾಗಿರುವವೆಂದು ಭಾವಿಸುವದು ನಿಷಿದ್ಧವಾದುದೆಂಬುದರಲ್ಲಿ ಏನೂ ಸಂದೇಹವಿರಲಾರದು. ಆದರೆ ಈ ಸ್ಥಳಗಳಲ್ಲಿರುವ ಪ್ರತಿಮೆಗಳು ಮಹಾಪುರುಷರ ಸ್ಮಾರಕಗಳೆಂದು ತಿಳಿದು ಅವುಗಳಿಗೆ ಅವರು ಮನ್ನಣೆಕೊಡುವವರಲ್ಲಿ ಯಾವ ದೋಷವೂ ಇರಲಾರದು. ಇಂಥ ಸ್ಮಾರಕಗಳ ಸಹಾಯದಿಂದಲೇ ನಾವು ವೀರಶೈವರಲ್ಲಿ ಆಗಿಹೋದ ಅನೇಕ ರಾಜಕೀಯ ಮತ್ತು ಧಾರ್ಮಿಕ ಮಹಾಪುರುಷರ ಚರಿತ್ರೆಗಳಲ್ಲಿರುವ ಮಹತ್ವದ ಅಂಶಗಳನ್ನು ಕಂಡುಹಿಡಿಯುವದು ಸಾಧ್ಯವಾಗಿರುತ್ತದೆ.

## ಗ್ರಂಥಕಾರರು

ಇಂಗ್ಲಿಷರು ನಮ್ಮ ದೇಶಕ್ಕೆ ಬಂದಬಳಿಕ ಹೊಸತರದ ಶಿಕ್ಷಣವು ಇಲ್ಲಿ ಪ್ರಾರಂಭವಾಗಲು ಆಗ ಅನೇಕ ವೀರಶೈವ ಗ್ರಂಥಕಾರರು ಉದಯವಾದರು. ಅವರು ನಾಡಿನಲ್ಲಿ ಮಹತ್ವದ ಶೈಕ್ಷಣಿಕ ಕಾರ್ಯಗಳನ್ನು ಮಾಡಿದ್ದಾರೆ. ಅಂಥವರ ಚರಿತ್ರೆಗಳು ಈ ಪತ್ರಿಕೆಯಲ್ಲಿ ಬಂದಿರುತ್ತವೆ. ಉತ್ತರ ಕರ್ನಾಟಕದಲ್ಲಿ ಚನಬಸಪ್ಪ ಧಾರವಾಡ ಇವರು ಪ್ರಸಿದ್ಧಿಗೆ ಬಂದರು. ಅವರ ಬೋಧಪ್ರದ ಚರಿತ್ರೆಯು ಪತ್ರಿಕೆಯಲ್ಲಿ ಬಂದಿದೆ. ಮೈಸೂರು ಪ್ರಾಂತದಲ್ಲಿ ಆಸ್ಥಾನ ವಿದ್ವಾನ್ ಬಸವಪ್ಪಶಾಸ್ತ್ರಿಗಳು. ಎನ್. ಆರ್. ಕರಿಬಸವ ಶಾಸ್ತ್ರಿಗಳು, ಪಿ. ಆರ್. ಕರಿಬಸವಶಾಸ್ತ್ರಿಗಳು, ಮಾಗಡಿ ವೀರಪ್ಪ ಶಾಸ್ತ್ರಿಗಳು, ಕರಿಬಸವ ಕವೀಂದ್ರಶಾಬಕ, ವ್ಯಾಕರಣದ ಮಲ್ಲಪ್ಪನವರು

ಧಾರ್ಮಿಕ ಪುರುಷರಾದ ಕಡಕೋಳ ಮಡಿವಾಳಪ್ಪನವರು ಈ ಮುಂತಾದ ವರ ಚರಿತ್ರೆಗಳನ್ನು ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದೇವೆ. ಈ ಎಲ್ಲ ಮಹನೀಯರು ಕರ್ನಾಟಕ ನಾಡಿನ ಸಂಸ್ಕೃತಿಯನ್ನು ಜನತೆಯಲ್ಲಿ ಹೆಚ್ಚಿಸಿದವರೇ ಇದ್ದಾರೆ.

## ಆಂಧ್ರ ಮತ್ತು ತಮಿಳು ನಾಡುಗಳಲ್ಲಿಯ ಸಮಾಜಗಳ ವೃತ್ತಾಂತಗಳು

ಈ ಪ್ರಾಂತಗಳಲ್ಲಿರುವ ಕೆಲವು ಸಮಾಜಗಳು ವೀರಶೈವ ಸಮಾಜಕ್ಕೆ ಅನುವರ್ತಿಸಿ ನಡೆಯುವಂಥವು ಇವೆ. ಇಂಥ ಸಮಾಜಗಳ ವೃತ್ತಾಂತಗಳು ಪತ್ರಿಕೆಯ ಸಂಚಿಕೆಗಳಲ್ಲಿ ಬಂದಿರುತ್ತವೆ. ಶ್ರೀಜಗದ್ಗುರು ನಿಡುಮಾಮಿಡಿ ಮಠದ ಮಹಾಸ್ವಾಮಿಗಳವರು ತಮಿಳು ದೇಶದಲ್ಲಿರುವ ಪಂಡಾರ ಇವರು, ವೇಳಾಳುರ, ಜಂಗಾಲರು. ಚೇಣಿಗರು, ಒಕಲಿನ್ ಮೊದಲಾದವರ ವಿವರಣೆಗಳನ್ನು ಪ್ರಕಟಿಸಿದ್ದಾರೆ. ಕಾಶೀಕ್ಷೇತ್ರದಲ್ಲಿ ಹಿಂದುಗಡೆ ಪೀಠಾಧಿಕಾರಿಗಳಾಗಿ ಜಗದ್ಗುರು ಸ್ಥಾನವನ್ನು ಹೊಂದಿದ್ದ ಚಿದರೆಮಠದ ವೀರಭದ್ರ ಶರ್ಮರು ಆಂಧ್ರ ದೇಶದಲ್ಲಿ ವಾಸಿಸುವ ಅನೇಕ ವೀರಶೈವ ಪಂಗಡಗಳ ಚರಿತ್ರೆಗಳನ್ನು ಕೊಟ್ಟಿದ್ದಾರೆ. ಈ ವಿವರಣೆಗಳು ವೀರಶೈವ ಸಮಾಜೇತಿಹಾಸವನ್ನು ಬರೆಯುವವರಿಗೆ ಬಹಳ ಸಹಾಯವಾಗದೆ ಇರಲಾರವು.

## ಆಂಧ್ರ ವೀರಶೈವ ವಾಙ್ಮಯ

ವೀರಶೈವ ಧರ್ಮವು ಆಂಧ್ರದೇಶದಲ್ಲಿಯೂ ಪ್ರಸಾರ ಹೊಂದಿರ್ರುತ್ತದೆ. ಅಲ್ಲಿ ಶ್ರೀಪತಿಪಂಡಿತಾರಾಧ್ಯ, ಪಾಲ್ಕುರಿಕೆ ಸೋಮಾರಾಧ್ಯ, ಅನ್ನಮಾಮಾತ್ಯ ಮೊದಲಾದವರು ಆಗಿಹೋಗಿರುತ್ತಾರೆ. ಅವರ ವಿಷಯ್ಯವನ್ನು ಕುರಿತು ಶ್ರೀ ಟಿ. ಎಚ್. ಎಮ್. ಸದಾಶಿವಯ್ಯನವರು ಸಂಶೋಧನಾತ್ಮಕವಾಗಿ ಅನೇಕ ಲೇಖಗಳನ್ನು ಪತ್ರಿಕೆಯಲ್ಲಿ ಬರೆದಿರುತ್ತಾರೆ.

ಆಂಧ್ರದೇಶದಲ್ಲಿ ಪ್ರಸಾರವಾದ ವೀರಶೈವ ಪದ್ಧತಿಗಳಲ್ಲಿ ಬ್ರಾಹ್ಮಣ ಧರ್ಮದ ಛಾಯೆಯು ಬಹಳ ಇರುವದರಿಂದ ಅವರ ವೀರಶೈವತ್ವದ ವಿಷಯ್ಯ

ವಾಗಿ ಕರ್ನಾಟಕದಲ್ಲಿ ಕೆಲವು ಮತಭೇದಗಳುಂಟಾಗಲು ಕಾರಣವಾಗಿದೆ. ಈ ಸಂಗತಿಯು ಶ್ರೀಕರಭಾಷ್ಯದ ವಿಮರ್ಶೆಯಲ್ಲಿ ಕಂಡುಬರುತ್ತದೆ. ಆಂಧ್ರ ವಾಙ್ಮಯದ ಆರಂಭ ಕಾಲದಲ್ಲಿ ಇದು ಕಂಡುಬಂದರೂ ೧೬ನೆಯ ಶತಮಾನದ ತರುವಾಯ ಉಂಟಾದ ಆಂಧ್ರ ವಾಙ್ಮಯದಲ್ಲಿ ಈ ತರದ ವ್ಯತ್ಯಾಸಗಳು ಕಂಡುಬರುವದಿಲ್ಲ. ಅದು ಶಿವಶರಣರ ವಾಙ್ಮಯವನ್ನೇ ಅನುಸರಿಸುತ್ತ ಬಂದಿದೆ. ವಚನಶಾಸ್ತ್ರದ ಪರಿಶೀಲನೆಯು ಈಚೆಗೆ ಕರ್ನಾಟಕದಲ್ಲಿ ಕಡಿಮೆಯಾಗಹತ್ತಲು ಬ್ರಾಹ್ಮಣ್ಯಕ್ಕೆ ಒಲಿದ ಇಲ್ಲಿಯ ಕೆಲವು ವೀರಶೈವ ವಿದ್ವಾಂಸರು ಸಹ ಮೊದಲಿನ ಕಾಲದ ಆಂಧ್ರ ದೇಶದ ವಾಙ್ಮಯದಲ್ಲಿಯ ತತ್ವಗಳನ್ನು ಮತ್ತು ಆಚರಣೆಗಳನ್ನು ಗ್ರಂಥಗಳನ್ನು ಕೆಲವು ಕಾಲ ಪುರಸ್ಕರಿಸುತ್ತ ಬಂದುದು ಕಂಡುಬರುತ್ತದೆ.

## ಶೈವ ಧರ್ಮಗಳು

(ಕಾಶ್ಮೀರ ಶೈವಧರ್ಮ ಪಾಶುಪತ ಮತ್ತು ಕಾಳಾಮುಖಿ ಧರ್ಮಗಳು)

ಈ ಮೂರು ಧರ್ಮಗಳ ವಿಷಯವಾಗಿ ಶಿವಾನುಭವ ಪತ್ರಿಕೆಯಲ್ಲಿ ಕೆಲವು ಲೇಖಗಳು ಪ್ರಕಟವಾಗಿರುತ್ತವೆ. ಅವುಗಳನ್ನು ಮುಖ್ಯವಾಗಿ ಡಾ. ಎಸ್. ಸಿ. ನಂದೀಮಠ, ಹಲಸಂಗಿಯ ಮಧುರ ಚನ್ನ, ಶ್ರೀ ಜೇರಗೆ ಬಸವಲಿಂಗಯ್ಯನವರು ಬರೆದಿದ್ದಾರೆ. ಈ ಮೂರೂ ಸಮಾಜಗಳಿಗೆ ಹೊಂದಿನವರು ಕರ್ನಾಟಕವನ್ನು ಕಾಲಕಾಲಕ್ಕೆ ಪ್ರವೇಶಮಾಡಿ ಇಲ್ಲಿ ವಸಾಹತು ಮಾಡಿದ್ದು ಕಂಡುಬರುತ್ತದೆ. ಆದ್ದರಿಂದ ಪತ್ರಿಕೆಯಲ್ಲಿ ನಾವು ಇವುಗಳ ವಿವೇಚನೆಗೆ ಸ್ಥಾನವನ್ನು ಕೊಡುತ್ತ ಬಂದಿದ್ದೇವೆ.

## ತಮಿಳು ಶೈವ ವಾಙ್ಮಯ

ತಮಿಳು ದೇಶದಲ್ಲಿರುವ ಶೈವರಿಗೂ ವೀರಶೈವ ವಿದ್ವಜ್ಜನರಿಗೂ ನಿಕಟ ಸಂಬಂಧವಿದೆ. ಆದರೆ ವಚನಕಾರರು ತಮಿಳು ಶೈವರನ್ನು ಅಂಧತೆಯಿಂದ ಅನುಸರಿಸಿರುವದಿಲ್ಲ. ಹಾಗೆಯೇ ತಮಿಳರೂ ಕೂಡ ಕರ್ನಾಟಕದ ಶಿವಶರಣರನ್ನು ಹಿಂಬಾಲಿಸಿರುವದಿಲ್ಲ. ಉಭಯತರು ಸ್ವತಂತ್ರವಾಗಿಯೇ ತಮ್ಮ

ತಮ್ಮ ವಿಚಾರಗಳನ್ನು ತಮ್ಮದೇ ಆದ ರೀತಿಗಳಿಂದ ಪ್ರಬಲಗೊಳಿಸುತ್ತ ಬಂದಿದ್ದಾರೆ. ಬಸವೇಶ್ವರನ ತರುವಾಯ ಕರ್ನಾಟಕದ ವೀರಶೈವರು ತಮಿಳು ಪುರಾತನರನ್ನು ಮನ್ನಿಸುತ್ತಿರುವದನ್ನು ನಾವು ಕಾಣುತ್ತೇವೆ. ಆದರೆ ತಮಿಳು ದೇಶದ ೬೩ ಪುರಾತನರ ಚರಿತ್ರೆಗಳನ್ನು ಶಿವಶರಣರ ಚರಿತ್ರೆಗಳಿಗೆ ಹೋಲಿಸಿದರೆ ಶಿವಶರಣರ ಚರಿತ್ರೆಗಳು ಸಂಸ್ಕೃತಿಯ ಉಚ್ಚ ಮಟ್ಟವನ್ನು ಹೊಂದಿದ್ದು ಕಂಡುಬರುತ್ತದೆ. ವಾಚಕರು ಶಿವಶರಣರ ಚರಿತ್ರೆಗಳು ಭಾಗ ೨ ಈ ಗ್ರಂಥ ವನ್ನು ನೋಡಬೇಕು. ಕರ್ನಾಟಕ ವೀರಶೈವರು ತಮ್ಮ ವಾಙ್ಮಯವನ್ನು ಮರೆತಿದ್ದಾರೆ. ಆದ್ದರಿಂದ ಅವರು ತಮಿಳರ ಬೆನ್ನು ಹತ್ತಿರುವಂತೆ ನಮಗೆ ತೋರುತ್ತದೆ.

## ಆಗಮ ಗ್ರಂಥಗಳು

ಅನೇಕ ವೀರಶೈವ ಪಂಡಿತರು ಸಂಸ್ಕೃತದಲ್ಲಿರುವ ಆಗಮ ಗ್ರಂಥಗಳಿಗೆ ಮಹತ್ವಕೊಡುತ್ತಿರುವದು ಕಂಡುಬರುತ್ತಿದೆ. ಅವರಲ್ಲಿ ಕೆಲವರು ಈ ಗ್ರಂಥಗಳೇ ವೀರಶೈವರಿಗೆ ಆಧಾರಗಳೆಂದು ತಿಳಿಯುವದುಂಟು. ಆದರೆ ಅವುಗಳ ನಿಜಸ್ವರೂಪವನ್ನು ಕುರಿತು ಶಿವಾನುಭವ ಪತ್ರಿಕೆಯಲ್ಲಿ ಕೆಲವು ಲೇಖಗಳು ಬಂದಿರುತ್ತವೆ. ಅವುಗಳಲ್ಲಿ ಡಾ. ಎಸ್. ಸಿ. ನಂದಿಮಠ ಇವರು ಸಂಶೋಧನಾತ್ಮಕವಾಗಿ ಬರೆದ ಲೇಖಗಳು ಪತ್ರಿಕೆಯಲ್ಲಿ ಪ್ರಕಟವಾಗಿವೆ. ಆಗಮ ಗ್ರಂಥಗಳು ಶೈವರಿಗೆ ಮಹತ್ವದವಾಗಿದ್ದರೂ ಕರ್ನಾಟಕದ ಶಿವಶರಣರು ಅವುಗಳ ತತ್ವಗಳನ್ನು ಅಂಧತೆಯಿಂದ ಅನುಸರಿಸಿರುವದಿಲ್ಲ. ಅವರು ಸ್ವತಂತ್ರ ವಿಚಾರವುಳ್ಳವರಾಗಿ ತಮ್ಮದೇ ಆದ ಷಟ್‌ಸ್ಥಲ ಮಾರ್ಗವನ್ನು ಕಂಡುಹಿಡಿದು ಅದನ್ನು ಪುರಸ್ಕರಿಸುತ್ತ ಬಂದಿದ್ದಾರೆ.

## ಧರ್ಮಗಳ ತುಲನಾತ್ಮಕ ವಿವೇಚನೆಗಳು

ಸಂಸ್ಕೃತಿಯ ನಿಜವಾದ ಸ್ವರೂಪವನ್ನು ತಿಳಿಯಲಿಕ್ಕೆ ಇತರ ಧರ್ಮಗಳ ವ್ಯಾಸಂಗವೂ ಕೂಡ ಉಪಯುಕ್ತವಾಗಿರುತ್ತದೆ. ಪಾಶ್ಚಿಮಾತ್ಯ ತತ್ವವೇತ್ತಿಗಳ ಮತ್ತು ಜೈನ ಬೌದ್ಧ ಧರ್ಮೀಯರ ತತ್ವಗಳನ್ನು ಅರಿಯುವವ

ಬಹಳ ಮಹತ್ವದ್ದಿರುತ್ತದೆ. ಈ ದೃಷ್ಟಿಯಿಂದ ಶ್ರೀಯುತ ವ್ಹಿ. ಸಿ ಯಂಗಟಿ ಇವರು ಪಾಶ್ಚಿಮಾತ್ಯ ತತ್ವಜ್ಞಾನ ಮತ್ತು ಜೈನ ಧರ್ಮ ಇವುಗಳ ಸಂಬಂಧ ವಾಗಿ ಕೆಲವು ತುಲನಾತ್ಮಕ ಲೇಖಗಳನ್ನು ಬರೆದಿರುವರು. ಅವು ಬಹು ಉಪಯುಕ್ತವಾಗಿರುತ್ತವೆ. ನಾವು ಅವುಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದೇವೆ.

## ಶಿವಾನುಭವದ ತತ್ವಗಳು

ಶಿವಾನುಭವ ಈ ವಿಷಯವು ವಿಶೇಷ ಸ್ವರೂಪದ್ದಿದ್ದು ಇದರ ಬಗ್ಗೆ ಶ್ರೀ ಶಿವಯೋಗಿ ಬಂಥನಾಳ ಸ್ವಾಮಿಗಳೂ ಶ್ರೀ ವಿದ್ಯಾವಾಚಸ್ಪತಿ ಶಂಭು ಲಿಂಗ ಸ್ವಾಮಿಗಳು ಸರ್ಪಭೂಷಣ ಮಠ ಬೆಂಗಳೂರು ಇವರೂ ಇನ್ನೂ ಅನೇಕರೂ ಮಹತ್ವದ ಲೇಖಗಳನ್ನು ಬರೆದಿರುವರು. ಅವು ಪತ್ರಿಕೆಯಲ್ಲಿ ಪ್ರಕಟವಾಗಿರುತ್ತವೆ. ಇಂಥ ಲೇಖಗಳಲ್ಲಿ ಕೆಲವುಗಳನ್ನು ನಾವು ಆರಿಸಿ "ಶಿವಾನುಭವ ಸತ್ಯ ಮಾರ್ಗ" ಎಂಬ ಗ್ರಂಥದಲ್ಲಿ ಮುದ್ರಣಪಡಿಸಿರುತ್ತೇವೆ.

## ಶೂನ್ಯ ಸಂಪಾದನೆ

"ಶೂನ್ಯಸಂಪಾದನೆ" ಇದು ವೀರಶೈವ ವಾಙ್ಮಯದಲ್ಲಿ ಅದ್ವಿತೀಯ ಗ್ರಂಥವಾಗಿದೆ. ಅದು ವೀರಶೈವರಿಗೆ ಒಂದು ಆಧಾರ ಗ್ರಂಥವಾಗಿರುತ್ತದೆ. ಅದರಲ್ಲಿ ಶಿವಾನುಭವದ ತತ್ವಗಳ ವಿವೇಚನೆಗಳು ತುಂಬಿ ಹೋಗಿರುತ್ತವೆ. ಆದ್ದರಿಂದ ಮಠಾಧಿಪತಿಗಳಿಗೆ ಸ್ಥಳಕೊಡುವ ಕಾಲದಲ್ಲಿ ಶೂನ್ಯ ಸಂಪಾದನೆ ಈ ಗ್ರಂಥವನ್ನು ಇತರ ಕೆಲವು ಗ್ರಂಥಗಳೊಡನೆ ಅವರ ವಶಕ್ಕೆ ಕೊಡುವ ಪದ್ಧತಿಯು ಇರುತ್ತದೆ. ಇದರಿಂದ ಈ ಗ್ರಂಥದ ಮಹತ್ವವು ಎಷ್ಟಿದೆಂಬುದು ತಿಳಿದು ಬರುವದು. ಈ ಗ್ರಂಥದ ಸಾರವನ್ನು ಶ್ರೀ ಕಲ್ಯಾಣಪ್ಪ ಬ್ಯಾಳಿ ಇವರು ಸ್ಥೂಲವಾಗಿಯೂ ಸಂಕ್ಷಿಪ್ತವಾಗಿಯೂ ಕೆಲವು ಲೇಖಗಳಲ್ಲಿ ವಿವರಿಸಿದ್ದಾರೆ. ಅವು ಬಹು ಉಪಯುಕ್ತ ಲೇಖಗಳಾಗಿರುತ್ತವೆ. ಅವೆಲ್ಲವು ಗಳು ಪತ್ರಿಕೆಯಲ್ಲಿ ಪ್ರಸಿದ್ಧವಾಗಿರುತ್ತವೆ.

## ಷಟ್‌ಸ್ಥಲ ವಿವೇಚನೆ

ವಚನಶಾಸ್ತ್ರದಲ್ಲಿ ಷಟ್‌ಸ್ಥಲಗಳ ವಿವೇಚನೆಯು ಅತ್ಯಂತ ಮಹತ್ವದ್ದಾಗಿರುತ್ತದೆ. ವಚನಶಾಸ್ತ್ರ ಮತ್ತು ಷಟ್‌ಸ್ಥಲ ಜ್ಞಾನ ಈ ಶಬ್ದಗಳು ಸಮಾನಾರ್ಥವುಳ್ಳವಾಗಿವೆಂದು ನಾವು ಹೇಳಬಹುದು. ವಚನಶಾಸ್ತ್ರದ ಉಲ್ಲೇಖವು ಷಟ್‌ಸ್ಥಲಗಳ ಜ್ಞಾನವನ್ನು ಮಾಡಿಕೊಡುವದೇ ಇರುತ್ತದೆ. ಷಟ್‌ಸ್ಥಲಗಳು ಆತ್ಮ ವಿಕಾಸವನ್ನುಂಟುಮಾಡಲು ಬಹು ಸಹಾಯಕಾರಿಗಳಾಗಿರುತ್ತವೆ. ಇದರಲ್ಲಿ ೧, ೩, ೬, ೩೬, ೨೧೬, ಹೀಗೆ ಬೇರೆ ಬೇರೆ ಸ್ಥಲಗಳು ಇರುತ್ತವೆ. ಇವುಗಳನ್ನು ವಿವರಿಸುವ ಅನೇಕ ಲೇಖಗಳು ಈ ಪತ್ರಿಕೆಯಲ್ಲಿ ಬಂದಿರುತ್ತವೆ. ಈ ವಿಷಯಗಳ ವಿವರಣೆಗಳನ್ನು ಮುಖ್ಯವಾಗಿ ಶ್ರೀ ಕಲ್ಯಾಣಪ್ಪ ಬ್ಯಾಳಿ, ಶ್ರೀ ಬಸಪ್ಪ ಪಟ್ಟೇದ, ಶ್ರೀ ಸಿ. ಸಾ. ಮಹಾಂತಣ್ಣವರು, ಶ್ರೀ ವ್ಹಿ. ಸಿ. ಯಗಟಿ ಈ ಮೊದಲಾದವರು ತಮ್ಮ ಲೇಖಗಳಲ್ಲಿ ಮಾಡಿರುತ್ತಾರೆ.

## ಏಕೋತ್ತರ ಶತಸ್ಥಲಗಳು

ಈ ಸ್ಥಲಗಳು ಷಟ್‌ಸ್ಥಲಗಳಲ್ಲಿ ಸಮಾವೇಶವಾಗುತ್ತವೆ. ಇವುಗಳ ಸವಿಸ್ತಾರವಾದ ವಿವರಣೆಗಳನ್ನು ಷಟ್‌ಸ್ಥಲಗಳನ್ನು ವಿವೇಚನೆ ಮಾಡಿರುವ ಮೇಲೆಕಾಣಿಸಿದ ವಿದ್ವಜ್ಜನರೇ ತಮ್ಮ ಲೇಖಗಳಲ್ಲಿ ಮಾಡಿರುತ್ತಾರೆ. ಅವೆಲ್ಲವೂ ಈ ಪತ್ರಿಕೆಯಲ್ಲಿ ಪ್ರಸಿದ್ಧವಾಗಿವೆ.

## ಲಿಂಗಪೂಜೆ ಮತ್ತು ಯೋಗಾಭ್ಯಾಸ

ಈ ವಿಷಯಗಳ ಬಗ್ಗೆ ಅನೇಕ ಮಹತ್ವದ ಲೇಖಗಳು ಪತ್ರಿಕೆಯಲ್ಲಿ ಬಂದಿರುತ್ತವೆ. ಲಿಂಗಪೂಜೆಯ ಉದ್ದೇಶವು ಷಟ್‌ಚಕ್ರಗಳಲ್ಲಿ ಲಿಂಗ ಶಕ್ತಿಯನ್ನು ಉಂಟು ಮಾಡುವದೇ ಇರುತ್ತದೆ. ಸಂಬಂಧಿಸಿದ ವಿವೇಚನೆಗಳು ಅನೇಕ ಲೇಖಗಳಲ್ಲಿ ಬಂದಿರುತ್ತವೆ. ಇವುಗಳಲ್ಲಿ ಇಷ್ಟಲಿಂಗದ ಪೀಠದ ಸ್ವರೂಪ, ಅದರ ಕ್ರಾಂತಿಯ ಉದ್ದೇಶ, ಇವೇ ಮೊದಲಾದವುಗಳು ಹೇಳಲ್ಪಟ್ಟಿವೆ. ಆಧಾರಾದಿಗಳಲ್ಲಿ ಆರು ಲಿಂಗಗಳಲ್ಲದೆ, ಅವುಗಳ

ಗಿಂತಲೂ ಸೂಕ್ಷ್ಮವಾದ ಮೂರು ಅವ್ಯಕ್ತ ಲಿಂಗಗಳು ಕಡೆಯ ಮೂರು ಚಕ್ರಗಳಲ್ಲಿವೆ. ಈ ಪ್ರಕಾರ ಷಡ್ಲಿಂಗಗಳಿದ್ದು ಅವುಗಳ ಸಾಧನೆಯ ಬಗ್ಗೆ ಅನೇಕ ಲೇಖಗಳು ಈ ಪತ್ರಿಕೆಯಲ್ಲಿ ಬಂದಿವೆ. ಇವುಗಳಲ್ಲಿ ಇಷ್ಟಲಿಂಗದ ಅವಶ್ಯಕತೆ ಏನು, ತ್ರಿಲಿಂಗಗಳೆಂದರೇನು. ಇವುಗಳು ವಿವರಿಸಲ್ಪಟ್ಟಿವೆ. ಇದಲ್ಲದೆ ೨೧ ದೀಕ್ಷೆಗಳಾವವು, ಅವುಗಳ ಉದ್ದೇಶಗಳೇನು ಎಂಬುದು ಸಹ ಹೇಳಲ್ಪಟ್ಟಿದೆ. ಸರ್ವಾಂಗಲಿಂಗ ಸಾಧನೆಯ ಬಗ್ಗೆಯೂ ಪತ್ರಿಕೆಯಲ್ಲಿ ಲೇಖಗಳು ಬಂದಿವೆ.

ಲಿಂಗದ ಬಗ್ಗೆ ವೀರಶೈವರಲ್ಲಿ ಇಂಥ ವಿಚಾರಗಳು ಇರುವದರಿಂದ ಅವರು ಯೋಗಾಭ್ಯಾಸವನ್ನು ಲಕ್ಷಿಸುವದಿಲ್ಲ. ಸಿದ್ಧಿಗಳನ್ನು ಹೊಂದಲು ಅವರು ಅಪೇಕ್ಷಿಸುವದಿಲ್ಲ. ಯೋಗಸಾಧನೆಗಳು ವೀರಶೈವರನ್ನು ತಪ್ಪು ದಾರಿಗೆ ಹಚ್ಚುತ್ತವೆಂದು ಅವರ ಅಭಿಪ್ರಾಯವಿದೆ. ಈ ವಿಷಯಗಳ ಬಗ್ಗೆ ಸವಿಸ್ತಾರವಾದ ಲೇಖಗಳು ಶಿವಾನುಭವದ ಸಂಚಿಕೆಗಳಲ್ಲಿ ಬಂದಿರುತ್ತವೆ.

ಮೇಲ್ಕಂಡ ವಿಚಾರಗಳು ವೀರಶೈವರಲ್ಲಿರುವದರಿಂದ ಮೂರ್ತಿ ಪೂಜೆಯನ್ನು ಅವರು ಮಾಡಬಾರದೆಂದು ಶಿವಶರಣರ ಉಕ್ತಿಗಳಿರುತ್ತವೆ. ವೀರಶೈವರು ದೇಹವೇ ದೇವಾಲಯವೆಂದು ಭಾವಿಸಬೇಕು. ಆದ್ದರಿಂದ ಅವರು ಸ್ಥಾವರ ಲಿಂಗಗಳನ್ನು ಪ್ರತಿಷ್ಠೆ ಮಾಡುವದನ್ನು ನಿಷೇಧಿಸುತ್ತಾರೆ. ಈ ವಿಷಯಗಳ ಬಗ್ಗೆ ಅನೇಕ ಮಹನೀಯರು ಈ ಪತ್ರಿಕೆಯ ಸಂಚಿಕೆಗಳಲ್ಲಿ ಅನೇಕ ಲೇಖಗಳನ್ನು ಬರೆದಿರುತ್ತಾರೆ.

### ವರ್ಣಾಶ್ರಮ ಧರ್ಮಗಳು ಮತ್ತು ಜಾತಿಭೇದಗಳು

ಈ ವಿಷಯವಾಗಿ ಅನೇಕ ಲೇಖಗಳು ಶಿವಾನುಭವ ಪತ್ರಿಕೆಯಲ್ಲಿ ಬಂದಿರುತ್ತವೆ. ಒಂದು ಕಾಲದಲ್ಲಿ ವೀರಶೈವ ಸಮಾಜದಲ್ಲಿ ಬ್ರಾಹ್ಮಣ ಧರ್ಮದ ಅನುಕರಣಮಾಡುವದರಿಂದಲೇ ಅದರ ಮಹತ್ವವು ಹೆಚ್ಚುವದೆಂಬ ತಿಳಿವಳಿಕೆ ಇತ್ತು. ಕೇವಲ ಸಂಸ್ಕೃತ ವಾಙ್ಮಯದ ಅಭ್ಯಾಸ ಮಾಡಿದವರು ಈ ತರದ ವಿಚಾರಗಳನ್ನು ಪುರಸ್ಕರಿಸುತ್ತ ಬರುತ್ತಿದ್ದರು. ಶಿವಾನುಭವ ಪತ್ರಿಕೆಯನ್ನು ಹೊರಡಿಸುವ ಕಾಲದಲ್ಲಿ ಇಂಥ ವಿಚಾರಗಳು ಸಮಾ

ಜದಲ್ಲಿ ಬಹಳ ಪ್ರಬಲವಾಗಿದ್ದವು. ಈ ವಿಚಾರಗಳನ್ನು ವಿರೋಧಿಸುವವರು ಬಹು ಜನರಿದ್ದರೂ ಕೂಡ ಅವರು ತಮ್ಮ ಪಕ್ಷವನ್ನು ಸಮರ್ಥಿಸಲಿಕ್ಕೆ ಬೇಕಾಗುವ ವಾಙ್ಮಯವು ಅವರಿಗೆ ಉಪಲಬ್ಧವಿರಲಿಲ್ಲ. ಆದರೆ ವಚನ ಶಾಸ್ತ್ರ ಗ್ರಂಥಗಳು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟವಾಗಹತ್ತಿದಂದಿನಿಂದ ಇವರಿಗೆ ಬೇಕಾದ ಆಧಾರ ಗ್ರಂಥಗಳು ದೊರೆಯಲಿಕ್ಕೆ ಹತ್ತಲು ಇವರ ಪಕ್ಷವು ಕ್ರಮೇಣ ಪ್ರಬಲವಾಗುತ್ತ ನಡೆಯಿತು. ಈ ವಿಷಯದ ಬಗ್ಗೆ ಪತ್ರಿಕೆಯ ಆರಂಭ ಕಾಲದಲ್ಲಿ ಅನೇಕ ಮಹನೀಯರು ಆಧಾರ ಪೂರ್ವಕ ವಾಗಿ ಜಾತಿ, ವರ್ಣ ಮತ್ತು ಆಶ್ರಮಗಳನ್ನು ಖಂಡಿಸಿ ಬರೆದ ಲೇಖಗಳು ಯಾವಾಗಲೂ ಬರುತ್ತಿದ್ದವು. ಶಿವಶರಣರ ವಿಚಾರಗಳು ಬಹುಶಃ ಕೆಲ ವೊಂದು ತತ್ವವನ್ನು ಅವಲಂಬಿಸಿದವುಗಳಿರುತ್ತವೆ. ಇದಲ್ಲದೆ ಅವರ ಹೆಸರುಗಳು ನಾಡಿನಲ್ಲೆಲ್ಲ ಪೂಜ್ಯವಾದವುಗಳು. ಆದ್ದರಿಂದ ಜಾತಿ ವರ್ಣಾಶ್ರಮ ಧರ್ಮಗಳನ್ನು ಪುರಸ್ಕರಿಸುವಂಥವರ ಸಂಖ್ಯೆಯು ಕ್ರಮೇಣ ಸಮಾಜದಲ್ಲಿ ಕಡಿಮೆಯಾಗಹತ್ತಿತು. ಇಷ್ಟೇ ಅಲ್ಲ, ಈಚೆಗೆ ವೀರಶೈವರ ಉಪ ಸಂಗಡನಗಳಲ್ಲಿ ಅನ್ನೋದಕ ಮತ್ತು ಲಗ್ನಾದಿ ವ್ಯವಹಾರಗಳು ನಿರಾಂತಕ ವಾಗಿ ನಡೆಯುವದು ಸಹ ಆರಂಭವಾಗಿದೆ. ಇದು ಅದ ಒಂದು ಸಮಾಜ ಸುಧಾರಣೆಯ ಕಾರ್ಯವೆಂದು ಹೇಳಬಹುದಾಗಿದೆ. ಈ ವಿಷಯದ ಬಗ್ಗೆ ಅನೇಕ ಲೇಖಗಳನ್ನು ಕೈ. ವಾ. ಸಿದ್ಧರಾಮಪ್ಪ ಪಾವಟೆ, ಕೈ. ವಾ. ವೀರಪ್ಪ ಮೇಲಿನಂಗಡಿ, ಕೈ. ವಾ. ಜೀರಗೆ ಬಸವಲಿಂಗಪ್ಪ ಮೊದಲಾದವರು ಶಿವಾನುಭವ ಪತ್ರಿಕೆಯಲ್ಲಿ ಬರೆದಿದ್ದಾರೆ.

## ಆತಂಕಗಳು

ನಾನು ಶಿವಾನುಭವ ಪತ್ರಿಕೆಯನ್ನು ೧೯೨೬ನೇ ಫೆಬ್ರುವರಿಯಲ್ಲಿ ಪ್ರಾರಂಭಿಸಿದೆನು. ಅವರೆಗೆ ಲೇಖಕರಾಗಿ ಕಾರ್ಯಮಾಡುತ್ತ ಬಂದ ಶ್ರೀಯುತ ಸಂಗಪ್ಪ ಮಿರ್ಜಿ ಇವರನ್ನು ಪ್ರೆಸ್ಸಿನ ಮ್ಯಾನೇಜರಾಗಿ ಮತ್ತು ಇನ್ನೊಬ್ಬರಾದ ಶ್ರೀ ಚಂದ್ರಶೇಖರಯ್ಯ ಮಠ ಇವರನ್ನು ಅವರ ಸಹಾಯಕರಾಗಿ ನೇಮಿಸಿದೆನು. ಈ ಉಭಯತರು ಶಿವಾನುಭವ ಕಾರ್ಯದಲ್ಲಿ ನನಗೆ ಬಹಳ ಸಹಾಯಮಾಡುತ್ತ ಬಂದರು. ೫-೬ ವರ್ಷ ಕೆಲಸ ನಡೆಯುತ್ತಿರಲು

೧೯೩೧ರಲ್ಲಿ ನನಗೆ ಅತ್ಯಂತ ಅಸ್ವಸ್ಥತೆಯುಂಟಾಯಿತು. ಆಗ ನಾನು ಮುಂಬಯಿಗೆ ಹೋಗಿ ಕೆ.ಇ.ಎಮ್. ಹಾಸ್ಪಿಟಲಿನಲ್ಲಿ ಮೂತ್ರಾಶಯದ ಬಗ್ಗೆ ಆಪರೇಶನ್ ಮಾಡಿಸಿಕೊಳ್ಳಬೇಕಾಯಿತು. ಆಗ ನನ್ನ ಹಿರಿಯ ಮಗನಾದ ಚಿ॥ ಚಂದ್ರಶೇಖರ ಇವರು ವಿಕ್ಟೋರಿಯಾ ಟೆಕ್ನಿಕಲ್ ಇನಸ್ಟಿಟ್ಯೂಟ್‌ನಲ್ಲಿ ಅಭ್ಯಾಸ ಮಾಡುತ್ತಿದ್ದರು. ಅವರಲ್ಲಿಯೂ ದವಾಖಾನೆಯಲ್ಲಿಯೂ ೨ ತಿಂಗಳ ವರೆಗೆ ನಾನು ಕಾಲಕಳೆಯಬೇಕಾಯಿತು. ಇದರಿಂದ ನನ್ನ ಶಿವಾನುಭವ ಕಾರ್ಯಗಳಿಗೆ ತಡೆಯುಂಟಾಯಿತು.

ಮುಂದೆ ಎರಡನೇ ಮಹಾಯುದ್ಧವು ಪ್ರಾರಂಭವಾಯಿತು. ಈ ಕಾಲ ದಲ್ಲಿ ಕಾಗದ, ಮಸಿ ಮೊದಲಾದ ಪ್ರೆಸ್ಸಿನ ಉಪಕರಣಗಳೆಲ್ಲ ಬಹಳ ತುಟ್ಟಿ ಯಾದ್ದರಿಂದಲೂ ಒಮ್ಮೊಮ್ಮೆ ಅವು ಸಿಗದ್ದರಿಂದಲೂ ಪತ್ರಿಕೆಯ ಕಾರ್ಯ ಗಳನ್ನು ನಡಿಸುವದು ಬಹಳ ದುಸ್ತರವಾಗಹತ್ತಿತು. ಮತ್ತು ನನಗೆ ಹಾನಿಯೂ ಸಂಭವಿಸಿತು. ಆಗ ನಾನು ಶಿವಾನುಭವ ಪ್ರಚಾರಕ್ಕೋಸ್ಕರ ನನ್ನ ಪ್ರಚಾರಕರಾದ ಶ್ರೀ ವೀರಭದ್ರಯ್ಯ ಶಿವಯ್ಯ ಗುಡಗುಂಟಿ ಇವರನ್ನು ಬೇರೆ ಬೇರೆ ಕಡೆಗೆ ಕಳಿಸಿಕೊಟ್ಟೆನು. ಅವರ ಪ್ರಚಾರದ ಕಾರ್ಯಗಳು ಬೆಳಗಾಂವ ಜಿಲ್ಹೆಯಲ್ಲಿ ಬಹಳ ಫಲಕಾರಿಯಾದವು. ಆಗ ಏರ್ಪಡಿಸಿದ್ದ ಶಿವಾನುಭವ ಆಪದ್ಧನ ನಿಧಿಗೆ ಈ ಜಿಲ್ಹೆಯವರು ಬಹಳ ಸಹಾಯ ಮಾಡಿದರು. ಇದ ಕ್ಕೋಸ್ಕರ ನಾನು ಇವರೆಲ್ಲರಿಗೆ ಬಹಳ ಋಣಿಯಾಗಿದ್ದೇನೆ. ಅವರು ಹೀಗೆ ಸಹಾಯ ಮಾಡದೆ ಹೋಗಿದ್ದರೆ ಶಿವಾನುಭವ ಪತ್ರಿಕೆಯನ್ನು ನಾನು ಪೂರ್ಣ ವಾಗಿ ನಿಲ್ಲಿಸುವ ಪ್ರಸಂಗವು ಉಂಟಾಗುತ್ತಿತ್ತು.

ಇದೇ ರೀತಿಯ ಕಠಿಣಪ್ರಸಂಗವು ೧೯೪೪ರಲ್ಲಿ ನನಗೊದಗಿತು. ನಾನು ರೇಲ್ವೆ ಪ್ರವಾಸ ಮಾಡುವಾಗ ಮೇಲೆ ಮಲಗಲು ಉಪಯೋಗಿಸುವ 'ಬರ್ಥ' ವನ್ನು ಏರುವಾಗ ಕಾಲುಜಾರಿ ನೆಲಕ್ಕೆ ಬಿದ್ದಮೂಲಕ ನನ್ನ ಹಿಮ್ಮಡಿಯ ಎಲುವು ಮುರಿಯಿತು. ಇದರಿಂದ ನಾನು ಸುಮಾರು ಒಂದು ವರ್ಷದವರೆಗೆ ಹಾಸಿಗೆಯನ್ನು ಹಿಡಿಯಬೇಕಾಯಿತು. ಈ ಕಾಲದಲ್ಲಿ ನನ್ನ ಪ್ರೆಸ್ಸಿಗೆ ಬಹಳ ಹಾನಿಯುಂಟಾಯಿತು ಅಲ್ಲದೆ ಅಂದಿನಿಂದ ಈವರೆಗೆ ನನಗೆ ಅನೇಕ ಬಗೆಯ

ಶಾರೀರಿಕ ಮಾನಸಿಕ ಮತ್ತು ಕೌಟುಂಬಿಕ ವಿಪತ್ತುಗಳು ಒದಗಿದವು. ಆದ್ದರಿಂದ ಕೆಲವು ತಿಂಗಳು ಪತ್ರಿಕೆಯನ್ನು ನಿಲ್ಲಿಸಬೇಕಾಯಿತು. ಆಫೀಸಿನ ಅವ್ಯವಸ್ಥೆಯೂ ಉಂಟಾಯಿತು. ಈ ಸ್ಥಿತಿಯು ಈಗ ಕ್ರಮೇಣ ಸುಧಾರಿಸುತ್ತಲಿದೆ. ಆದರೂ ನನಗೆ ಉಂಟಾದ ವಿಶೇಷ ಹಾನಿಯಿಂದ ನಾನು ಇನ್ನೂ ಪಾರಾಗಿರುವದಿಲ್ಲ. ಆದರೆ ಬಸವಾದಿಪ್ರಮಥರ ಕರುಣೆಯಿಂದ ಅನುಕೂಲ ಕಾಲವು ಒದಗುವದೆಂದು ಹಾರೈಸಿದ್ದೇನೆ.

## ದೇಣಿಗೆಗಳು

ನಾನು ಶಿವಾನುಭವ ಪತ್ರಿಕೆಯನ್ನು ೧೯೨೬ರಲ್ಲಿ ಪ್ರಾರಂಭಿಸಿದ ಕಾಲದಲ್ಲಿ ಅದ ಹೊಸ ಪ್ರಯತ್ನವಾದ್ದರಿಂದ ನನಗೆ ಅನೇಕ ತೊಂದರೆಗಳುಂಟಾದವು. ನಷ್ಟಗಳೂ ಉಂಟಾದವು. ಆಗ ನಾನು ಪ್ರಚಾರಕ್ಕೋಸ್ಕರ ಶ್ರೀ ಚಂದ್ರಶೇಖರಯ್ಯ ಮಠ ಇವರನ್ನು ಬೇರೆ ಬೇರೆ ಕಡೆಗೆ ಕಳಿಸಬೇಕಾಯಿತು. ಈ ಕಾಲದಲ್ಲಿ ಬಸವೇಶ್ವರನ ವಚನ ಪ್ರಸಿದ್ಧಿಸಿದವರಿಗೆ ಒಂದು ಸಾವಿರ ರೂಪಾಯಿಗಳನ್ನು ಕೊಡಬೇಕೆಂದು ಕೈ. ವಾ. ಮುಸಗಿ ಮರಿಶಾಂತಪ್ಪನವರು ಮು. ದಾವಣಗೆರೆ ಇವರು ಮೃತ್ಯುಪತ್ರ ಬರೆದಿಟ್ಟದ್ದರಿಂದ ಅದಕ್ಕನುಸರಿಸಿ ಅವರ ವಾರಸದಾರರಾದ ಇಬ್ಬರು ಬರಂಜೀಪಿಗಳು ಶ್ರೀಮತಿ ಮರಿಶಾಂತಮ್ಮನವರು ಸಿದ್ದಪ್ಪ ಮು ಅಜ್ಜಂಪುರ ಶ್ರೀಮತಿ ಗಂಗಮ್ಮನವರು ಮುರಿಗೆಪ್ಪ ಮು. ಹೊದಿಗ್ಗೆರೆ ಇವರು ನನಗೆ ದೇಣಿಗೆಯನ್ನು ಕಳಿಸಿಕೊಟ್ಟರು. ಈ ಹಣವು ಸಕಾಲದಲ್ಲಿ ಬಂದದ್ದರಿಂದ ಶಿವಾನುಭವ ಪತ್ರಿಕೆಗೆ ಬಹಳ ಸಹಾಯವಾಯಿತು. ಈ ಕಾರ್ಯದಲ್ಲಿ ನನಗೆ ಶ್ರೀಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಗಳು ಬಹಳ ಸಹಾಯ ಮಾಡಿದರು. ಮುಂದೆ ಶ್ರೀಮನ್ನಿರಂಜನ ಜಗದ್ಗುರು ಶ್ರೀ ಗುರುಸಿದ್ಧಸ್ವಾಮಿಗಳು, ಮೂರುಸಾವಿರಮಠ ಹುಬ್ಬಳ್ಳಿ ಇವರು ಪ್ರಭುದೇವರ ವಚನಕ್ಕೋಸ್ಕರ, ಶ್ರೀ ವೀರಭದ್ರಪ್ಪ ಹಾಲಭಾವಿ ನಿವೃತ್ತ ಸಬ್ ಜಜ್ಜ ಧಾರವಾಡ ಇವರು ಶೂನ್ಯ ಸಂಪಾದನೆಗೋಸ್ಕರ ಈಚೆಗೆ ಶ್ರೀ ಮೂರುಸಾವಿರದಪ್ಪ ಸ[illegible] ಮು. ಹುಬ್ಬಳ್ಳಿ ಶ್ರೀ ಶಿವಯೋಗಿ ಬಂಥನಾಳ ಸ್ವಾಮಿಗಳವರು [illegible] ಶ್ರೀ

ನೇಮಪ್ಪ ಕಾಡಾದಿ ಸೋಲ್ಲಾಪುರ ಇವರು ಬಸವೇಶ್ವರನ ವಚನಗಳನ್ನು ಪ್ರಸಿದ್ಧಿಸುವದಕ್ಕೋಸ್ಕರ ಬಹಳ ಸಹಾಯ ಮಾಡಿದರು. ಕೈ. ವಾ. ಮಂಜಪ್ಪ ಹರ್ಡೇಕರ ಇವರು ವಚನಶಾಸ್ತ್ರಸಾರ ಭಾಗ ೨ ಈ ಗ್ರಂಥವು ಬಹಳ ಮಹತ್ವದ್ದೆಂದು ತಿಳಿದು ಅದರ ಅಚ್ಚಿಗೆ ಹತ್ತುವಷ್ಟು ಹಣವನ್ನು ವಿಜಾಪುರ ಜಿಲ್ಲೆಯಲ್ಲಿ ಸಂಚರಿಸಿ ಶೇಖರಿಸಿದರು. ಹೀಗೆ ಸಹಾಯ ಮಾಡಿದ ಈ ಮಹನೀಯರಿಗೆಲ್ಲ ನಾನು ಅತ್ಯಂತ ಋಣಿಯಾಗಿದ್ದೇನೆ. ಇವಲ್ಲದೆ ಮಧ್ಯ ದಲ್ಲಿ ಕೆಲವು ಚಿಕ್ಕ ದೇಣಿಗೆಗಳು ಬಂದಿವೆ. ಹೀಗೆ ಸಹಾಯ ಮಾಡಿದವರಿ ಗೆಲ್ಲ ನಾನು ಕೃತಜ್ಞನಾಗಿದ್ದೇನೆ. ಈ ವರದಿಯ ವಿಸ್ತಾರ ಭಯಕ್ಕಾಗಿ ನಾನು ಅವರೆಲ್ಲರ ಹೆಸರುಗಳನ್ನು ಇದರಲ್ಲಿ ಪ್ರಸಿದ್ಧಿಸಿಲ್ಲ.

## ಮುಂದಿನ ಕಾರ್ಯಗಳು

ಬಹು ಜನರು ವೀರಶೈವ ವಾಙ್ಮಯ ಕಾರ್ಯಗಳು ಬಹುಮಟ್ಟಿಗೆ ಈಗ ಆಗಿಹೋಗಿರುತ್ತವೆ, ತಾವು ಮಾಡತಕ್ಕ ಕಾರ್ಯಗಳು ಇನ್ನಾವೂ ಉಳಿದಿರುವದಿಲ್ಲ. ಎಂದು ಸಾರ್ವಜನಿಕ ಸಭೆಗಳಲ್ಲಿ ಹೇಳಿದ್ದನ್ನು ನಾನು ಕೇಳಿದ್ದೇನೆ. ಆದರೆ ಇದು ಅವರ ತಪ್ಪು ತಿಳಿವಳಿಕೆಯೆಂದು ಹೇಳುವದು ಅವಶ್ಯವಿರುತ್ತದೆ. ಆದ್ದರಿಂದ ಮುಂದೆ ಮಾಡತಕ್ಕ ಕಾರ್ಯಗಳ ಬಗ್ಗೆ ನಾನು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸುತ್ತೇನೆ.

(೧) ಷಟ್‌ಸ್ಥಲ ಶಾಸ್ತ್ರದಬಗ್ಗೆ ಈವರೆಗೆ ಆದ ಸಂಶೋಧನೆಗಳು ಅತ್ಯಲ್ಪವಾಗಿರುತ್ತವೆ. ಅದರಲ್ಲಿ ಅಂಗೋಪಾಂಗಗಳು ಅಸಂಖ್ಯವಾಗಿರುತ್ತವೆ. ಇವುಗಳ ವಿವೇಚನೆಯು ಇನ್ನೂ ಪೂರ್ಣವಾಗಿರುವದಿಲ್ಲ. ಇವುಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಸಂಶೋಧಿಸಿ ಪ್ರಸಿದ್ಧಿಸುವ ಅಗತ್ಯವಿರುತ್ತವೆ.

(೨) ಕರ್ನಾಟಕ ಮತ್ತು ಅದರ ಸುತ್ತಲಿನ ಪ್ರದೇಶಗಳಲ್ಲಿರುವ ಶಿಲಾಶಾಸನಗಳನ್ನು ವೀರಶೈವರು ತಾವೇ ಸಂಶೋಧಿಸಿ ಪ್ರಕಟಪಡಿಸುವದು ಬಹಳ ಅವಶ್ಯವಿರುತ್ತದೆ. ಇವುಗಳಲ್ಲಿ ಪುರಾತನ ಕಾಲದ ವೀರಶೈವೇತಿಹಾಸವು ಅಡಕವಾಗಿರುತ್ತದೆ.

(೩) ನಮ್ಮ ಪ್ರಾಂತದಲ್ಲಿ ಅನೇಕ ದೇಸಗತಿಯು ಮನೆತನಗಳೂ ರಾಜವಂಶಗಳೂ ಆಗಿಹೋಗಿವೆ. ಇವುಗಳ ಕಾಗದಪತ್ರಗಳನ್ನು ಸಂಶೋಧಿಸುಸದು ಅವಶ್ಯವಿದೆ.

(೪) ಬಸವೇಶ್ವರ ಮತ್ತು ದೇವರದಾಸಿಮಯ್ಯನ ವಚನಗಳಲ್ಲಿ ವಚನ ಗ್ರಂಥಗಳು ಇದಕ್ಕೂ ಮೊದಲು ಇದ್ದುದರ ಉಲ್ಲೇಖಗಳಿವೆ. ಇಂಥ ಗ್ರಂಥಗಳನ್ನು ಸಂಶೋಧನೆ ಮಾಡುವದು ಅವಶ್ಯವಿದೆ. ಮುಖ್ಯವಾಗಿ ಶ್ರೀಶೈಲ ಪ್ರಾಂತ, ಕೊಲ್ಲಿಪಾಕಿ, ಪೊಟ್ಟಲಕೆರೆ ಇವು ಪುರಾತನ ವೀರಶೈವ ಸ್ಥಳಗಳಾಗಿವೆ. ಈ ಭಾಗಗಳಲ್ಲಿ ಗ್ರಂಥ ಸಂಶೋಧನೆಗಳು ನಡಿಯಬೇಕು. ಅದರಂತೆಯೇ ಒಂದು ಕಾಲದಲ್ಲಿ ವೀರಶೈವ ಸಂಸ್ಕೃತಿ ಕೇಂದ್ರಗಳಾಗಿದ್ದ ಮೀದನೂರು ಭಾಗ, ಕೆಳದಿ, ಇಕ್ಕೇರಿ ಇವುಗಳಿದ್ದ ಪ್ರದೇಶಗಳು ತುಮಕೂರು, ಹಾಗಲವಾಡಿ ಭಾಗಗಳು ಹರದನಹಳ್ಳಿ, ಮೈಸೂರು ಈ ಪ್ರದೇಶಗಳಲ್ಲಿ ಸಂಶೋಧನೆಗಳು ಹೆಚ್ಚಾಗಿ ನಡೆಯಬೇಕು.

(೫) ಈಗ ಆಂಧ್ರ ದೇಶಗಳಾಗಿರುವ ವಿಜಯವಾಡ, ಅಮರಗುಂಡ ಈ ಭಾಗಗಳಲ್ಲಿ ಪುರಾತನ ವೀರಶೈವ ಸಂಸ್ಕೃತಿಯು ಇದ್ದಿತು. ಅಲ್ಲಿ ವಾಙ್ಮಯ ಸಂಶೋಧನೆ ಮಾಡುವದು ಅವಶ್ಯವು.

(೬) ಪುರಾತನ ಕಾಲದ ಶೈವಾಗಮ ಗ್ರಂಥಗಳನ್ನು ಸಂಶೋಧಿಸಿ ಅವುಗಳನ್ನು ಪ್ರಕಟಿಸುವದು ಅವಶ್ಯವು.

(೭) ವೀರಶೈವ ಮತಗಳ ಇತಿಹಾಸವನ್ನು ಸಂಶೋಧಿಸುವದು.

(೮) ಶಿವಾನುಭವ ಗ್ರಂಥಮಾಲೆಯಲ್ಲಿ ಅನೇಕ ಗ್ರಂಥಗಳು ಈಗ ಉಪಲಬ್ಧವಿರುವದಿಲ್ಲ. ಅವುಗಳನ್ನು ಪುನರ್ಮುದ್ರಣ ಮಾಡುವದು. ಅವುಗಳ ಭಾವವು ಜನರಿಗೆ ತಿಳಿಯುವದಿಲ್ಲಾದ್ದರಿಂದ ಇವುಗಳಿಗೆ ಅರ್ಥವನ್ನು ಬರೆಯಿಸುವದು ಅವಶ್ಯವು.

(೯) ನಾನು ಸಂಗ್ರಹಿಸಿದ ವಚನಕಾರರ ವಚನಗಳು ಪೂರ್ಣವಾಗಿ ದೊರೆತಿರುವದಿಲ್ಲ. ವಚನ ಸಂಗ್ರಹಗಳನ್ನು ದೊರಕಿಸಿ ಅವುಗಳ ಸಮಾಯ

ದಿಂದ ವಚನಕಾರರ ವಚನಗಳನ್ನು ಹೆಚ್ಚಿಗೆ ಶೋಧಿಸಿ ಅವುಗಳನ್ನು ಈಗ ಪ್ರಸಿದ್ಧವಾದ ವಚನಗಳಲ್ಲಿ ಸಮಾವೇಶ ಮಾಡಿ ಶಕ್ಯವಿದ್ದಷ್ಟು ಅವುಗಳನ್ನು ಪೂರ್ತಿ ಮಾಡುವವದು.

(೧೦) ವೀರಶೈವ ಸಂಸ್ಕೃತಿಯನ್ನು ಬೇರೆ ನಾಡಿನವರು ಅರಿಯುವದು ಅವಶ್ಯವಿರುವದರಿಂದ ಇಂಗ್ಲೀಷ ಭಾಷೆಯಲ್ಲಿ ಒಂದು ಪತ್ರಿಕೆಯನ್ನು ಹೊರ ಡಿಸುವದು. ಇಂಥ ಪತ್ರಿಕೆಗೆ ಅವಶ್ಯವಿರುವ ಲೇಖಗಳನ್ನು ಬರೆಯುವಷ್ಟು ಸಾಮುಗ್ರಿಗಳು ಈಗ ಉಪಲಬ್ಧವಾಗಹತ್ತಿವೆ.

ಹೀಗೆ ಅನೇಕ ಮಹತ್ವದ ಕಾರ್ಯಗಳು ವೀರಶೈವರ ಮುಂದೆ ಇನ್ನೂ ಇದ್ದು ಅವರು ಇವುಗಳನ್ನು ಕೈಕೊಳ್ಳುವದು ಅತ್ಯಾವಶ್ಯಕವಾಗಿರುತ್ತದೆ.

(ಶಿವಾನುಭವ ಮಾಸಿಕದ ೨೫ ವರ್ಷಗಳ ವರದಿಯಿಂದ)

# ವೀರಬಣಂಜುಗಳು

ವೀರಶೈವ ಮಹಾ ಸಭೆಯ ಉತ್ಪಾದಕರಲ್ಲಿ ಒಬ್ಬರಾದ ಶ್ರೀ. ಪಾ. ಕೋಗವಾಡ ಚನ್ನಪ್ಪಗೌಡರ ವಶದಲ್ಲಿ ಒಂದು ತಾಮ್ರ ಶಾಸನವಿದು ಅದರ ವಿವರಣೆಯು ಕೆಳಗೆ ಕೊಡಲ್ಪಟ್ಟಿರುತ್ತದೆ. ಸಂಪಾದಕ )

## ತಾಮ್ರ ಶಾಸನದ ವಿವರಣೆ

ಶ್ರೀಸ್ವಸ್ತಿ ಸಮಸ್ತಭುವನ ವಿಶ್ರುತ ಪಂಚ ಶತವೀರ ಶಾಸನ ಲಬ್ಧಾನೇಕ ಗಣ ಗುಣಾಲಂಕೃತ ಸತ್ಯರುಚಾರ ಚರಿತ್ರನಯ ವಿನಯ ವಿಜ್ಞಾನ ವಿರಾವತಾರ ವೀರ ಬಣಂಜು ಧರ್ಮ ಪ್ರತಿಪಾಳನ ವಿಶುದ್ಧ ಗುಡ್ಡಧ್ವಜ ವಿರಾಜಿತಾಸೂನ ಸಹಾಸ ಸತ್ಯ ಬಳವಿರ ಲಕ್ಷ್ಮೀ ಸಮಾಲಿಂಗಿತ ವಕ್ಷಸ್ಥಳ ಭುವನ ಭವನ ಪರಾಕ್ರಮೋನ್ನತರುಂ ವಾಸುದೇವ ಖಂಡಣರೊಳು ಭದ್ರವಂಶೋದ್ಭವರುಂ ಭಗವತಿ ದೇವಿ ಲಬ್ಧವರ ಪ್ರಸಾದರು ಶ್ರೀಮದಯ್ಯಾವಳೆಯಯ್ನೂರ್ವ ಸ್ವಾಮಿಗಳು ಮುಖ್ಯವಾಗಿ ಮಂಟುನಾಡ ಪದಿನರುವರು ಬೆಳುವಲ ಮುನ್ನೂರೊರವರು ನೂರುಂಬ ನವಸೆ ಪನ್ನಿಚ್ಛಾಸಿರ ಕೂಡಿಪೆರು ಸಾಸಿರ ಪಲಸಿಗೆ ಪನ್ನಿಚ್ಛಾಸಿರ ಕಿಸುಕಾಡೆಪ್ಪತ್ತು ಮಿಂತು ಶ್ರೀ ಮದ್ರಾಜಧಾನಿ ಬಣಂಜು ಪಟ್ಟಣಂ ನಿವಿಲ ಗುಂದವಲು ಯೆಸೆವ ಮಹಾನಾಡಾಗಿರ್ದು ಶ್ರೀಮಚ್ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲದೇವ XXX ವರ್ಷದೊಳೆಯ ರುಧಿರೋದ್ಗಾರಿ ಸಂವತ್ಸರದ ಮಾಘಸು ಆ ನಡುಗಳ ಮೇಗಣ ಭಯಭಕ್ತಿ ವಿನಯಕ್ಕಂ ಸಮಯ ಧರ್ಮದ ತೇಜಕ್ಕಂ ದ್ರವ್ಯಾಪೇಕ್ಷಿತನಲ್ಲದೆ ಮುನ್ನವರ XXXX ಮಿಂಡ ಗುದ್ದಲಿ ಮಲ್ಲಿಸೆಟ್ಟಿಗೆ ಮೆಚ್ಚಿ ಕಾರುಣ್ಯಂಗೈದು ಶಾಸನ ಮರ್ಯಾದೆ ಯಿಂತೆಂದೊಡೆ ಎತ್ತು ಕತ್ತೆ ಕೋಣ ಇಂತಿವಿತರ ಸ್ವರೂಪ ಐಯ್ವತ್ತು ರೊಳಾವನಾದೊಳಾದೊಡಂ ಪೊಕ್ಕು ಹೇರುಗೆ ವ್ಯವಹರಿಸಿ ಪೆಜ್ಜುಕ ವಡ್ಡರಾವುಗಳೆನ್ನದೆ ಪೊಕ್ಕಲು ಪರಸಮಯದ ಚಿರವಣ ಅರಸರ ಚಿರ ವಣಂ ಮೊದಲಾಗೆ ಸರ್ವಬಾಧಾ ಪರಿಹಾರವಾಗಿ ಕೊಟ್ಟರು. ಶನ್ನಿಂದ್ದ ತಾವಿನಲಿಕ್ಕಿದ ಪಸುಂಬೆಗೆ ಹಣ ಒಂದು ಹಿಡಿ ಅಡಕೆ ವಚ್ಚು ಗಾವಿಗೆ

ಸಿಂಗದ ಗಳೆಯಿಂತಿನಿತು ಆಚಂದ್ರಾರ್ಕ ತಾರಂಬರ ಸಲಿಸುವರು. ಗಂಗೆಗವ ವಾರಣಸಿ ಪ್ರಿಯಂಗೆ ಕುರುಕ್ಷೇತ್ರವೆಂಬ ದಿವ್ಯತೀರ್ಥಂಗಳೊಳು ಉಭಯ ಮುಖಿಗಳಪ್ಪ ಸಹಸ್ರ ಕಪಿಲೆಯ ಕೋಡುಮಂ ಕೊಳಗುಮಂ ಸುವರ್ಣದ ಕಟ್ಟಿಸಿ ಸಹಸ್ರವೇದಪಾರಗ ಬ್ರಾಹ್ಮಣರ್ಗ್ಗೆ ಕೊಟ್ಟ ಫಲ ಮಕು ॥ ಇವನಿಯರಿದ ದೊಳೆಯೆ ಪಾಳಿಸಿದವಂಗಿಪ್ಪಾರ್ಥ ಸಂಸಿದ್ಧಿ ಸಂಭವಿಕುಂ ಕೊಂಡಳಿದಂಗೆ ಗಂಗೆ ಗಯೆ ಕೇದಾರಂ ಕರುಕ್ಷೇತ್ರಮೆಂಬಿವರೊಳುದಿಸದೆ ಪಾರ್ವರಂ ಮುನಿಪರಂ ಗೋಬ್ರಿಂದವುಂ ಪಂಡಿತರಂ ತವೆಕೊಂದಿಕ್ಕಿದ ಪಾಪ ಮಯ್ದೆಗುಮುವಂ ಚಿಳುಗುನ್ನಿ ಗೋರಂಗಳೊಳು॥ ಅಯಿನೂರ್ವ ಸ್ವಾಮಿಗಳ ಸ್ಥಿರಂಜೀವಿಯಾತ್ ॥

## ಟಿಪ್ಪಣೆಗಳು

ಅನೇಕ ಶಿಲಾಶಾಸನಗಳೂ ತಾಮ್ರಶಾಸನಗಳೂ ಕರ್ನಾಟಕದಲ್ಲಿ ಯಾವ ಯಾವ ಸಮಾಜಗಳು ಪೂರ್ವಕಾಲದಲ್ಲಿ ಇದ್ದುವು; ಅವು ಯಾವ ಮತವನ್ನು ಅನುಸರಿಸುತ್ತಿದ್ದವು, ಮತ್ತು ಆಗಿನ ದೇಶಸ್ಥಿತಿಯನ್ನು ವಿವರಿಸುತ್ತಿವೆ. ಇವೆಲ್ಲ ವೃತ್ತಾಂತಗಳು ಈಗಿನ ಕಾಲಕ್ಕೆ ಬಹು ಬೋಧಪ್ರದವೂ ಮನೋರಂಜಕವೂ ಆಗಿರುತ್ತವೆ. ಹ್ಯಾಗೆ ಶಿಲಾಶಾಸನಗಳನ್ನು ರಾಜಕೀಯ ಇತಿಹಾಸವನ್ನು ಕಂಡುಹಿಡಿಯುವ ಉದ್ದೇಶದಿಂದ ಓದುವದು ಎಷ್ಟು ಮಹತ್ವವಾದದ್ದೋ ಅಷ್ಟೇ ಅವುಗಳನ್ನು ಆಗಿನ ಭಾಷೆಯು ಹ್ಯಾಗೆ ಇತ್ತು, ನಡತೆ ಆಚಾರ ವಿಚಾರಗಳು ಹ್ಯಾಗೆ ಇದ್ದವು, ಆಗಿನ ಪಟ್ಟಣಗಳು ಗ್ರಾಮಗಳು ಯಾವ ಯಾವವು ಪ್ರಸಿದ್ಧಿಗೆ ಬಂದಿದ್ದವು ಇವುಗಳನ್ನು ಕಂಡುಹಿಡಿಯುವದು ಮಹತ್ವದ್ದಿರುತ್ತದೆ. ಮೇಲ್ಕಂಡ ತಾಮ್ರ ಶಾಸನವನ್ನು ಈ ದೃಷ್ಟಿಯಿಂದ ವಿವೇಚಿಸಿದರೆ ಅನೇಕ ಮಹತ್ವದ ಸಂಗತಿಗಳು ತೋರಿಬರುತ್ತವೆ.

ಮೇಲ್ಕಂಡ ತಾಮ್ರ ಶಾಸನದಲ್ಲಿ ಚಾಲುಕ್ಯ ಚಕ್ರವರ್ತಿಯಾದ ಜಗದೇಕಮಲ್ಲನು ನವಿಲುಗುಂದದ ಮಿಂಡಗುದ್ದಲಿ ಮಲ್ಲಸೆಟ್ಟಿ ಎಂಬವನಿಗೆ ಕೆಲವು ಜೀನಸುಗಳ ಮೇಲಿನ ಸುಂಕವನ್ನು ದಾನವಾಗಿ ಕೊಟ್ಟಿದ್ದರ ಉಲ್ಲೇಖವಿರುತ್ತದೆ. ಶಾಸನದ ಆರಂಭದಲ್ಲಿ ಕಂಡುಬರುವ ಬಿರುದುಗಳಿಂದ ಈ ಮಲ್ಲಿ

ಶೆಟ್ಟಿಯು ವೀರಶೆಟ್ಟಿಯು ವೀರಬಣಂಜು ಧರ್ಮದವನಾಗಿದ್ದನೆಂದು ತಿಳಿದು ಬರುತ್ತದೆ. ಈತನು ತನ್ನ ಸುತ್ತಲಿನ ನಾಡುಗಳಲ್ಲಿ ಧರ್ಮಕೆಲಸ ಮಾಡಿದ್ದಕ್ಕಾಗಿಯೂ ತನ್ನ ಸಮಯವನ್ನು ಉಜ್ವಲಸ್ಥಿತಿಗೆ ದ್ರವ್ಯಾಪೇಕ್ಷತೆ ಇಲ್ಲದೆ ತಂದದ್ದಕ್ಕಾಗಿಯೂ ಈ ಶಾಸನವು ಒಬ್ಬ ಮಹಾರಾಜನಿಂದ ಕೊಡಲ್ಪಟ್ಟಿರುತ್ತದೆ. ಇದರಲ್ಲಿ ಕೆಲವು ವ್ಯಾಪಾರದ ಜೀನಸುಗಳ ಮೇಲಿರುವ ಸುಂಕವು ಈ ಮಲ್ಲಿಶೆಟ್ಟಿಗೆ ದಾನವಾಗಿ ಕೊಟ್ಟಿರುತ್ತದೆ. ಮತ್ತು ಕಡೆಗೆ ಈ ದಾನವನ್ನು ನಾಶಮಾಡುವವರು ಬ್ರಾಹ್ಮಣರನ್ನೂ ಮುನಿಪರನ್ನೂ ಗೋವೃಂದವನ್ನೂ ಪೆಂಡಿರನ್ನೂ ಕೊಂದಿಕ್ಕಿದ ಪಾಪಕ್ಕೆ ಗುರಿಯಾಗುವರೆಂದು ಹೇಳಲ್ಪಟ್ಟಿದೆ.

ವೀರಬಣಂಜುಗಳು ಪತ್ತನೇ ಶತಮಾನದಿಂದ ಹದಿಮೂರನೇ ಶತಮಾನದವರೆಗೆ ಕರ್ನಾಟಕದಲ್ಲಿ ಬಹು ಮಹತ್ವದ ಸಮಾಜವಾಗಿದ್ದಂತೆ ಅವರ ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಅವರ ಕೆಲವು ಶಾಸನಗಳು ಬಳ್ಳಿಗಾವಿಯಲ್ಲಿ ಉಪಲಬ್ಧವಿವೆ. ಈ ಶಾಸನಗಳಲ್ಲಿ ಪಟ್ಟಣಶೆಟ್ಟಿ ಮುಂಡುಗುದ್ದಲಿ ಶೆಟ್ಟಿ ಈ ಹೆಸರುಗಳು ತೋರಿಬರುತ್ತಿದ್ದು ಇವು ಅವರಲ್ಲಿಯ ಕೆಲವು ಸಾಮಾಜಿಕ ಅಧಿಕಾರ ಸ್ಥಾನಗಳಿರಬಹುದು. ನಾವು ಈ ಲೇಖದಲ್ಲಿ ಉದಹರಿಸಿದ ಶಾಸನದಿಂದ ಒಬ್ಬ ಪ್ರಸಿದ್ಧ ಚಾಲುಕ್ಯ ರಾಜನು ಈ ನವಿಲುಗುಂದದ ಶೆಟ್ಟಿಗೆ ದಾನಕೊಟ್ಟಿದ್ದು ಅದರ ಮೇಲಿಂದ ಈ ಬಣಂಜು ಧರ್ಮದ ಶೆಟ್ಟಿಗಳು ಆಗ ಎಷ್ಟು ಪ್ರಸಿದ್ಧರಾಗಿದ್ದರೆಂಬುದನ್ನು ಊಹಿಸಬಹುದಾಗಿದೆ.

ಬಳ್ಳಿಗಾವಿಯ ಶಿಲಾಶಾಸನಗಳಲ್ಲಿ ಈ ಬಣಂಜು ಧರ್ಮದವರ ಹೆಸರುಗಳಿದ್ದು ಅವು ಕೆಳಗೆ ಬರೆದ ಪ್ರಕಾರ ಇರುತ್ತವೆ. ಯಾವವೆಂದರೆ– ಮಲ್ಲಶೆಟ್ಟಿ, ಮೋಟಿಶೆಟ್ಟಿ, ಮಣಿಗಾರ ಮಹಾದೇವಿಶೆಟ್ಟಿ, ಮಣಿಗಾರ ಪದ್ಮಶೆಟ್ಟಿ, ಮಾಣಿಕಶೆಟ್ಟಿ, ಮರಿಶೆಟ್ಟಿ, ಸೋವಿಶೆಟ್ಟಿ, ಸೂಳಿಗೆ ಮಾಚಿಶೆಟ್ಟಿ ಈ ಬಗೆಯಾಗಿ ಇರುತ್ತವೆ.

ಮೇಲ್ಕಂಡ ಶಿಲಾಶಾಸನದಲ್ಲಿ ನವಲಗುಂದವು ಪೂರ್ವ ಕಾಲದಲ್ಲಿ ಬಹು ಪ್ರಸಿದ್ಧ ಸ್ಥಳವಾಗಿತ್ತೆಂದು ತೋರುತ್ತದೆ. ಇದು ಇಲ್ಲಿ "ಬಣಂಜುಪಟ್ಟಣ"

ಎಂದು ಕರೆಯಲ್ಪಟ್ಟಿದ್ದು ಇದರಿಂದ ಇಲ್ಲಿ ಅನೇಕ ಬಣಂಜುಗಳಿದ್ದು ಈ ಪಟ್ಟಣವು ಆಗ ವ್ಯಾಪಾರದ ಮುಖ್ಯ ಸ್ಥಳವಾಗಿರಬಹುದು. ಇದು ಬೆಳುವಲ, ಹುಲಿಗೆರೆ (ಲಕ್ಷ್ಮೇಶ್ವರ), ಬನವಾಸಿ, ಕೂಡಿಪೆರು (?) ಪಲಸಿಗೆ, ಕಿಸುಕಾಡು (ಇದು ಐಹೊಳೆ ಮತ್ತು ಪಟ್ಟದಕಲ್ಲು ಈ ಭಾಗವಾಗಿರುತ್ತದೆ.) ಇಪ್ಪು ಪ್ರದೇಶದ ರಾಜಧಾನಿಯಾಗಿತ್ತೆಂತಲೂ ಇಲ್ಲಿ ಹೇಳಿದೆ. ಇದರ ಮೇಲಿಂದ ಮೇಲ್ಕಂಡ ಪ್ರದೇಶಗಳಿಗೆ ಇದು ಮುಖ್ಯ ಸ್ಥಾನವಾಗಿದ್ದು ಬಹುಶಃ ಒಬ್ಬ ಮಹಾಮಂಡಲೇಶ್ವರನು ಇಲ್ಲಿ ಇದ್ದಿರಬಹುದಾಗಿ ತೋರುತ್ತದೆ.

ಈ ತಾಮ್ರ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಬಣಂಜುಗಳು ಯಾವ ಮತವನ್ನು ಅನುಸರಿಸುತ್ತಿದ್ದರೆಂಬುದನ್ನು ತಿಳಿಯಲಿಕ್ಕೆ ವಿಶೇಶ ಸಾಧನೆಗಳು ಇರುವದಿಲ್ಲ. ಆದರೆ ಅವರು ವೀರಶೈವರಿದ್ದಿಲ್ಲವೆಂಬುದು ಅವರ ಒಕ್ಕಣಿಕೆಯ ಮೇಲಿಂದ ಕಂಡುಬರುತ್ತದೆ. ಇದೇ ಒಕ್ಕಣಿಕೆಯು ಬಣಂಜು ಧರ್ಮದವರ ಬೇರೆ ಅನೇಕ ಶಿಲಾಶಾಸನಗಳಲ್ಲಿಯೂ ದೊರೆಯುತ್ತದೆ. ಇವೆಲ್ಲವುಗಳಲ್ಲಿ ಇವರು ೫೦೦ ವೀರಶಾಸನವುಳ್ಳವರೆಂತಲೂ, ವೀರಾವತಾರವೆಂತಲೂ, ಪ್ರಸಿದ್ಧವಾದ ಗಂಡ್ಡಧ್ವಜ ಉಳ್ಳವವರೆಂತಲೂ ಲಕ್ಷ್ಮೀಸಮಾಲಿಂಗಿತರೆಂತಲೂ, ಭದ್ರವಂಶೋದ್ಭವರೆಂತಲೂ, ಭಗವತೀ ದೇವಿಯಿಂದ ಪ್ರಸಾದವನ್ನು ಹೊಂದಿದವರೆಂತಲೂ ವರ್ಣಿಸಲ್ಪಟ್ಟಿದ್ದಾರೆ. ಮತ್ತು ಅಯ್ಯಾ ಹೊಳೆಯ ಪರಮೇಶ್ವರರೆಂತಲೂ ವರ್ಣಿಸಲ್ಪಟ್ಟಿದ್ದಾರೆ. ಇದರ ಮೇಲಿಂದ ಇವರಿಗೆ ಐಹೊಳೆ ಪಟ್ಟಣವೇ ಮೂಲ ಸ್ಥಾನವಾಗಿದ್ದು ಅವರು ಬಹಳ ವೀರರಾಗಿಯೂ, ಭಕ್ತಿಪರವಾಗಿಯೂ ಇದ್ದರೆಂದು ತೋರುತ್ತದೆ.

ಬಳ್ಳಿಗಾವಿಯ ಶಿಲಾಶಾಸನಗಳಿಂದ ಇವರ ಬಗ್ಗೆ ಕೆಲವು ವಿಶೇಷ ಸಂಗತಿಗಳು ತಿಳಿದುಬರುತ್ತವೆ. ಇವರು ಅದರಲ್ಲಿ "ನಾನಾದೇಶ ಭ್ರಮಾಂತಕರವರ್ಗ ಪುಟ್ಟಿಯುಂ" ಎಂತಲೂ "ಪಾದಮಾರ್ಗ ಜಲಮಾರ್ಗದೊಳ್" ಸಂಚರಿಸುವವರೆಂತಲೂ ಹೇಳಲ್ಪಟ್ಟಿರುತ್ತಾರೆ. ಮತ್ತು ಇವರು ರತ್ನ ಸುಗಂಧದ್ರವ್ಯ ಮತ್ತು ಮಸಾಲೆಯ ಜೀನಸುಗಳ ವ್ಯಾಪಾರ ಮಾಡುತ್ತಿದ್ದುದಾಗಿಯೂ ತಮ್ಮ ಗಳಿಸಿದ ಹಣವನ್ನು ಪಂಡಿತರಿಗೂ ಮುನಿಗಳಿಗೂ ವೆಚ್ಚ ಮಾಡುವ

ನಾಗಿಯೂ ಹೇಳಲ್ಪಟ್ಟಿರುವನು. ಮತ್ತು ಅವರ ದೇಣಿಗೆಗಳು ಅಲ್ಲಿಯ ಕಾಳಾಮುಖರ ಮಠಗಳಿಗೆ ಅನೇಕವಾಗಿ ಸಲ್ಲಿರುತ್ತವೆ.

ಇವೆಲ್ಲ ಸಂಗತಿಗಳಮೇಲಿಂದ ಇವರು ಕಾಳಾಮುಖ ಮತವನ್ನು ಪಾಲಿಸುತ್ತ ಶಿವಧರ್ಮನಿರತರಾಗಿ ಇದ್ದಂತೆ ತೋರುತ್ತದೆ. ಮತ್ತು ಜಲಮಾರ್ಗದಿಂದ ಪರದೇಶ ಪರ್ಯಟಣ ಮಾಡಿ ವಿಶೇಷ ಲಾಭವನ್ನು ಹೊಂದಿ ದೇಶದಲ್ಲಿ ಪ್ರಸಿದ್ಧರಾಗಿದ್ದರು.

ಈ ಶತಮಾನಗಳ ಕಾಲಕ್ಕೆ ವೀರಶೈವ ಧರ್ಮವು ಪ್ರಸಾರ ಹೊಂದಿದಂತೆ ಕಾಳಾಮುಖ ಧರ್ಮವು ಕರ್ನಾಟಕದಲ್ಲಿ ಲಯ ಹೊಂದಿ ಈ ಮತಕ್ಕೆ ಸಂಬಂಧಪಟ್ಟವರೆಲ್ಲರೂ ವೀರಶೈವ ಸಮಾಜದಲ್ಲಿ ಸೇರಿಕೊಂಡಂತೆ ಈ ವೀರ ಬಣಂಜುಗಳೂ ವೀರಶೈವ ಸಮಾಜವನ್ನು ಸೇರಿರಬಹುದು.

(ಶಿವಾನುಭವ ಸಂಪುಟ ೫ ಸಂಚಿಕೆ ೭ರಿಂದ)

# ಶ್ರೀ ಬಸವಣ್ಣನವರ ಬಗ್ಗೆ ಹೊಸದಾಗಿ ಸಿಕ್ಕ ಶಿಲಾಲೇಖವು

(ಟೀಪು :- ಈ ಶಿಲಾಶಾಸನವನ್ನು ಮೊದಲು ಶೋಧಿಸಿದವರು ಧಾರವಾಡ ಇತಿಹಾಸ ಮಂಡಲದ ಪರವಾಗಿ ಪ್ರಯತ್ನಿಸುತ್ತಲಿರುವ ಮಿ. ರಾಜಪುರೋಹಿತರವರು. ಇವರು ಹುಕ್ಕೇರಿ ಭಾಗದಲ್ಲಿ ಪ್ರವಾಸ ಮಾಡುತ್ತಿರುವಾಗ ಇದರ ಅಚ್ಚನ್ನು ತೆಗೆದುಕೊಂಡಿದ್ದರು. ಆಮೇಲೆ ಇವರು ವಿಜಾಪುರಕ್ಕೆ ಬಂದಾಗ್ಗೆ ಅದನ್ನು ನನ್ನ ಕಡೆಗೆ ಕೊಡಲಾಗಿ, ಅವನ್ನು ಓದುವ ಕುರಿತು ನಾನು ರಾ। ರಾ। ಹಲಸಂಗಿ ಚನ್ನಮಲ್ಲಪ್ಪನವರ ಕಡೆಗೆ ಕಳಿಸಿದೆನು. ಅಚ್ಚು ಚೆನ್ನಾಗಿರದಿದ್ದರೂ, ಅವರು ಬಹಳ ಶ್ರಮಪಟ್ಟು ಶಿಲಾ ಲೇಖದ ಬಹು ಭಾಗವನ್ನು ಓದಿದರು. ಆದರೆ ಅಚ್ಚಿನಲ್ಲಿರುವ ಕೆಲವು ಮಹತ್ವದ ಭಾಗಗಳು ಚೆನ್ನಾಗಿ ಮೂಡದೆ ಇದ್ದುದರಿಂದ ಮೂಲ ಶಿಲಾಲೇಖವನು ಪರೀಕ್ಷಿಸುವ ಕುರಿತು ಅವರೂ ರಾಜಾರಾಮ ಕಾಲೇಜದ ಸಂಸ್ಕೃತ ಪ್ರೊಫೆಸರರಾದ ಮಿ. ನಂದೀಮಠ ಇವರೂ ಅರ್ಜುನವಾಡಕ್ಕೆ ಹೋಗಿ ಶಿಲಾಲೇಖದ ಹೊಸ ಅಚ್ಚುಗಳನ್ನು ತೆಗೆದುಕೊಂಡು ಬಂದರು. ಈ ಎಲ್ಲ ಅಚ್ಚುಗಳ ಸಹಾಯದಿಂದ ಮೇಲ್ಕಂಡ ಉಭಯ ಮಹನೀಯರು ಈ ಶಿಲಾಲೇಖದ ಬರಹವನ್ನು ಕಂಡುಹಿಡಿದು ಅದರ ಪ್ರತಿಯನ್ನು ನನ್ನ ಕಡೆಗೆ ಕಳಿಸಿಕೊಟ್ಟಿರುವರು. ಇದೇ ಇಲ್ಲಿ ಪ್ರಸಿದ್ಧಿಸಲ್ಪಟ್ಟಿದೆ.... ಸಂಪಾದಕ)

## ಮೂಲ ಶಿಲಾಲೇಖವು

೧. ನಮಸ್ತುಂಗ ಸಿರ(=ಶಿರ)ಶ್ಚುಂಬಿ ಚಂದ್ರ ಚಾಮರ ಚಾರ

೨. ವೇ ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂ-

೩. ಭವೇ॥ ಶ್ರೀಯಂ ಶ್ರೀ ಕಲ್ಲಿನಾಥಂ ಕುಡು-

೪. ಗೆ ಭವಪುರಂ ಭಕ್ತ ಬ್ರಿಂದಕೆ (=ವೃಂದಕ್ಕೆ) ಗೌರೀಜಾಯಾ ಕಾಯಾ-

೫. ನುಷಂಗಾಕಳಿತ ಲಳಿತತಾ ಪ್ರೋಲ್ಲಸದ್ವಾಮಭಾಗಂ ಸ್ವೀಯ ಸ್ವಾ-

೬. ಯತ್ತ ಶಕ್ತಿತ್ರಯ ಮಯಮಹಿಮಂ ದೇವ ದಾಯಾದ ಮಾ-

೭. ಯಾ ಪಾಯಾಭಿಪ್ರಾಯಂಲೀಲಂ ಪ್ರಣತ ಜನ ದುರಂತಾಪ ಸಂಘಟ ಶೀಲಂ॥

೮. (ಶ್ರೀ)ಮತ್ತರಡವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಸ್ವರ (=ಶ್ವರ) ಮಾದಿರಾಜನ ತನೂ-

೯. ಜಂ ಬಸವರಾಜ ಮಹಿಮೋದಯಂತೆಂದಡೆ॥ ಮುಂನಿನ ಕೀರ್ತಿ ಪುರಾತನ ಜಂಗಮ-ಲಿಂ-

೧೦. ಗೈಕಭಕ್ತಿ ನಿರ್ಭರಲೀಲಾ ಸಂಗಂ ಸಂಗನಬಸವಂ ಸಂಗತಿಯಿಂ ಮಾಳ್ಕೆ ಭಕ್ತಿಯೊಳ-

೧೧. ಗನವರತಂ॥ ಯಾದವ ಭೂಮಿಪಾಳರಿಳಿಯಂ ಚತುರದ್ಧಿ (=ಚತುರಬ್ಧಿ)ಪರೀ-

೧೨. ತೆಯಂ ನಿಸರ್ಗೋದಯದಿಂದಾಳ್ವ ರನ್ನಪರೊಳಸ್ವ (=ಶ್ವ) ಚಮೂ ಜಯವಾರ್ದ್ಧಿ ಸಿಂಹಣ-

೧೩. ಕ್ಷ್ಮಾದಯಿತಂ ತದಗ್ರ ತನಯಂ ಪ್ರಭುವಂ ನ್ರಿಪ(=ನೃಪ) ಕಂನರಂ ಸಮುಸೊರ್ಗೋದಧಿ

೧೪. ವೇಳೆಯಿಂ ಪೊರಗೆ ಪೆಳ್ದ್ರಿಪೊಳ್ಕಿಳಿಲಂ ನಿಮಿಚ್ಚಿದಂ॥ ಸಲೆ ಭೂದೇವ-

೧೫. ರ್ಕ್ಕಳಿಗ್ಗತ್ತಲಸದೆ ಗೋ-ಭೂಮಿ-ಹೇಮ-ವಸ್ತ್ರಾದಿಗಳಂ ಮಾಳ್ಪರಸಂ ಗಳಿಪೊ-

೧೬. ಳ್ಕೊಂಬಂ ಬಲಮಂತಂ ಕಂನರಂ ಪ್ರತಾಪಸಹಾಯಂ॥ ಸ್ವಸ್ತಿ ಸಮಸ್ತ-

೧೭. ಭುವನಾಶ್ರಯ ಶ್ರೀ ಪ್ರಿಥ್ವೀ (ಪೃಥ್ವೀ) ವಲ್ಲಭ ಮಹಾರಾಜಾಧಿ ರಾಜ ಪರಮೇ-

೧೮. ಶ್ವರ ಪರಮಭಟ್ಟಾರಕ ದ್ವಾರಾವತೀ ಪುರವರಾಧೀಶ್ವರ ಯಾ-

೧೯. ದವ ಕುಳ ಕಮಲ-ಕಳಿಕಾ-ವಿಕಾಸ-ಭಾಸ್ಕರ ಯರಿರಾಯ (=ಅರಿರಾಯ)

೨೦. ಜಗಜ್ಝಂಪ ಮಾಳವರಾಯ-ಮದನ-ತ್ರಿನೇತ್ರ ಗೂರ್ಜ್ಜರರಾಯ-ಭಯಂಕರ-

೨೧. ತೆಲುಂಗರಾಯ-ಸ್ಥಾಪನಾಚಾರ್ಯ್ಯ ಇತ್ಯಾದಿ ನಾಮಾವಳೀ ಸಮಳಂಕ್ರಿತ (=ಕೃತ)

೨೨. ಶ್ರೀಮತ್ಪ್ರೌಢ ಪ್ರತಾಪ ಚಕ್ರವರ್ತ್ತಿ ಶ್ರೀ ಕಂನರ ದೇವಂ ದೇವಗಿ-

೨೩. ರಿಯ ನೆಲೆವೀಡಿನೊಳು ಸುಖಸಂಕಥಾ ವಿನೋದದಿನನವರತಂ ರಾ-

೨೪. ಜ್ಯಂ ಗೆಯುತ್ತುಮಿರೆ ತತ್ಪಾದ ಪದ್ಮೋಪಜೀವಿ॥ ಚಿಕ್ಕನ ಚಿಕ್ಕಮಗಂ ವಿಭವಕ್ಕೆ-

೨೫. ಕುಬೇರಂಗೆ ಸೆಣಸುವಂ ರಾಯರುಮಂ ಮಿಕ್ಕಂ ಬೀಜುಗಿಯಾ-

೨೬. ದಾರ್ಯ್ಯಕ್ಕಾಗಿಂ ಪಿರಿಯನಾತನಂಣಂ ಮಲ್ಲಂ॥ ಆತನ ತನೂಭವಂ॥

೨೭. ಚಾವುಂಡಂ ಪಾರ್ವತೀ ವಲ್ಲಭ ಚರಣ ಸರೋಜದ್ವಯಾಮೋದ ಬ್ರಿಂಗಂ (=ಭೃಂಗಂ) ಚಾವುಂ-

೨೮. ಡಂ ತ್ಯಾಗ-ಭೋಗಾನುಭವ ಭವಸುಖಶ್ರೀ-ವಧೂನ್ರಿತ್ಯ(=ನೃತ್ಯ)-ರಂಗಂ ಚಾವುಂಡಂ ಸಾಮ-

೨೯. ಭೇದ ಪ್ರಭ್ರುತಿ (ಪ್ರಭೃತಿ) ಸಕಳ ಮಂತ್ರಾಂಗ ವಿದ್ಯಾಸಮುದ್ರಂ ಚಾವುಂಡಂ ವೀರ-ವೈರಿ-ಪ್ರ-

೩೦. ಕರ ಸಮರ ಸಂಘಟ್ಟ ಕಾಳಾಗ್ನಿ ರುದ್ರಂ॥ ಯೆನೆ (=ಎನೆ) ನೆಗಳ್ದ ಚಾವುಂಡನ ಮನದನ್ನಂ-

೩೧. ನಾಗರಾಜನಕ್ಷಿಳ (=ನಖಿಳ) ನಿಯೋಗಜ್ಞ (=ನಿಯೋಗಜ್ಞ)ನೆನಿಪ್ಪ ದಿವಾಕರ ದೇವನ ಪುತ್ರಂ ವಾಣಸಾನ್ವ-

೩೨. ಯಾಂಬರಮಿತ್ರಂ॥ ತ್ಯಾಗಗುಣಕ್ಕೆ ತಾಯ್ವನೆ ಸಮಸ್ತ ನ್ರಿಪಾಳ (=ನೃಪಾಳ) ನಿಯೋಗ ವ-

೩೩. ರ್ತ್ತನಾ ಶ್ರೀಗೆ ನಿವಾಸಮಿಷ್ಟರ ವಿಶಿಷ್ಟರ ತೋಷಣ ಪೋಷಣಂಗಳೊಳ್ಳಾಗ-

೩೪. ರಮೆಂದು ಬಂಣ್ಣಿಸುವುದೀ ಧರೆ ಪಂಡಿತಪಾರಿಜಾತನಂ ನಾಗನನಾ ಜನಾರ್ದನನ ಭ–
೩೫. ಕ್ತಿ ಭರ ಪ್ರಭವಾನುರಾಗನಂ॥ ಸಂಗನಬಸವ ಅಘ್ರ... ಗ್ಯಕc–
೩೬. ದೇವರಾಜ ಮುನಿಪನ ತನಯುಂ ಜಂಗಮ ಪರುಸಂ....ರ–
೩೭. ಸಂಗಂ ಪ್ರಿಯ ಸುತನೆನಿಪ್ಪ ಕಲಿದೇವರಸಂ॥ ಕಲಿದೇವಮುಂನಿ–
೩೮. ಪನಾತ್ಮಜ ಸಲೆ ಮೂಜಗದೊಳಗೆ ಮರೆ*ವ ಮಾನವ ದೇವಂ ಗೆಲಿದಂ ಅಸನ (=ಅಶನ)–
೩೯. ಬೆಸನವ (೦) ಛಲರಧಿಕಂ ಹಾಲಬಸವಿದೇವ ಮುನೀಸಂ (=ಮುನೀಶಂ)ಸ್ವಸ್ತಿಸಮಸ್ತ–
೪೦. ಭುವನಾಸ್ರಯಂ (=ಶ್ರಯಂ) ಮಹಾಮಹೇಸ್ವರಂ (ಶ್ವರಂ) ಕವಿಳಾಸಪುರವ–
೪೧. ರಾಧೀಸ್ವರರುಂ (=ಶ್ವರರುಂ) ಸುವಂಣ್ರ್ನ ವ್ರಿಷಭ (=ವೃಷಭ) ಧ್ವಜಂ ತೇಸಠ್ಠಿ ಪುರಾಥ ಪಾಪಾಚ್ಯ್ರಕ–
೪೨. ರುಂ ಮಹಾಲಿಂಗ–ಜಂಗಮ–ಪ್ರಸಾದನಿಯತರುಂ ಸಮ–
೪೩. ಯಭಕ್ತಿ ಸಂಪನ್ನ ಶ್ರೀ ಬಸವರಾಜನಂನ್ವಯರುಮಪ್ಪ ತಪಚಕ್ರ–
೪೪. (ವ) ರ್ತ್ತಿ ವೀರಪ್ರಿತಿ (=ಬ್ರತಿ, ವ್ರತಿ) ಹಾಲಬಸವಿದೇವಂಗೆ ಆ ಮಹಾಪ್ರಧಾನಂ ರ*–
೪೫. ಟ್ಟ ರಾಜ್ಯ ಪ್ರತಿಷ್ಠಾಚಾಯ್ಯ್ರನುಮಪ್ಪ ನಾಗರಸರು ಸಕ(=ಶಕ) ವರುಷಂ ಸಾಸಿರ–
೪೬. ದ ನೂರ*ಯೆಂಭತ್ತ ಯೊಂದನೆಯ ಸಿದ್ಧಾರ್ಥಿ ಸಂವಛರದ ಜ್ಯೆ–
೪೭. ಷ್ಠ ಬಹುಳ ಅಮಾಸೆ ಸೋಮವಾರ ಸೂರ್ಯಗ್ರಹಣದಲ್ಲ ಫ್ರಲಿಗಿ–
೪೮. ರಿ*ಯು ಸೋಮನಾಥದೇವರ ಸಂನಿಧಿಯಲ್ಲಿ ಆ ಚೌಡಿಸೆಟ್ಟಿಯರ್
೪೯. ತೀರ್ತ್ಥ ವಿಸೇಸಮುಂ (=ವಿಶೇಷಮುಂ) ಬೆಸಗೊಳಲು ನಾಲೆನಾಡೊ ಳಗಿನ ಕವಿಳಾಸತೀ (ರ್ತ್ಥಂ)

* ಹೀಗೆ ನಕ್ಷತ್ರ ಚಿಹ್ನವಿರುವ ರ ಕಾರವು ಶಕಟರೇಫವೆಂದು ತಿಳಿಯಬೇಕು.

೫೦. ನಾಲ್ಕುಯುಗದ ಪುರಾಣೋಕ್ತದಿಂ ಬಂದ ಕ್ಷತ್ರ (=ಕ್ಷೇತ್ರ) ವದೆಂತೆಂದಡೆ ಕ್ರಿತ-

೫೧. ದಲ್ಲಿ ಕವಿಳಾಸ ಮುನಿ ಕವಿಳಾಸನಾಥ (;) ತ್ರತೆಯಲಿ ಅಂಕ ರಾಜ ಮುನಿ ಅಂಕ

೫೨. ನಾಥ (;) ದ್ವಾಪರದಲ್ಲಿ ಮಹಾರಾಜ ಮುನಿ ಮಹಾಲಿಂಗದೇವ (;) ಕಲಿಯುಗದಲ್ಲಿ

೫೩. ಕಲಿರಾಜಮುನಿ ಕಲಿದೇವನಾಮ (॥) ಇ (=ಈ) ಮುನಿಗಳು ಮುಕ್ಷ (=ಮುಖ್ಯ) ಸಮಸ್ತ ಗಣೇಸ್ವ-

೫೪. (ರ) ರು (=ಗಣೇಶ್ವರರು) ಆರಾಧಿಸಿ ಸಾಲೋಕ್ಯ ಸಾಮಿಪ್ಯ ಸಾಯಜ್ಜವಂ (=ಸಾಯುಜ್ಯವಂ) ಪಡ-

೫೫. ದರು ಆ ದೇವರಿಗೆ ಅಂಕನಾಥವೆಸರಿಂ ಅಂಕವೆಲ (=ಪೊಲ) ತಳ ವಿತ್ರಿ (=ವೃತ್ತಿ)ಕೊ-

೫೬. ತ್ತುಸಿಕುರು*ವಸಿಗೆ (=?) ಇ (≈ಈ) ಹಳ್ಳಿ ಮಂಧಾತ ಚಕ್ರವರ್ತಿ ಬಿಟ್ಟ ಧಂಮ್ರ (॥) ಅ-

೫೭. ತೀರ್ಥಕ್ಕದು ಸಾಸನಸ್ಥವೆಂಬುದಂ ಚವಡಿಸೆಟ್ಟಿಯುರು ಕೇಳಿ ಪು (ನಾ) ನಾಗ-

೫೮. ರಸರೂ ತಾವು ಏಕಸ್ಥವಾಗಿ ಕವಿಳಾಸ ಪುರದೊಳಗೆ ಸ್ವಯಂಭು (=ಭೂ)ಮ-

೫೯. ಲ್ಲಿಕಾರ್ಜುನ ಸಂಗಮೇಸ್ವರ (=ಶ್ವರ) ನಾಗೇಸ್ವರ (=ಶ್ವರ) ಯಿೂ (ಈ) ಮೂರು ಲಿಂಗಕಂ ಅಂಗ-

೬೦. ಭೋಗ ರಂಗಭೋಗ ಜೀರ್ಣೋದ್ಧಾರಕಂ ಪಾರಣೆಯು ಜಂಗಮಾ-

೬೧. ರಾಧನೆಗಂ ಕೊತ್ತುಸಿಕುರು*ವಸಿಗೆ ತಳವ್ರಿತ್ತಿ (=ವೃತ್ತಿ) ಅಂಕವಲ ಕೂಂ ..

೬೨. ನಾಡೊಳು ಸಲುವಂತೆ ಹೆಜ್ಜುಗ್ಗಿ... ಪೊಂಬತ್ತು...ಸಂಕ ನೂರೆ*ತಿನ ಪರಿಹಾರ ಯಿಂತಿನಿತುಮಂ ಸರ್ವ್ವಬಾಧೆ (ಪರಿಹಾರಾರ್ಥಂ)

೬೩. ಸರ್ವ್ವನಮಸ್ಯವಂ ಮಾಡಿ ಚವುಡಿಸೆಟ್ಟಿಯರು ನಾಗರಸರು
೬೪. ಯತಿರಾಯ ಹಾಲಬಸವಿದೇವಂಗೆ ಪೂರ್ವ್ವದತ್ತವೆಂದು
೬೫. ಧಾರಾಪೂರ್ವ್ವಕಂ ಮಾಡಿಕೊಟ್ಟರು. (॥) ಆ ಚವುಡಿ ಸೆಟ್ಟಿಯರ ನಿ–
೬೬. ಯಾಮದಿಂ ನಾಗರಸರು ಪುರದಿಂ ಪಡುವಲು ತೊರೆ*ಯು ಕೂ–
೬೭. ಡಿದಹಳ್ಳ ನೀರುವರಿಯಿ ಮೋರೆಯಾಗೆ ಪೋಗೆ ಕಲಗಡಿಗ ಗೆರೆ*–
೬೮. ....ಸವ ಗೋಡಿ ಬಡಗಲು ಪೊಸರಗುತ್ತಿ ಊರಾರ (=?) ವಿಡಿದು ಮೂಡಲು
೬೯. ....ಗಲ್ಲಕಣೆ... ಗೋಡಿಯು ಬಂದ ಹಳ್ಳ ನೀರುವರಿಯು (=ಯಿಂ) ತೆಂಕ–
೭೦. ಲು ತೊರೆ*ಯು ಕೂಡಲು ಯಿೂ (=ಈ) ಚತುಸ್ಸೀಮಾಭ್ಯಂತರ ಕವಿಳಾಸಪು–
೭೧. ರದಲ್ಲಿ ಸುಂಕ ... ....... ....... . ....... .. ....................ನಿ–
೭೨. ಧಿ ನಿಕ್ಷೇಪ ಅಂಕೆ ಟಂಕೆ... ಗೋಸನೆ ಮುದ್ರೆ ನಾಗೇಸ್ವರ (ಶ್ವರ) ಮುಮಲ್ಲೇಸ್ವರ (ಮಲ್ಲೇಶ್ವರ)–
೭೩. ಕೆ ಕುರು*ವನಿಗೆ (।) ಸಂಗಮೇಶ್ವರಕೆ ಪಾರಣೆಯು ಜಂಗಮಾರಾಧ–
೭೪. ನೆಗೆ ಕೊತ್ತಸಿಗೆ (=?) ಇ (=ಈ) ಧಂಮ್ಮ್ಕಕೆಯಿದು ಪಿವರ ವೆಂದು ನಾಗರಸರು ಕೊಟ (=ಕೊಟ್ಟ)
೭೫. ಸಾಸನ (=ಶಾಸನ) ನಾಲ್ಕು.... ಪಟ್ಟಣಗಳು ನೂಲೆನಾಡೊಳಗೆ ಸಂತೆಗಳ
೭೬. ಆಯದಾಯ ಇ (=ಈ) ಪರಿ ಮೊಬದೆರೆ * ಸುಂಕ ಹದಿನೆಂ
೭೭. ಟ್ಟ ಸಮಯಮೆಲ್ಲರು * ಮತ ಮೂವರು ಬಣಜು ಛಕುತಿ ಭೇದಪಿ
೭೮. (=?) ಕವಿಳಾಸಪುರವೆ ಸಾಸನ (=ಶಾಸನ) ದವನೆ ಬಸವರಾ ಜನೆ ಸಾಸನಿಕ (=ಶಾಸನಿಕ) ನೆಂ–

೨೯. ದುಮುಘಯು ನಾನಾದೇಸಿ ಮುಮುರಿ ದಂಡಂಗಳು ಕಾವ ಸಾಸನ (=ಶಾಸನಂ) (II)

(ಒಪ್ಪ—ಮೂಲ ಶಿಲಾಲಿಪಿಯನ್ನು ನಾನು ಆಸ್ಸಾರಿ ಕಂಡು ಪರೀಕ್ಷಿಸಿರುವಲ್ಲಿ ಲೇಖನ ಪದ್ಧತಿಯು ಶಾಸನೋಕ್ತ ಕಾಲಕ್ಕೆ ತುಂಬಾ ಸರಿಹೋಗುತ್ತದೆ. ಆದ್ದರಿಂದ ಇದು ಖೊಟ್ಟಿ ಲೇಖನವಲ್ಲ.—ಚೆನ್ನಮಲ್ಲ)

## ಮೂಲಶಿಲಾಶಾಸನದ ಸ್ಥೂಲಭಾಷಾಂತರ

ಕಿರಣಸಮೂಹದಿಂದ ರಾಜಿಸುವ ಚಂದ್ರನಿಂದ ಒಪ್ಪುವ ಮಸ್ತಕವುಳ್ಳವನೂ ಮೂಲೋಕವೆಂಬ ನಗರಾರಂಭಕ್ಕೆ ಮೂಲಸ್ತಂಭನಂತೆಯೂ ಇರುವ ಶಂಭುವಿಗೆ ನಮಸ್ಕಾರವು.

ಪಾರ್ವತಿಗೆ ಅರ್ಧಮೈಯನ್ನಿತ್ತು ಪ್ರಕಾಶಿಸುವವನೂ ಶಕ್ತಿತ್ರಯಗಳನ್ನು ತನ್ನಲ್ಲುಂಟುಮಾಡಿಕೊಂಡು ಮಹಾಮಹಿಮೆಯಿಂದಿರುವವನೂ ಶರಣಾಗತಜನರ ದುಃಖವನ್ನು ದೂರಮಾಡುವ ಶೀಲವುಳ್ಳವನೂ ಆದ ಕಲ್ಲಿನಾಥನು ಭಕ್ತಸಮುದಾಯಕ್ಕೆ ಐಶ್ವರ್ಯವನ್ನು ಕೊಡಲಿ.

ತರ್ದ್ದವಾಡಿಯ ಮಧ್ಯಗ್ರಾಮವಾದ ಬಾಗವಾಡಿ ಎಂಬ ಶ್ರೇಷ್ಠಗ್ರಾಮದ ಒಡೆಯನಾದ ಮಾದಿರಾಜನ ಮಗನಾದ ಬಸವರಾಜನ ಮಹಿಮೆಯು ಎಂಥದೆಂದರೆ :—

ಮಂಗಳವಾದ ಕೀರ್ತಿಯುಳ್ಳವನಾದಂಥ ಪುರಾತನಜಂಗಮ ಮತ್ತು ಲಿಂಗ ಇವುಗಳಲ್ಲಿ ನಿರ್ಭರವಾದ ಏಕಭಕ್ತಿಯಿಂದ ಕೂಡಿದಂಥ ಸಂಗನಬಸವನು ನಮ್ಮಲ್ಲಿ ಯಾವಾಗಲೂ ಭಕ್ತಿಯಸಂಬಂಧವನ್ನುಂಟುಮಾಡಲಿ.

ಯಾದವರಾಜರು ಶ್ರೇಷ್ಠವಂಶದಲ್ಲಿ ಹುಟ್ಟಿದವರಾಗಿ ನಾಲ್ಕು ಸಮುದ್ರಗಳಿಂದ ಬಳಸಲ್ಪಟ್ಟಂಥ ಭೂಮಿಯನ್ನು ಆಳುತ್ತಲಿರುವರು. ಹೀಗಿರಲು ಅವರಲ್ಲಿ ಅಶ್ವಸೈನ್ಯದ ಒಡೆಯನಾದ ದಯಾಳುವಾದ ಸಿಂಘಣನೆಂಬ ಅರ

ಸನು ಆಳಿದನು. ಆಮೇಲೆ ಅವನ ಹಿರಿಯ ಮಗನೂ ಬಲಶಾಲಿಯೂ ಆದ ಕನ್ನರರಾಜನು ಎಲ್ಲ ಸಮುದ್ರಗಳಿಂದ ಸುತ್ತಲ್ಪಟ್ಟ ಭೂಮಿಗೆ ತನ್ನ ಶ್ರೇಷ್ಠವಾದ ಛತ್ರದಿಂದ ಆಶ್ರಯವನ್ನು ಮಾಡಿಕೊಟ್ಟನು.

ಶೌರ್ಯವೇ ಸಹಾಯವಾಗಿರುವಂಥ ಕನ್ನರನು ಬ್ರಾಹ್ಮಣರಿಗೆ ಗೋ ಭೂಮಿ, ದ್ರವ್ಯವಸ್ತ್ರಾದಿಗಳನ್ನು ಆಲಸ್ಯಪಡದೆ ಕೊಟ್ಟು ಅವುಗಳನ್ನು ಅವನು ತನ್ನ ಬಾಹುಬಲದಿಂದ ತನ್ನನ್ನು ಇದಿರಿಸುವರಾಜರಿಂದ ಮರಳಿ ತಿರುಗಿತೆಗೆದು ಕೊಳ್ಳುವನು.

ಸ್ವಸ್ತಿಸಮಸ್ತ ಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿ ರಾಜ ಪರಮೇಶ್ವರ ಪರಮಭಟ್ಟಾರಕ ದ್ವಾರಾವತೀಪುರವರಾಧೀಶ್ವರಯಾ ದವ ಕುಳಕಮಳ ಕಳಿಕಾವಿಕಾಸ ಭಾಸ್ಕರಯರಿರಾಯ ಜಗಜ್ಝಂಪ, ಮಾಳವ ರಾಯಮರ್ದನ, ತ್ರಿನೇತ್ರ, ಗೂರ್ಜರ ರಾಯಭಯಂಕರ, ತೆಲಗುರಾಯ ಸ್ಥಾಪನಾಚಾರ್ಯ ಎಂಬಿವೇ ಮೊದಲಾದ ಬಿರುದುಗಳಿಂದ ಅಲಂಕೃತರಾದಂಥ ಶ್ರೀಮತ್ ಪ್ರೌಢ ಪ್ರತಾಪಚಕ್ರವರ್ತಿಗಳಾದ ಕನ್ನರ ದೇವನು ದೇವಗಿರಿಯ ರಾಜಧಾನಿಯಲ್ಲಿ ಸುಖಕರವಾದ ಮಾತಿನ ವಿನೋದದಿಂದ ಬಹುಕಾಲ ರಾಜ್ಯ ವಾಳುತ್ತಿರಲು,

ಆತನ ಪಾಪಪದ್ಮ ಪದ್ಮೋಪಜೀವಿಯಾದ ಚಿಕ್ಕನೂ ಸಂಪತ್ತನ್ನೂ ಕುಬೇರನನ್ನೂ ಎದುರಿಸುವಂಥ ರಾಜನಿಗೆ ಮಿಗಿಲಾಗಿ ನಿಂತಂಥ ಆತನ ಕಿರಿಯ ಮಗನಾದ ಬೀಚುಗಿಯೂ ಔದಾರ್ಯದಲ್ಲಿ ಎಲ್ಲರಿಗೂ ಶ್ರೇಷ್ಠ ನಾದಂಥ ಅವನ ಅಣ್ಣನಾದ ಮಲ್ಲನೂ ಅವನ ಮಗನಾದ ಚಾವುಂಡನೂ ಇದ್ದರು.

ಈ ಚಾವುಂಡನು ಪಾರ್ವತೀವಲ್ಲಭನಾದ ಶಿವನ ಪಾದಕಮಲದಲ್ಲಿ ಭೃಂಗನೆಂತಲೂ, ತ್ಯಾಗ ಭೋಗಗಳಲ್ಲಿ ತತ್ಪರನಾದವನೆಂತಲೂ, ಭವಸುಖ ವೆಂಬ ಸ್ತ್ರೀಯಳ ನಾಟ್ಯಕ್ಕೆ ರಂಗಭೂಮಿ ಎಂತಲೂ ಸಾಮಭೇದ ಮೊದ

ಲಾದವುಗಳಿಗೆ ಮತ್ತು ಮಂತ್ರಾಂಗ ವಿದ್ಯೆಗಳಿಗೆ ಸಮುದ್ರನೆಂತಲೂ ವೀರ ವೈರಿಗಳ ಕಾಳಗದಲ್ಲಿ ಕಾಲರುದ್ರನೆಂತಲೂ ಹೆಸರುಪಡೆದವನಾಗಿದ್ದನು.

ಆ ಚಾವುಂಡನ ಪ್ರೀತಿಗೆ ಪಾತ್ರನಾದ ನಾಗರಾಜನು ಯಾವತ್ತು ನಿಯೋಗಗಳನ್ನು ಬಲ್ಲವನಾದ ದಿವಾಕರನ ಪುತ್ರನಾಗಿ ವಾಣಸವಂಶವೆಂಬ ಆಕಾಶಕ್ಕೆ ಸೂರ್ಯನಂತೆ ಇದ್ದನು.

ಪೃಥ್ವಿಯ ಜನರೆಲ್ಲರು ನಾಗನೆಂದರೆ ತ್ಯಾಗಗುಣಕ್ಕೆ ತವರುಮನೆ ಯೆಂತಲೂ ಎಲ್ಲ ಅರಸರ ನಿಯೋಗವನ್ನು ಪಾಲಿಸುವವನೆಂತಲೂ ಲಕ್ಷ್ಮಿಗೆ ನಿವಾಸಸ್ಥಾನವೆಂತಲೂ ಮಿತ್ರರನ್ನೂ ಪಂಡಿತರನ್ನೂ ಸಂತೋಷಪಡಿಸುವ ವನೆಂತಲೂ ಪೋಷಿಸುವವನೆಂತಲೂ ಒಳ್ಳೇಜನರಿಗೆ ಆಶ್ರಯದಾತನೆಂತಲೂ ಶ್ರೇಷ್ಠವಾದ ಪಂಡಿತನೆಂತಲೂ ವಿಷ್ಣುವಿನ ಬಗ್ಗೆ ದಟ್ಟವಾದ ಭಕ್ತಿ ಪ್ರೀತಿ ಯುಳ್ಳವನೆಂತಲೂ ಅವನನ್ನು ಹೊಗಳುವರು.

ಸಂಗನಬಸವಹಿರಿಯ ............ , ದೇವರಾಜ ಮುನಿಪನಮಗನೂ ಜಂಗಮ ಪುರುಷ........ ............ ಅವನ ಪ್ರೀತಿಯಮಗನಾದ ಕಲಿ ದೇವರಸನೂ ಇದ್ದರು. ಈ ಕಲಿದೇವ ಮುನಿಪನ ಮಗನಾದ ಹಾಲಬಸವಿ ದೇವ ಮುನೀಶ್ವರನೆಂಬವನು ಮಾನವಶ್ರೇಷ್ಠನೆಂತಲೂ, ಅಶನವ್ಯಸನಾದಿ ಗಳನ್ನು ಗೆದ್ದಂಥವನೆಂತಲೂ, ಛಲವಂತರಲ್ಲಿ ಅಧಿಕನೆಂತಲೂ ಮೂಜಗ ದಲ್ಲಿ ಹೆಸರುಗೊಂಡಿದ್ದಾನೆ.

ಸ್ವಸ್ತಿಸಮಸ್ತ ಭುವನಕ್ಕೆ ಆಶ್ರಯರಾದಂಥ ಮಹಾಮಾಹೇಶ್ವರರಾದಂಥ, ಕವಿಳಾಸಪುರವರಾಧೀಶ್ವರರಾದಂಥ, ಬಂಗಾರದ ವೃಷಭಧ್ವಜವುಳ್ಳವರಾದಂಥ ೬೩ ಪುರಾತನರ ಪಾದಾರ್ಚಕರಾದಂಥ ಮಹಾಲಿಂಗ ಜಂಗಮ ಪ್ರಸಾದದಲ್ಲಿ ಮಗ್ನರಾದಂಥ ತಮ್ಮ ಧರ್ಮದಲ್ಲಿ ಭಕ್ತಿಸಂಪನ್ನರಾದಂಥ, ಶ್ರೀ ಬಸವರಾಜನ ವಂಶದವರಾದಂಥ, ತಪಚಕ್ರವರ್ತಿಗಳಾದಂಥ, ವೀರವ್ರ [illegible]ರಾದಂಥ ಹಾಲಬಸ ವಿದೇವರಿಗೆಆಮಹಾಪ್ರಧಾನನೂ ರಟ್ಟರಾಜ್ಯಪ್ರತಿಷ್ಠಾ[illegible]ಚಾರ್ಯನೂ ಆದ ನಾಗರಸನು ಶಕ ವರ್ಷ ೧೧೮೨ನೆಯ ಸಿದ್ಧಾರ್ಥಿ ಸಂವತ್ಸರದ ಚೈತ್ರ

ಬಹುಳ ಅಮಾವಾಸ್ಯ ಸೋಮವಾರ ಸೂರ್ಯಗ್ರಹಣದಲ್ಲಿ ಪುಲಿಗೆರೆಯ ಸೋಮನಾಥದೇವರ ಸನ್ನಿಧಿಯಲ್ಲಿ ಆ ಚೌಡಿಸೆಟ್ಟಿಯರು ತೀರ್ಥದ ಮಹತ್ವವನ್ನು ಕೇಳಲು ನೂಳೆ ನಾಡಿನಲ್ಲಿ ಕವಿಳಾಸ ತೀರ್ಥವು ನಾಲ್ಕೂಯುಗದಲ್ಲಿ ಪುರಾಣೋಕ್ತವಾಗಿ ಬಂದಂಥ ಕ್ಷೇತ್ರವಿರುತ್ತದೆ. ಅದು ಹ್ಯಾಗೆಂದರೆ :– ಕೃತಯುಗದಲ್ಲಿ ಕವಿಳಾಸಮುನಿ ಕವಿಳಾಸನಾಥನೆಂತಲೂ, ತ್ರೇತಯುಗದಲ್ಲಿ ಅಂಕರಾಜಮುನಿ ಅಂಕನಾಥನೆಂತಲೂ, ದ್ವಾಪರದಲ್ಲಿ ಮಹಾರಾಜ ಮುನಿ ಮಹಾಲಿಂಗ ದೇವನೆಂತಲೂ, ಕಲಿಯುಗದಲ್ಲಿ ಕಲಿರಾಜಮುನಿ ಕಲಿದೇವನೆಂತಲೂ ಹೀಗೆ ಈ ಮುನಿಗಳು ಮುಖ್ಯಸಮಸ್ತ ಗಣೇಶ್ವರರು ಇಲ್ಲಿ ಆರಾದಿಸಿ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ ಪದವಿಯನ್ನು ಹೊಂದಿದರು.

ಆ ದೇವರಿಗೆ ಅಂಕನಾಥ ಹೆಸರನಿಂದ ಅಂಕವಲ, ತಳವೃತ್ತಿ, ಕೊತ್ತಸಿ, ಕುರುವನಿಗೆ ಈ ಹಳ್ಳಿ ಇವ್ರುಗಳನ್ನು ಮಾಂಧಾತಚಕ್ರವರ್ತಿಯು ಬಿಟ್ಟುಕೊಟ್ಟ ಧರ್ಮ.

ಇದು ಈ ತೀರ್ಥಕ್ಕೆ ಶಾಸನವಾಗಿ ಕೊಟ್ಟತೆಂಬುದನ್ನು ಚೌಡಿಸೆಟ್ಟಿಯರು ಕೇಳಿ, ನಾಗರಸನೂ ತಾವೂ ಕೂಡಿ ಕವಿಳಾಸಪುರದೊಳಗೆ ಸ್ವಯಂಭು ಮಲ್ಲಿಕಾರ್ಜುನ, ಸಂಗಮೇಶ್ವರ ಮತ್ತು ನಾಗೇಶ್ವರ ಹೀಗೆ ಮೂರು ಲಿಂಗಗಳ ಅಂಗಭೋಗ, ರಂಗಭೋಗ, ಜೀರ್ಣೋದ್ಧಾರ ಇವುಗಳಿಗೋಸ್ಕರವೂ ಪಾರಣೆಯ ಜಂಗಮಾರಾಧನೆಗೋಸ್ಕರವೂ ಕೊತ್ತಸೆ, ಕುರುವನಿಗೆ, ತಳವೃತ್ತಿ ಅಂಕವಲಿ xx ನಾಡಿನಿಂದ ಸಲುವಂತೆ ಹೆಜ್ಜುಗಿ.... ..... ಸುಂಕ, ನೂರೆತ್ತಿನ ಪರಿಹಾರ ಹೀಗೆ ಇವುಗಳನ್ನು ಸರ್ವಬಾಧಾ ಪರಿಹಾರವಾಗುವ ಉದ್ದಿಶ್ಯವಾಗಿ ಚವುಡಿಸೆಟ್ಟಿಯೂ, ನಾಗರಸರೂ ಯತಿರಾಯನಾದ ಹಾಲಬಸವಿದೇವರಿಗೆ ಮೊದಲಿಗೆ ಕೊಟ್ಟಿದ್ದನ್ನು ಧಾರಾಪೂರ್ವಕವಾಗಿ ದಾನಮಾಡಿಕೊಟ್ಟರು

ಆ ಚವುಡಿಸೆಟ್ಟಿಯರ ಹೇಳಿಕೆಯಿಂದ ನಾಗರಸರು ಊರಪಶ್ಚಿಮಕ್ಕೆ ತೋರೆಯ ಕೂಡಿದ ಹಳ್ಳಹರಿಯುತ್ತಿರಲು ಅದರಮೇಲೆ ಮೇಲುಗಡಿಗೆ ಕಲಗಡಿಗ ಗೆರೆ xxx ಉತ್ತರಕ್ಕೆ ಮೊಸರಗುತ್ತಿ ಊರು xx ಪೂರ್ವಕ್ಕೆ

xxx ಕಲ್ಲಿನಕಣಿ xx ಗೋಡಿಯು ಹಳ್ಳನೀರು ಹರಿಯುವವರಿಗೆ ದಕ್ಷಿಣಕ್ಕೆ ನದಿಯು ಸಂಗಮದಸ್ಥಳ ಈ ನಾಲ್ಕು ಸೀಮೆಯಲ್ಲಿರುವ ಕವಿಳಾಸಪುರದಲ್ಲಿಯ ಸುಂಕ xxx ನಿಧಿನಿಕ್ಷೇಪ ಅಂಕೆ ಟಂಕೆ ... ಗೋಸನೆ ಮುದ್ರೆ ನಾಗೇಶ್ವರ, ಮಲ್ಲೇಶ್ವರ ಕುಮಾರನಿಗೆ ಇವುಗಳನ್ನು ಸಂಗಮೇಶ್ವರನಿಗೋಸ್ಕರ ಪಾರಣೆಯು ಜಂಗಮಾರಾಧನೆಗೋಸ್ಕರ xxx ಈ ಪ್ರಕಾರಧರ್ಮವನ್ನು ಮಾಡಬೇಕೆಂದು ನಾಗರಸರು ಕೊಟ್ಟ ಶಾಸನವು..............ನೂಲೆನಾಡೊಳಗೆ ಸಂತೆಗಳ ಆಯಾದಾಯ ಈ ಪರಿ .......ಬರಲು ಸುಂಕ ಹನಿನೊಟು ಜಾತಿಯವರೆಲ್ಲರು ಮೂರುಮತಸ್ಥರು ........... ಬಸವರಾಜನೇ ಶಾಸನಿಕನೆಂದು................

## ಶಿಲಾಶಾಸನದಿಂದ ತಿಳಿದುಬರುವ ಮಹತ್ವದ ಸಂಗತಿಗಳು

ಈ ಶಿಲಾಶಾಸನದಲ್ಲಿ ಬಸವೇಶ್ವನನ ಉಲ್ಲೇಖವಿರುತ್ತದೆ. ಇದು ಬೆಳಗಾವಿಜಿಲ್ಲಾ ಹುಕ್ಕೇರಿಯ ನೈರುತ್ಯದಿಕ್ಕಿಗೆ ೧ ಮೈಲುಗಳ ಮೇಲಿರುವ ಅರ್ಜುನವಾಡದ ಸಮೀಪದಲ್ಲಿದೆ. ಬಸವೇಶ್ವರನ ಉಲ್ಲೇಖವಿದ್ದ ಶಿಲಾಲಿಪಿಗಳು ಈ ವರೆಗೆ ಎಲ್ಲಿಯೂ ಸಿಕ್ಕಿದ್ದಿಲ್ಲ. ನಾವು ಈಗ ಪ್ರಸಿದ್ಧಸಿರುವ ಶಿಲಾಶಾಸನವೇ ಮೊದಲನೆಯದು ಇದರಲ್ಲಿ ಈವರೆಗೆ ಅಪರಿಚಿತವಾದ ಅತ್ಯಂತ ಮಹತ್ವದ ಅನೇಕ ವಿಷಯಗಳಿರುವದರಿಂದ ಕರ್ನಾಟಕಸ್ಥರೆಲ್ಲರೂ ಇದಕ್ಕೆ ವಿಶೇಷ ಲಕ್ಷವನ್ನು ಪೂರೈಸುವರೆಂದು ನಾವು ನಂಬಿದ್ದೇವೆ.

ಈ ಶಿಲಾಶಾಸನದ ಕಾಲವು ಶಕೆ ೧೧೮೨ ಅಂದರೆ ಇಸ್ವಿ ಸನ್ನ ೧೨೬೦ ಇರುತ್ತದೆ. ಅಂದರೆ ಬಸವೇಶ್ವರನ ತರುವಾಯ ಸುಮಾರು ನೂರು ವರ್ಷದ್ದು ಇರುತ್ತದೆ. ಇದರಲ್ಲಿ ಬಸವೇಶ್ವರನ ಮತ್ತು ಅವನ ವಂಶದವರ ವೃತ್ತಾಂತವಿದೆ. ಈ ಶಿಲಾಶಾಸನದಿಂದ ಬಸವೇಶ್ವರನ ಮೊಮ್ಮಗನು ದೇವರಾಜ ಮುನಿಪನು, ಈ ದೇವರಾಜನ ಮೊಮ್ಮಗನು ಕಲಿದೇವನು. ಅವನ ಮಗನು ಹಾಲಬಸವಿದೇವ ಮುನಿಪನು ಹೀಗೆ ಇದ್ದರೆಂದು ತಿಳಿದು ಬರುತ್ತದೆ. ಈ ವಿಷಯಗಳಿದ್ದ ಶಿಲಾಲೇಖದ ಭಾಗದಲ್ಲಿ ತೂತುಗಳು ಬಿದ್ದುದರಿಂದ ಬಸವೇಶ್ವರನ ಮಗ ಮತ್ತು ಅವನ ಮೊಮ್ಮಗ ಇವರ

ಹೆಸರುಗಳು ತಿಳಿದು ಬರುವದಿಲ್ಲ. ಇವರೆಲ್ಲರೂ ಕವಿಳಾಸಪುರದ ಅಧೀಶ್ವರರಾಗಿ ಇದ್ದರೆಂದು ಇಲ್ಲಿ ವರ್ಣಿಸಲ್ಪಟ್ಟಿದೆ. ಈ ಕವಿಳಾಸಪುರವು ಆ ಕಾಲಕ್ಕೆ ಒಂದುದೊಡ್ಡ ಕ್ಷೇತ್ರಸ್ಥಾನವಾಗಿತ್ತೆಂದು ತೋರಿ ಬರುತ್ತದೆ. ಅಲ್ಲಿ ಕಲ್ಲಿನಾಥನ ಗುಡಿಯು ಪ್ರಸಿದ್ಧವಾಗಿತ್ತು. ಇದಲ್ಲದೆ ಅಲ್ಲಿ ಮಲ್ಲಿಕಾರ್ಜುನ, ಸಂಗಮೇಶ್ವರ, ನಾಗೇಶ್ವರ ಎಂಬ ಹೆಸರಿನ ಮೂರು ದೇವಾಲಯಗಳಿದ್ದು ಅವುಗಳ ಅಂಗಭೋಗ, ರಂಗಭೋಗ, ಜೀರ್ಣೋದ್ಧಾರ, ಪಾರಣೆಯ ಜಂಗಮಾರಾಧನೆ ಇವುಗಳಿಗೋಸ್ಕರ ಹಾಲಬಸವಿದೇವನಿಗೆ ದೇವಗಿರಿ ಯಾದವರಾಜನಾದ ಕನ್ನರನ ಪ್ರಧಾನಿಯಾದ ನಾಗರಸನು ಈ ಕವಿಳಾಸಪುರದಲ್ಲಿಯ ಕೆಲವುಹಕ್ಕು ಬಾಬುಗಳನ್ನು ದಾನಕೊಟ್ಟಂತೆ ಈ ಶಾಸನದಿಂದ ತಿಳಿದು ಬರುತ್ತದೆ.

ಈ ಶಾಸನದಿಂದ ನಮಗೆ ತೋರಿಬಂದಿರುವ ಕೆಲವು ಮಹತ್ವದ ವಿಷಯಗಳನ್ನು ಇಲ್ಲಿ ವಿವರಿಸಲು ಯತ್ನಿಸುತ್ತೇವೆ.

## ಬಸವೇಶ್ವರನ ಉಲ್ಲೇಖವು

ಈ ಶಾಸನದ ಆರಂಭದಲ್ಲಿ ಶಂಭುವಿನ ಮತ್ತು ಕಲ್ಲಿನಾಥನ ಸ್ತುತಿಪರ ಶ್ಲೋಕಗಳಿದ್ದು ಆ ಮೇಲೆ ಬಸವೇಶ್ವರನ ಸ್ತುತಿಯು ಇದೆ. ಅದು ಏನೆಂದರೆ :

"ಶ್ರೀ ಮತ್ತರದವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಶ್ವರ ಮಾದಿರಾಜನ ತನೂಜಂ ಬಸವರಾಜನ ಮಹಿಮೆ ಎಂತೆಂದೊಡೆ :- ಮಂಗಳ ಕೀರ್ತಿಗೆ ಪುರಾತನ ಲಿಂಗಮಲಿಂಗ ಲಿಂಗೈಕ ಭಕ್ತಿ ನಿರ್ಭರಲೀಲಾಸಂಗಂ ಸಂಗನಬಸವಂ ಸಂಗತಿಯಿಂ ಮಾಳ್ಕೆ ಭಕ್ತಿಯೊಳಗನವರತಂ" ಎಂದು ಇದೆ.

ಈ ಉಕ್ತಿಯಲ್ಲಿ ಬಸವೇಶ್ವರನ ಉಲ್ಲೇಖವಿರುವದು ಸ್ಪಷ್ಟವಿದೆ. ಇಲ್ಲಿ ಅವನು ಬಾಗವಾಡಿಪುರದ ಅಧಿಪತಿಯಾದ ಮಾದಿರಾಜನ ಮಗನೆಂದು ಹೇಳಲ್ಪಟ್ಟಿದೆ. ಈ ಬಾಗವಾಡಿಯು ತರದವಾಡಿ ಸೀಮೆಯ ಮಧ್ಯ ಗ್ರಾಮ

ವೆಂದು ಇಲ್ಲಿ ಹೇಳಲ್ಪಟ್ಟದೆ. ತರದವಾಡಿ ಎಂದರೆ ಈಗ ಇಡೀ ತಾಲೂ ಕಿನಲ್ಲಿ ಭೀಮಾನದಿಯ ತೀರದಲ್ಲಿರುವ ತದ್ದೇವಾಡಿ ಗ್ರಾಮವಿರುತ್ತದೆ. ಶಿಲಾಲೇಖಗಳಲ್ಲಿ ತರದವಾಡಿ ಸಾವಿರವೆಂದು ಉಲ್ಲೇಖವಿದ್ದು ಅದರ ದಕ್ಷಿಣ ಭಾಗಕ್ಕೆ ಕೆಲವಡಿ ಮುನ್ನೂರು ಕಿಸುಕಾಡು ಎಪ್ಪತ್ತು ಹೀಗೆ ಪ್ರದೇಶ ಗಳು ಇದ್ದದ್ದು ತಿಳಿದು ಬರುತ್ತದೆ, 'ಕೆಲವಡಿ' ಗ್ರಾಮವು ಈಗ ಬಾದಾಮಿ ತಾಲೂಕಿನಲ್ಲಿ ಇದೆ. 'ಕಿಸುಕಾಡು' ಈಗಿನ ಪಟ್ಟದಕಲ್ಲೆಂದು ಪ್ರಸಿದ್ಧವು ಇವಾದರೂ ಇದೇ ತಾಲೂಕಿನಲ್ಲಿಯೇ ಇದೆ. ಆದ್ದರಿಂದ ತದ್ದೇವಾಡಿ ಭಾಗವು ಈಗಿನ ಬಾದಾಮಿ ತಾಲೂಕನ್ನು ಬಿಟ್ಟು ಉಳಿದ ವಿಜಾಪುರ ಜಿಲ್ಲೆ ಎಂಬುದು ಸ್ಪಷ್ಟವಾಗುತ್ತದೆ. ಈ ಭಾಗದ ಮಧ್ಯದಲ್ಲಿಯೇ ಈ ಗಿನ ಬಾಗೇವಾಡಿ ಗ್ರಾಮವು ಇರುತ್ತದೆ. ಬಾಗೇವಾಡಿ ಎಂಬ ಹೆಸರಿನ ಗ್ರಾಮವು ಇದರ ಹೊರತು ಬೇರೆ ಯಾವುದೂ ಈ ಪ್ರದೇಶದಲ್ಲಿ ಇರುವ ದಿಲ್ಲ. ಆದ್ದರಿಂದ ಈ ಶ್ಲೋಕದಲ್ಲಿ ಉಲ್ಲೇಖಿಸಲ್ಪಟ್ಟ ಬಾಗೇವಾಡಿಗ್ರಾ ಮವು ವಿಜಾಪುರ ಜಿಲ್ಹೆಯಲ್ಲಿಯ ಈಗಿನ ಬಸವನ ಬಾಗೇವಾಡಿಯೇ ಎಂಬುದು ಸ್ಪಷ್ಟವಾಗುತ್ತದೆ.

ಈ ಶ್ಲೋಕದಲ್ಲಿ ಬಸವೇಶ್ವರನು ಪುರಾತನರು ಜಂಗಮರು ಮತ್ತು ಲಿಂಗ ಇವುಗಳಲ್ಲಿ ಅತ್ಯಂತ ಭಕ್ತಿಯುಳ್ಳವನೆಂದು ಹೇಳಲ್ಪಟ್ಟಿದ್ದಾನೆ ಮತ್ತು ಸಂಗನಬಸವನೆಂತಲೂ ಕರೆಯಲ್ಪಟ್ಟಿದ್ದಾನೆ. ವಚನಕಾರರು ಬಸವೇಶ್ವರ ನನ್ನು ಸಂಗನಬಸವನೆಂದು ಮೇಲಿಂದಮೇಲೆ ಕರೆಯುವದುಂಟು. ಈ ಹೆಸರು ಈ ಶಿಲಾಲೇಖದಲ್ಲಿಯೂ ಉಪಯೋಗಿಸಲ್ಪಟ್ಟಿದೆ, ಬಸವೇಶ್ವರನು ಸಂಗ ಮೇಶ್ವರನಿಂದ ದೀಕ್ಷೆಯನ್ನು ಹೊಂದಿದವನಾದ್ದರಿಂದ ಅವನಿಗೆ ಸಂಗನಬಸ ವನೆಂದು ಹೆಸರು ಬಂದಿರಬಹುದೆಂದು ತೋರುತ್ತದೆ. ಅವನು ಪುರಾತನ ರಲ್ಲಿಯೂ ಲಿಂಗಜಂಗಮದಲ್ಲಿಯೂ ಪ್ರೇಮವುಳ್ಳವನೆಂತಲೂ ಇಲ್ಲಿ ಹೇಳಿದೆ. ಈ ಎಲ್ಲ ಸಂಗತಿಗಳಿಂದ ಈ ಶಿಲಾಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಬಸವ ರಾಜನು ವೀರಶೈವಮತೋದ್ಧಾರಕನಾದ ಬಸವೇಶ್ವರನೇ ಇರಬೇಕೆಂದು ಗೋಚರವಾಗುತ್ತದೆ.

## ಬಸವೇಶ್ವರನ ವಂಶದವರ ಉಲ್ಲೇಖವು

ಮುಂದೆ ಬಸವೇಶ್ವರನ ವಂಶಜರ ವರ್ಣನೆಯು ಬಂದಿರುತ್ತದೆ. ಹೀಗೆ ಬಸವೇಶ್ವರನಿಗೆ ವಂಶದವರು ಉಳಿದದ್ದು ವೀರಶೈವ ಯಾವ ಗ್ರಂಥ ದಲ್ಲಿಯೂ ಉಪಲಬ್ಧವಿಲ್ಲ. ಕೆಲವು ಗ್ರಂಥಗಳಲ್ಲಿ ಮಾತ್ರ ಅವನಿಗೆ ಬಾಲ ಸಂಗನೆಂಬ ಒಬ್ಬ ಮಗನಿದ್ದನೆಂತಲೂ ಅವನು ಚಿಕ್ಕವಯಸ್ಸಿನಲ್ಲಿ ಮರಣ ಹೊಂದಿದನೆಂತಲೂ ತಿಳಿದು ಬರುತ್ತದೆ. ಆದರೆ ಈ ಶಿಲಾಶಾಸನದಿಂದ ಬಸವೇಶ್ವರನಿಗೆ ವಂಶಜರು ಇದ್ದರೆಂಬ ಸಂಗತಿಯು ಸ್ಪಷ್ಟವಾಗುತ್ತದೆ. ಅವರು ಕಲ್ಯಾಣ ಪಟ್ಟಣ ಮತ್ತು ಸ್ವಗ್ರಾಮವಾದ ಬಾಗೇವಾಡಿಯನ್ನು ಬಿಟ್ಟು ಈ ಕವಿಳಾಸಪುರದಲ್ಲಿ ಹಿಂದುಗಡೆ ಬಂದು ನಿಂತಿದ್ದರೆಂದು ಕಂಡು ಬರುತ್ತದೆ. ಈ ಶಿಲಾಶಾಸನದ ಅಚ್ಚಿನಲ್ಲಿ ಈ ಹೆಸರುಗಳಿದ್ದ ಭಾಗಗಳ ಲ್ಲಿಯ ಅಕ್ಷರಗಳು ಮೂಡದೇ ಇದ್ದದರಿಂದ ಶಾಸನವನ್ನು ಪ್ರತ್ಯಕ್ಷ ನೋಡಿ ಬರಲಿಕ್ಕೆ ಶ್ರೀ ಚನ್ನಮಲ್ಲಪ್ಪ ಹಲಸಂಗಿಯವರಿಗೆ ನಾನು ತಿಳಿಸಲಾಗಿ ಅವರೂ ಪ್ರೊ. ನಂದೀಮಠ ಇವರೂ ಅದನ್ನು ಸಮಕ್ಷಮನೋಡಲಾಗಿ ಈ ಭಾಗ ದಲ್ಲಿಯ ಕಲ್ಲಿನಲ್ಲಿ ತೂತುಗಳು ಬಿದ್ದದರಿಂದ ಬಸವೇಶ್ವರನ ವಂಶಜರಲ್ಲಿ ಈರ್ವರ ಹೆಸರುಗಳು ಗೊತ್ತಾಗದೆ ಉಳಿದಿದೆ. ಇದು ಬಹು ವಿಷಾದಕರ ವಾಗಿರುತ್ತದೆ.

ಈ ಶಿಲಾಲೇಖದಲ್ಲಿ ಬಸವೇಶ್ವರನ ಮಗನಹೆಸರು ಉಪಲಬ್ಧವಿಲ್ಲ. ಅಲ್ಲಿ ಸಂಗನಬಸವನ ಅಘ್ರಂ ಎಂಬ ಶಬ್ದಗಳು ಮಾತ್ರ ಉಳಿದಿವೆ. ಈ ಶಬ್ದಗಳು "ಸಂಗನ ಬಸವನ ಅಗ್ರಜ, ಎಂದು ಇರಬಹುದು. ಅಗ್ರಜ ನೆಂದರೆ ಹಿರಿಯ ಮಗ ಎಂದು ಅರ್ಥವಾಗುತ್ತದೆ. ಆದ್ದರಿಂದ ಬಸವೇಶ್ವ ರನಿಗೆ ಒಬ್ಬನಕ್ಕಿಂತಲೂ ಹೆಚ್ಚಿಗೆ ಮಕ್ಕಳು ಇರಬಹುದೆಂಬ ಊಹೆಗೆ ಅಸ್ಪ ದವಾಗುತ್ತದೆ.

ಈ ಬಸವೇಶ್ವರನ ಹಿರಿಯಮಗನ ಮಗನು ಅಂದರೆ ಮೊಮ್ಮಗನ ಹೆಸರು ದೇವರಾಜನೆಂದು ಇದ್ದುದಾಗಿ ಗೊತ್ತಾಗುತ್ತದೆ. ಇವನ ವರ್ಣನಾ

ತ್ಮಕ ವಿಶೇಷಣಗಳು ಶಿಲಾಲೇಖದಲ್ಲಿ ಸ್ಪಷ್ಟವಾಗಿವೆ. ಆದರೆ ಅವನ ಶಿಷ್ಟ ಭಾಗದಲ್ಲಿ ಇವನು ಮುನಿಪನೆಂದು ಕರೆಯಲ್ಪಟ್ಟಿದ್ದಾನೆ.

ಈ ದೇವರಾಯನ ಮಗನ ಹೆಸರು ಶಿಲಾಲೇಖದಲ್ಲಿ ಅಳಿಸಿ ಹೋಗಿದೆ. ಆದರೆ ಆತನು "ಜಂಗಮ ಪುರುಷ" ಅಂದರೆ ಶ್ರೇಷ್ಠನಾದ ಜಂಗಮ ಎಂದು ವರ್ಣಿಸಲ್ಪಟ್ಟಿದ್ದಾನೆ.

ಈತನ ಪ್ರಿಯ ಸುತನು ಕಲಿದೇವರಸನೆಂದು ಇಲ್ಲಿ ಹೇಳಲ್ಪಟ್ಟಿದೆ. ಈತನ ವರ್ಣನಾತ್ಮಕ ಭಾಗವಾದರೂ ಶಾಸನದಲ್ಲಿ ಹೊರಟು ಹೋಗಿದೆ.

ಈ ಕಲಿದೇವ ಮುನಿಯ ಮಗನ ಹೆಸರು ಹಾಲಬಸವಿದೇವ ಮುನೀಶ್ವರನೆಂದು ಇದ್ದು ಈತನು ಮೂಲೋಕದಲ್ಲಿ ಪ್ರಸಿದ್ಧ ಹೊಂದಿರುವನೆಂತಲೂ ಮನುಷ್ಯ ಶ್ರೇಷ್ಠನೆಂತಲೂ ಅಶನ ಮತ್ತು ವ್ಯಸನ ಇವುಗಳನ್ನು ಗೆದ್ದಂಥವನೆಂತಲೂ ಛಲದಲ್ಲಿ ಅಧಿಕನೆಂತಲೂ ಹೇಳಲ್ಪಟ್ಟಿದ್ದಾನೆ.

ಈ ಪ್ರಕಾರ ಬಸವೇಶ್ವರನ ವಂಶಜರ ವರ್ಣನಾ ವಿಷಯಗಳು ಇದರಲ್ಲಿ ಬಂದಿವೆ. ಮುಂದೆ ಹಾಲಬಸವಿದೇವನ ಬಗ್ಗೆ ವಿಶೇಷ ವೃತ್ತಾಂತವು ಕೊಡಲ್ಪಟ್ಟಿದೆ. ಅದಾದರೂ ಅತ್ಯಂತ ಮಹತ್ವದ್ದಾಗಿದೆ.

ಹಾಲಬಸವಿದೇವನು "ಮಹಾಮಹೇಶ್ವರ" ಎಂದು ಹೇಳಲ್ಪಟ್ಟಿದ್ದಾನೆ. ಅವರಂತೆಯೇ ಮುನೀಶ್ವರನೆಂತಲೂ ಕರೆಯಲ್ಪಟ್ಟಿದ್ದಾನೆ. ಈ ವಿಶೇಷಣಗಳು ಈ ಯಾವತ್ತೂ ವಂಶಜರಿಗೆ ಉಪಯೋಗಿಸಲ್ಪಟ್ಟಿವೆ. ಇದರ ಮೇಲಿಂದ ಆ ಕಾಲದ ವೀರಶೈವರು ಬಸವೇಶ್ವರನ ವಂಶಸ್ಥರೆಲ್ಲರು ಒಂದು ಶ್ರೇಷ್ಠತರ ಧಾರ್ಮಿಕವರ್ಗದಲ್ಲಿ ಎಣಿಸಲ್ಪಟ್ಟು ಅತ್ಯಂತ ಆದರಣೀಯರಾಗಿದ್ದರೆಂದು ತಿಳಿದುಬರುತ್ತದೆ. ಅವರು "ಮುನಿಪ, ಜಂಗಮಪುರುಷ, ಮಹಾಮಹೇಶ್ವರ" ಎಂದು ಕರೆಯಲ್ಪಟ್ಟಿದ್ದಾರೆ. ಇವರೆಲ್ಲರೂ ಪ್ರಾಪಂಚಿಕರಾಗಿದ್ದುದು ಸ್ಪಷ್ಟವು,

ಹಾಲಬಸವಿದೇವನು "ಸಂಪೂರ್ಣ ವೃಷಭಧ್ವಜ" ವುಳ್ಳವನೆಂದು ಹೇಳಲ್ಪಟ್ಟಿದ್ದಾನೆ. ಇವನ ವಂಶಕ್ಕೆ ಮೂಲಭೂತನಾದವನು ಬಸವೇಶ್ವರನಾಗಿದ್ದುದರಿಂದ ಅವನ ಗುರುತಾದ ವೃಷಭನನ್ನು ಇವರು ತಮ್ಮ ನಿಶಾನೆಯಲ್ಲಿ ಇಟ್ಟುಕೊಂಡಿದ್ದ ಹಾಗೆ ತೋರುತ್ತದೆ.

ಅವನು "ತ್ರಿಷಷ್ಟಿ ಪುರಾತ ಪಾದಾರ್ಚಕ" ಎಂದು ಹೇಳಲ್ಪಟ್ಟಿದೆ, ಅಂದರೆ ಅರವತ್ತು ಮೂರು ಪುರಾತನರಿಗೋಸ್ಕರ ಭಕ್ತಿಯುಳ್ಳವನೆಂದು ಹೇಳಲ್ಪಟ್ಟಿದೆ. ಈ ಪುರಾತನರೆಲ್ಲರೂ ವೀರಶೈವರಿಗೆ ಯಾವಾಗಲೂ ಪೂಜ್ಯರಾಗಿರುತ್ತಾರೆ.

ಇವನು "ಮಹಾಲಿಂಗ ಜಂಗಮ ಪ್ರಸಾದ ನಿಯತ" ಎಂದು ಹೇಳಲ್ಪಟ್ಟಿದ್ದಾನೆ. ಈ ಲಿಂಗ, ಜಂಗಮ, ಪ್ರಸಾದಗಳು ಅಷ್ಟಾವರಣಗಳಲ್ಲಿ ಬರುತ್ತಿದ್ದು ಇವುಗಳಿಗೆ ಒಳಪಟ್ಟು ನಡೆಯುವವನೆಂದು ಇಲ್ಲಿ ಹೇಳಲ್ಪಟ್ಟಿದೆ.

ಇವನು ಸಮಯ ಭಕ್ತಿ ಸಂಪನ್ನನೆಂತಲೂ ಹೇಳಲ್ಪಟ್ಟಿದೆ. ಅಂದರೆ ಯಾವ ಧರ್ಮ ಮಾರ್ಗಕ್ಕೆ ಅವನು ಹೊಂದಿದವನೋ ಅದರಲ್ಲಿಯೇ ವಿಶ್ವಾಸವುಳ್ಳವನೆಂದು ಹೇಳಲ್ಪಟ್ಟಿದೆ

"ಶ್ರೀಬಸವರಾಜನನ್ವಯರು" ಎಂದು ಹೇಳಲ್ಪಟ್ಟಿದೆ. ಇವರಲ್ಲಿ ಬಸವೇಶ್ವರನ ವಂಶದವನೆಂದು ಸ್ಪಷ್ಟವಾಗಿ ಇಲ್ಲಿ ಹೇಳಲ್ಪಟ್ಟಿದ್ದಾನೆ. ಮುಂದೆ ಶಿವ ಚಕ್ರವರ್ತಿ ಮತ್ತು ವ್ರತಿ ಎಂದು ಹೇಳಲ್ಪಟ್ಟಿದ್ದಾನೆ.

ಈ ಪ್ರಕಾರ ಹಾಲಬಸವಿದೇವನ ವರ್ಣನೆ ಇದ್ದು ಇದು ಅವನ ಪೂರ್ವಜರೆಲ್ಲರಿಗೂ ಅನ್ವಯವಾದಂತೆ ಇದೆ. ಇದರಿಂದ ಬಸವೇಶ್ವರನ ವಂಶಜರ ಸ್ಥಿತಿಯು ಚೆನ್ನಾಗಿ ವ್ಯಕ್ತವಾಗುತ್ತದೆ. ಈ ಶಾಸನದಲ್ಲಿ ಲಿಂಗ, ಜಂಗಮ, ಪ್ರಸಾದ, ಪುರಾತನರು, ಮಾಹೇಶ್ವರರು, ಗಣೇಶ್ವರ ಮೊದಲಾದ ಶಬ್ದಗಳು ಮೇಲಿಂದ ಮೇಲೆ ಬರುತ್ತವೆ. ಇವುಗಳೆಲ್ಲವೂ ವೀರಶೈವ ಮತ ಗ್ರಂಥಗಳಲ್ಲಿ ಮಾತ್ರ ಉಪಲಬ್ಧವಾಗುವ ಶಬ್ದಗಳು. ಇದರ ಮೇಲಿಂದ ಈ ಬಸವೇಶ್ವರನ

ವಂಶಸ್ಥರೆಲ್ಲರೂ ವೀರಶೈವ ಮತಾನುಯಾಯಿಗಳಾಗಿ ಜನರಲ್ಲಿ ಅತ್ಯಂತ ವಂದ್ಯರಾಗಿ ಜೀವಿಸುತ್ತಿದ್ದರೆಂಬುದು ಸಿದ್ಧವಾಗುತ್ತದೆ.

### ಕವಿಳಾಸ ಪುರ

ಇನ್ನು ಮುಂದೆ ಇವರು ವಾಸಿಸುತ್ತಿದ್ದ ಕವಿಳಾಸಪುರದ ಬಗ್ಗೆ ವಿಚಾರಿಸುವಾ: ಈ ಗ್ರಾಮವು 'ನೂಲಿ' ನಾಡೊಳಗೆ ಇದ್ದ ಬಗ್ಗೆ ಈ ಶಿಲಾಶಾಸನದಿಂದ ತಿಳಿದು ಬರುತ್ತದೆ. ನೂಲಿ ಗ್ರಾಮವು ಈಗಲೂ ಹುಕ್ಕೇರಿ ತಾಲೂಕಿನಲ್ಲಿದೆ. ಅದು ಹುಕ್ಕೇರಿಯ ಪಶ್ಚಿಮಕ್ಕೆ ಸುಮಾರು ೧೫ ಮೈಲುಗಳ ಮೇಲೆ ಇದೆ. ಬೆಳಗಾವ ಜಿಲ್ಲೆಯ ಉತ್ತರಭಾಗಕ್ಕೆ ಮೊದಲಿನ ಕಾಲದಲ್ಲಿ 'ಕುಹುಂಡಿ' ಅಥವಾ 'ಕುಂಡಿ ಮೂರು ಸಾವಿರ' ಎಂಬ ಹೆಸರು ಇತ್ತು. ಈ ಸೀಮೆಯಲ್ಲಿ ನೂಲಿ ನಾಡು ಒಂದು ತಾಲೂಕಿನಂತೆ ಇರಬಹುದು. ನೂಲಿ ಗ್ರಾಮದಿಂದ ಕವಿಳಾಸಪುರವು ೭-೮ ಮೈಲು ಆಗಬಹುದು. ಈ ಕವಿಳಾಸಪುರವು ಆ ಕಾಲಕ್ಕೆ ಒಂದು ತೀರ್ಥವೆಂತಲೂ ನಾಲ್ಕುಯುಗದ ಪುರಾಣೋಕ್ತದಿಂದ ಬಂದ ಕ್ಷೇತ್ರವೆಂತಲೂ ತಿಳಿಯಲ್ಪಡುತ್ತಿತ್ತು. ಹೀಗೆ ಈ ಸ್ಥಾನಕ್ಕೆ ಪಾವಿತ್ರ್ಯವು ಬಂದಿದ್ದು ಕಲ್ಲಿನಾಥ ದೇವಸ್ಥಾನದಿಂದಲೇ ಇರುತ್ತದೆ. ಕೃತಯುಗದಲ್ಲಿ ಕಪಿಳಾಸಮುನಿಯು ಅದನ್ನು ಪೂಜಿಸಿದ್ದರಿಂದ ಅಂಕನಾಥನೆಂತಲೂ ದ್ವಾಪಾರದಲ್ಲಿ ಮಹಾರಾಜ ಮುನಿಯು ಆರಾಧಿಸಿದ್ದರಿಂದ ಮಹಲಿಂಗ ದೇವನೆಂತಲೂ ಕಲಿಯುಗದಲ್ಲಿ ಕಲಿರಾಜ ಮುನಿಯು ಆರಾಧಿಸಿದ್ದರಿಂದ ಕಲಿದೇವನೆಂತಲೂ ಈ ದೇವಸ್ಥಾನವು ಹೆಸರು ಪಡೆದಿತ್ತು. ಅಲ್ಲದೆ ಇದನ್ನು ಅನೇಕ ಗಣೇಶ್ವರರು ಆರಾಧಿಸಿ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರೂಪ್ಯ ಪದವಿಯನ್ನು ಪಡೆದಿದ್ದರು. ಆದ್ದರಿಂದ ಆ ಕಾಲಕ್ಕೆ ಈ ಗ್ರಾಮವು ಜನರಲ್ಲಿ ಒಂದು ಪ್ರಸಿದ್ಧ ತೀರ್ಥವೆಂದು ಭಾವಿಸಲ್ಪಡುತ್ತಿತ್ತು.

ಆದರೆ ಈ ಕವಿಳಾಸಪುರವು ಈ ಕಾಲಕ್ಕೆ ಅಸ್ತಿತ್ವದಲ್ಲಿ ಇರುವುದಿಲ್ಲ. ಆದರೆ ಈ ಕವಿಳಾಸಪುರದ ಮೊದಲಿನ ವಿಸ್ತಾರವು ಎಷ್ಟಿತ್ತೆಂಬುದನ್ನು ಈ ಶಿಲಾಶಾಸನದಿಂದ ಸ್ಥೂಲಮಾನವಾಗಿ ಕಂಡು ಹಿಡಿಯಬಹುದಾಗಿದೆ.

ಯಾಕೆಂದರೆ ಇದರಲ್ಲಿ ಈ ಪುರದ ಚತುಸ್ಸೀಮೆಯು ಹೇಳಲ್ಪಟ್ಟಿದೆ. ಈ ವಿವರಣೆ ಇದ್ದ ಭಾಗವು ಕೆಲವೆಡೆಗಳಲ್ಲಿ ಭಿನ್ನವಾಗಿದೆ. ಆದರೂ ಅದರಿಂದ ತಿಳಿಯುವದೇನೆಂದರೆ :- ನದಿಯನ್ನು ಕೂಡಿದ ಹಳ್ಳದ ಪೂರ್ವದ ದಂಡೆಯು ಈ ಗ್ರಾಮದ ಪಶ್ಚಿಮಕ್ಕೆಂತಲೂ, ಹೊಸರಗಾತ್ರಿ ಗ್ರಾಮವು ಉತ್ತರದಿಕ್ಕಿಗೆಂತಲೂ, ಅದರ ಪೂರ್ವಕ್ಕೆ ಕಲ್ಲಿನ ಕಣೆ ಇದು ಕೆರೆಯ ಕೋಡಿಯಿಂದ ಬಂದ ಹಳ್ಳದ ದಂಡೆಯು ಪೂರ್ವಕ್ಕೆಂತಲೂ, ನದಿಯ ಸಂಗಮಸ್ಥಳವು ದಕ್ಷಿಣಕ್ಕೆಂತಲೂ ಹೇಳಿದೆ. ಈ ಚತುಃ ಸೀಮೆಯ ಸಹಾಯದಿಂದ ಮುಂಚಿನ ಕವಿಳಾಸಪುರದ ಸ್ಥಳವನ್ನು ಈಗ ಗುರ್ತಿಸಬಹುದಾಗಿದೆ. ಹುಕ್ಕೇರಿ ಗ್ರಾಮದ ಪಶ್ಚಿಮಕ್ಕೆ ಸಮಿ ಸಮೀಪವಾಗಿ ಮೂರು ಸಣ್ಣ ಸಣ್ಣ ಹಳ್ಳಗಳಿವೆ. ಅವುಗಳಲ್ಲಿ ಮಧ್ಯದ ಹಳ್ಳವು ಬಹಳ ಸಣ್ಣದು ಇದೆ. ಅವೆಲ್ಲವುಗಳು ಹಿರಣ್ಯಕೇಶಿ ಹೊಳೆಯನ್ನು ಕೂಡುತ್ತವೆ. ಈ ಮೂರು ಹಳ್ಳಗಳಲ್ಲಿ ಎಲ್ಲಕ್ಕೂ ಪಶ್ಚಿಮ ಕಡೆಯ ಹಳ್ಳವೇ ಕವಿಳಾಸಪುರದ ಪಶ್ಚಿಮ ಮೇರೆಯು. ಶಿಲಾಲೇಖದಲ್ಲಿ ಉಲ್ಲೇಖಿಸಿದ ಹೊಸರಗಾತ್ರಿ ಗ್ರಾಮವು ಈಗ್ಗೆಯೂ ಅಲ್ಲಿಯೇ ಇದೆ. ಈ ಗ್ರಾಮವೇ ಈ ಕವಿಳಾಸಪುರದ ಉತ್ತರ ಮೇರೆಯಾಯಿತು. ಈ ಗ್ರಾಮದ ಮೇರೆಗೆ ಹೊಂದಿ ಈಗ ಒಂದು ಗುದ್ದವು ಇದ್ದು ಅಲ್ಲಿ ಒಂದು ಕಲ್ಲಕಣಿಯೂ ಜಲಾಶಯವು ಮೊದಲು ಇರಬಹುದು. ಇದರ ಪೂರ್ವಕ್ಕೆ ಹಳ್ಳವು ಇದ್ದು ಇದರ ದಂಡೆಯೇ ಕವಿಳಾಸಪುರದ ಪೂರ್ವ ಮೇರೆಯಾಗಿತ್ತು. ಮತ್ತು ಈ ಹಳ್ಳವು ಹಿರಣ್ಯಕೇಶಿ ಹೊಳೆಯನ್ನು ಕೂಡಿದಂಥ ಸ್ಥಳವೇ ಇದರ ದಕ್ಷಿಣ ದಿಕ್ಕಿನ ಮೇರೆಯಾಗಿತ್ತು. ಅಂದರೆ ಈ ಗ್ರಾಮವು ಮೇಲ್ಕಂಡ ಮೂರು ಹಳ್ಳಗಳ ಮಧ್ಯದಲ್ಲಿದ್ದು ಅದರ ಉದ್ದ ಸುಮಾರು ಎರಡು ಮೈಲು ಮತ್ತು ಅಗಲು ೧ ಮೈಲು ಇರಬಹುದಾಗಿ ತೋರುತ್ತದೆ. ಈ ಪ್ರದೇಶವು ಹುಕ್ಕೇರಿಗ್ರಾಮದ ಪಶ್ಚಿಮಕ್ಕೆ ೨ ಅಥವಾ ೨॥ ಮೈಲು ಅಂತರದ ಮೇಲೆ ಇರುತ್ತದೆ. [illegible]ದಲ್ಲಿ ಈಗ ಹಾಲಶಂಕರ ಲಿಂಗನ ಗುಡಿ ಇದೆ. ಗುಡಿ [illegible] ಕಟ್ಟಿದ ದೇವಸ್ಥಾನವಲ್ಲ. ಈಗಿನ [illegible]ದ ಮಣ್ಣಿನ ಮನೆ. [illegible] ಯಾವ ದೇವಾಲಯವೂ ಅಲ್ಲಿ [illegible]ದಿಲ್ಲ. ಅದರೆ [illegible], [illegible], ಹೊಸರಗಾತ್ರಿ ಈ ಮೂರು [illegible]ರು ಕೂಡಿ [illegible]

ಇದ್ದ ಹಾಗೂ, ಕಾರಣಾಂತರದಿಂದ ಆ ಊರು ಮುರಿದು ಮೂರು ಹಳ್ಳಿಗಳಾದ ಹಾಗೂ ಅಲ್ಲಿ ಅಯ್ಯಾಯಿಕೆ ಉಂಟು. ಅಲ್ಲದೆ ಈ ಮೂರು ಊರುಗಳಲ್ಲಿ ಒಂದೇ ವಂಶದ ಗೌಡರು, ಒಂದೇ ವಂಶದ ಕುಲಕರ್ಣಿಯರು, ಒಂದೇ ವಂಶದ ಪತಸಿಹೊಲೇರು ಇರುವರಂತೆ.

ಈ ಶಾಸನವು ಕೇವಲ ವೀರಶೈವ ಪರವಾಗಿರುತ್ತದೆಂದು ಹೇಳಲಿಕ್ಕೆ ಏನೂ ಪ್ರತ್ಯವಾಯವಿಲ್ಲ. ಶ್ರೀಕಲ್ಲಿನಾಥನ ವರ್ಣನೆಯಲ್ಲಿ "ಸ್ವಾಯತ್ತ ಶಕ್ತಿತ್ರಯಮಯ ಮಹಿಮಂ" ಎಂದು ಬರೆಯಲ್ಪಟ್ಟಿದೆ. ಈ ಶಕ್ತಿತ್ರಯಗಳು ವೀರಶೈವರ ಷಟ್ಸ್ಥಲ ವಿವರಣೆಯಲ್ಲಿ ವಿಶೇಷವಾಗಿ ಬರುತ್ತವೆ. ಅಲ್ಲದೆ ಈ ಶಾಸನದಲ್ಲಿ ಲಿಂಗ, ಜಂಗಮ, ಪುರಾತನರು, ಮಹಾಮಹೇಶ್ವರ, ಪ್ರಸಾದ, ಗಣೇಶ್ವರರು ಮೊದಲಾದ ಶಬ್ದಗಳು ಮೇಲಿಂದ ಮೇಲೆ ಬಂದಿರುತ್ತವೆ. ಈ ಶಬ್ದಗಳು ವೀರಶೈವಮತ ಗ್ರಂಥಗಳಲ್ಲಿಯೇ ವಿಶೇಷವಾಗಿ ದೊರಕುತ್ತವೆ.

ಇದರಲ್ಲಿ ಇನ್ನೊಂದು ವಿಶೇಷ ಸಂಗತಿಯೇನಂದರೆ, ಹಾಲಬಸವಿದೇವನಿಗೆ ದಾನ ಕೊಟ್ಟ ನಾಗರಾಜ ಮಂತ್ರಿಯು "ಜನಾರ್ದನನ ಭಕ್ತಿಭರ ಪ್ರಭಾವಾನುರಾಗ" ನೆಂದು ವರ್ಣಿಸಲ್ಪಿಟ್ಟಿದ್ದಾನೆ. ಎಂದರೆ ಆತನೊಬ್ಬ ವಿಷ್ಣು ಭಕ್ತವಾಗಿದ್ದನು. ಆದರೂ ಕೂಡ ಶಿವಭಕ್ತಿಯುತವಾದ ಹಾಲಬಸವಿದೇವನಿಗೆ ದಾನವನ್ನು ಕೊಟ್ಟಿರುತ್ತಾನೆ. ಇದರಿಂದ ಬಸವೇಶ್ವರನ ವಂಶಜರು ಆ ಕಾಲಕ್ಕೆ ರಾಜರಲ್ಲಿಯೂ ಎಲ್ಲವರ್ಗದವರಲ್ಲಿಯೂ ಎಷ್ಟು ಆದರಣೀಯವಾಗಿದ್ದರೆಂದು ತಿಳಿದುಬರುತ್ತದೆ.

ಈ ಲೇಖದಿಂದ ತಿಳಿದು ಬರುವ ಮತ್ತೊಂದು ಮಹತ್ವದ ಸಂಗತಿ ಏನೆಂದರೆ ಬಸವೇಶ್ವರನ ಉಲ್ಲೇಖವಿರುವ ಇದರಲ್ಲಿಯ ವಾಕ್ಯಗಳನ್ನು ನೋಡಿದರೆ ಅವನು ವೀರಶೈವ ಮತಸ್ಥಾಪಕನಾಗಿರಲಿಕ್ಕಿಲ್ಲೆಂಬ ಅನುಮಾನವು ದೃಢವಾಗುತ್ತದೆ. ಅವನ ವರ್ಣನಾತ್ಮಕ ವಾಕ್ಯಗಳಲ್ಲಿ ವೀರಶೈವ ಮತಸ್ಥಾಪನಾಚಾರ್ಯ ಅಥವಾ ಈ ಅರ್ಥವನ್ನು ಬೋಧಿಸುವಂಥ ಯಾವ ವಿಶೇಷಣವೂ ಇರುವದಿಲ್ಲ. ಅವನು ಮತಸ್ಥಾಪಕನಾಗಿದ್ದರೆ ಇವನ್ನು ಸೂಚಿ

ಸತರ್ಕ ವಾಕ್ಯಗಳು ಸಹಜವಾಗಿಯೇ ಇದರಲ್ಲಿ ಬರುತ್ತಿದ್ದವು. ಆದರೆ ಇಂಥ ಶಬ್ದಗಳ ಬದಲು ಅತನು "ಪುರಾತನ ಜಂಗಮ ಲಿಂಗೈಕ ಭಕ್ತಿ ನಿರ್ಭರ ಲೀಲಾಸಂಗಂ" ಎಂದು ಮೊದಲಾಗಿ ವರ್ಣಿಸಲ್ಪಟ್ಟಿದ್ದಾನೆ. ಇದರ ಮೇಲಿಂದ ಅವನಕ್ಕಿಂತಲೂ ಮೊದಲು ಶಿವಮತವು ಅಸ್ತಿತ್ವದಲ್ಲಿತ್ತೆಂಬ ಊಹೆಗೆ ಅಸ್ಪದವಾಗುತ್ತದೆ.

## ಬೇರೆ ಐತಿಹಾಸಿಕ ವಿಷಯುಗಳು

ಇನ್ನು ಮೇಲೆ ಈ ಶಿಲಾಶಾಸನದಿಂದ ಕಂಡುಬರುವ ಬೇರೆ ಐತಿಹಾಸಿಕ ವೃತ್ತಾಂತಗಳನ್ನು ನೋಡುವಾ.

ಇದರಲ್ಲಿ ಯಾದವ ಭೂಪಾಲಕನಾದ ಸಿಂಹಣನ ಉಲ್ಲೇಖವಿದೆ. ಇವನು ಈ ರಾಜವಂಶದಲ್ಲಿ ಪ್ರತಾಪಶಾಲಿಯಾದ ಅರಸನು. ಅವನು ೧೨೧೦ ರಿಂದ ೧೨೪೭ರ ವರೆಗೆ ದೇವಗಿರಿಯಲ್ಲಿ ಆಳಿದನು. ಇವನೇ ಮೊದಲು ಉತ್ತರ ಕರ್ನಾಟಕ ಪ್ರಾಂತವನ್ನು ವಶಮಾಡಿಕೊಂಡು ಆಳಿದನೆಂದು ಇತಿಹಾಸದಿಂದ ತಿಳಿದು ಬರುತ್ತದೆ.

ಇವನ ಹಿರಿಯಮಗನಾದ ಕನ್ನರನು ಇಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ. ಇವನು ೧೨೪೭ ರಿಂದ ೧೨೬೦ರ ವರೆಗೆ ಆಳಿದನು. ಈ ಅರಸನ ಕಾಲದಲ್ಲಿಯೇ ಅವನ ಮಂತ್ರಿಯಾದ ನಾಗರಸನು ಪಾಲಬಸವಿದೇವನಿಗೆ ಈ ಶಾಸನವನ್ನು ಕೊಟ್ಟಿದ್ದು ಇರುತ್ತದೆ.

ಈ ಶಿಲಾಲೇಖದಲ್ಲಿ ಆಗ ಕರ್ನಾಟಕಪ್ರಾಂತದಲ್ಲಿ ಮಾಂಡಲಿಕರಾಗಿ ಆಳುತ್ತಿದ್ದಂಥ ಚಿಕ್ಕ, ಅವನ ಮಕ್ಕಳಾದ ಮಲ್ಲಿ ಮತ್ತು ಬೀಚಗಿ ಮತ್ತು ಮಲ್ಲನಮಗನಾದ ಚಾವುಂಡ ಇವರ ಉಲ್ಲೇಖಗಳು ಬಂದಿವೆ. ಇವರ ಉಲ್ಲೇಖವಿದ್ದ ಶಿಲಾಶಾಸನಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸಿಗುತ್ತವೆ. ಅವುಗಳ ಮೇಲಿಂದ ತಿಳಿದುಬರುವದೇನಂದರೆ ಇವರಲ್ಲಿ ಬೀಚಗಿಯೇ ಅತ್ಯಂತ ಪ್ರಸಿದ್ಧನೂ ಶೂರನೂ ಆಗಿದ್ದನು. ಅವನು

ಅನೇಕ ಸಮಾರಾಂಗಣದಲ್ಲಿ ದೇವಗಿರಿ ಯಾದವರಿಗೆ ಸಹಾಯಕನಾಗಿದ್ದನು. ಧಾರವಾಡ ಜಿಲ್ಹಾ ಬ್ಯಾಹಟ್ಟಿಯಲ್ಲಿ ಈತನ ಒಂದು ಶಿಲಾಶಾಸನವಿದ್ದು ಅದರಲ್ಲಿ ಅವನು ರಟ್ಟರನ್ನು ಗೆದ್ದಂತೆ ಉಲ್ಲೇಖವಿದೆ. ಲಕ್ಷ್ಮೇಶ್ವರದಲ್ಲಿ ೧೩೪೭ನೇ ಇಸ್ವಿಯ ಒಂದು ಶಿಲಾಶಾಸನವಿದ್ದು ಇದರಲ್ಲಿ ಇವನು ಯಾದವರ ಮಹಾ ಪ್ರಧಾನನೆಂತಲೂ ಸೇನಾಪತಿಯೆಂತಲೂ ವರ್ಣಿಸಲ್ಪಟ್ಟಿದ್ದಾನೆ. ಇದರಿಂದ ಇವನು ಲಕ್ಷ್ಮೇಶ್ವರದಲ್ಲಿದ್ದು ಅಲ್ಲಿಂದ ಅವನು ಕರ್ನಾಟಕದ ರಾಜ್ಯಭಾರ ಮಾಡುತ್ತಿದ್ದ ಹಾಗೆ ತೋರುತ್ತದೆ. ಅವನ ಅಣ್ಣನಾದ ಮಲ್ಲನು ಮುದುಗುಲದಲ್ಲಿದ್ದು ಕರ್ನಾಟಕದ ಪೂರ್ವಭಾಗವನ್ನು ಆಳುತ್ತಿದ್ದನು. ಈ ಮಲ್ಲ ಅಥವಾ ಮಲ್ಲಿಶೆಟ್ಟಿಯ ಶಿಲಾಶಾಸನವು ಬಸವನ ಬಾಗೇವಾಡಿಯಲ್ಲಿಯೇ ಇದೆ. ಈ ಮಲ್ಲನಮಗನೇ ಚಾವುಂಡನು. ಈ ಚಾವುಂಡನು ಈ ಕವಿಳಾಸಪುರದ ಶಾಸನದಲ್ಲಿ ಶಿವಭಕ್ತನೆಂತಲೂ ಮಂತ್ರಾಂಗ ವಿದ್ಯಾ ಸಮುದ್ರನೆಂತಲೂ ಹೊಗಳಲ್ಪಟ್ಟಿದ್ದಾನೆ. ಈ ಚಾವುಂಡನ ಒಂದು ಶಿಲಾಶಾಸನವು ಸವದತ್ತಿಯ ಸಮೀಪದಲ್ಲಿರುವ ಮುನವಳ್ಳಿಯಲ್ಲಿ ಇದೆ. ಇದರಲ್ಲಿ ಇವನು ಯಾದವರಾಯನ ದಕ್ಷಿಣ ಪ್ರಾಂತವನ್ನೆಲ್ಲ ಆಳುತ್ತಿದ್ದನೆಂದು ಉಲ್ಲೇಖವಿದೆ. ಇವನು ತನ್ನ ಹಿರಿಯಪ್ಪನಾದ ಬೀಚಣಗಿಯು ಆಳುತ್ತಿದ್ದ ಲಕ್ಷ್ಮೇಶ್ವರದಲ್ಲಿಯೇ ಆಳುತ್ತಿರಬಹುದು.

ಈ ಕವಿಳಾಸಪುರದ ಶಿಲಾಶಾಸನದಲ್ಲಿ ನಾಗರಸನು ಈ ಚಾವುಂಡನ ಮಿತ್ರನೆಂದೂ ವಾಣಸವಂಶದವನೆಂದೂ ರಟ್ಟರಾಜ್ಯ ಪ್ರತಿಷ್ಠಾಚಾರ್ಯನೆಂತಲೂ ಮಹಾಪ್ರಧಾನನೆಂತಲೂ ವರ್ಣಿಸಲ್ಪಟ್ಟಿದ್ದಾನೆ. ಶಿಲಾಲೇಖಗಳಲ್ಲಿ ಬೀಚಣಗಿಯು ರಟ್ಟರಾಜ್ಯವನ್ನು ಕೈವಶ ಮಾಡಿಕೊಂಡುದ್ದರ ಉಲ್ಲೇಖವಿದೆ. ಆದರೆ ಈ ನಾಗರಸನು ಈ ರಾಜ್ಯದ ಪ್ರತಿಷ್ಠಾಪಕನೆಂದು ಇಲ್ಲಿ ಹೇಳಲ್ಪಟ್ಟಿದ್ದಾನೆ. ಆದ್ದರಿಂದ ಈತನು ರಟ್ಟ ಮನೆತನದವರೊಬ್ಬರಿಗೆ [illegible] ಹಾಕಿ ಕೊಟ್ಟಿರಬಹುದಾಗಿ ತೋರುತ್ತದೆ. ಆದರೆ ರಟ್ಟ ಮನೆತನದ ಶಿಲಾಶಾಸನಗಳು ೧೨೩೦ ರ ತರುವಾಯ ಎಲ್ಲಿಯೂ ಸಿಗುವದಿಲ್ಲ. ಆದ್ದರಿಂದ ಇದರ ಮುಂದೆ ಅವರು ಸ್ವತಂತ್ರರಾಗಿ ಆಳಿರಲಿಕ್ಕಿಲ್ಲೆಂದು ತೋರುತ್ತದೆ.

ಹಾಲಬಿಸವಿದೇವರಿಗೆ ಸಿದ್ಧಾರ್ಥಿ ಸಂವತ್ಸರದ ಚೈತ್ರ ಬಹುಳ ಅಮಾವಾಸ್ಯೆ ಸೋಮವಾರ ಸೂರ್ಯ ಗ್ರಹಣದಲ್ಲಿ ಪುಲಿಗೆರೆಯ ಸೋಮನಾಥ ದೇವರ ಸನ್ನಿಧಿಯಲ್ಲಿ ದಾನ ಕೊಟ್ಟ ಬಗ್ಗೆ ಈ ಶಾಸನದಲ್ಲಿ ಹೇಳಲ್ಪಟ್ಟಿದೆ. ಚೌಂಡರಸರು ಹುಲಗಿರಿಯಲ್ಲಿ ಆಳುತ್ತಿದ್ದರಿಂದ ಮಹಾಪ್ರಧಾನವಾದ ನಾಗರಸನು ಅಲ್ಲಿಗೆ ಬಂದಾಗ್ಗೆ ಹಾಲಬಸವಿದೇವನನ್ನು ಅಲ್ಲಿಯೇ ಕರಿಸಿಕೊಂಡು ಸೋಮನಾಥ ದೇವರ ಸನ್ನಿಧಿಯಲ್ಲಿ ಈ ದಾನವನ್ನು ಕೊಟ್ಟಿರಬಹುದೆಂದು ತೋರುತ್ತದೆ

ದೇವರಿಗೆ ದಾನ ಕೊಟ್ಟ ವಿಷಯಗಳನ್ನು ನೋಡಿದರೆ ಅವೆಲ್ಲವೂ ಆಗಿನ ಕಾಲದ ನಾನಾ ಬಗೆಯ ಸುಂಕಗಳಿದ್ದ ಹಾಗೆ ತೋರುತ್ತದೆ. ಇದರ ಮೇಲಿಂದ ಈ ಕವಿಳಾಸಪುರವು ಆಗಿನ ಕಾಲಕ್ಕೆ ಒಂದು ದೊಡ್ಡ ವ್ಯಾಪಾರೀ ಪಟ್ಟಣವಾಗಿರಬಹುದೆಂದು ತೋರುತ್ತದೆ. ಇಂಥ ವ್ಯಾಪಾರಿ ಪಟ್ಟಣಗಳಲ್ಲಿ ಶೆಟ್ಟರ ಯಾಜಮಾನ್ಯವು ಹಿಂದಿನ ಕಾಲಕ್ಕೆ ವಿಶೇಷವಾಗಿರುವದು ಎಲ್ಲರಿಗೂ ಗೊತ್ತಿದೆ. ಇವರ ಅಧಿಕಾರವು ಸುಂಕಗಳ ಮೇಲೆಯೂ ಇರುತ್ತಿದ್ದದರಿಂದ ನಾಗರಸ ಮಹಾ ಪ್ರಧಾನನು ಹಾಲಬಸವಿದೇವನಿಗೆ ಕವಿಳಾಸಪುರದ ಸುಂಕ ಬಾಬುಗಳನ್ನು ಅಲ್ಲಿಯ ಚೌಡಿಶೆಟ್ಟಿಯರ ನಿಯಮದಿಂದ ದಾನ ಕೊಟ್ಟಿರಬಹುದು.

## ಶಿಲಾಲೇಖದ ಅಳತೆ

ಈ ಶಿಲಾಶಾಸನವು ಹಾಲ ಶಂಕರಲಿಂಗನ ಗುಡಿಯ ಮುಂಗೋಡೆಗೆ ಮೂಡಲ ಮುಖವಾಗಿ ನಿಲ್ಲಿಸಲ್ಪಟ್ಟಿದೆ. ಇದರ ಅಳತೆ :- ಎತ್ತರ ೯ ಗೇಣು ೧೦ ಅಂಗುಲ ಅಗಲ ೧ ಗೇಣು ೮ ಅಂಗುಲ, ದಪ್ಪ ೧ ಗೇಣು ೩ ಅಂಗುಲ. ಮೇಲೆ ಚಿತ್ರವಿರುವಸ್ಥಳ ೧ ಗೇಣು ೪ ಅಂಗುಲ, ಬಳಿಕ ಲೇಖವಿರುವಸ್ಥಳ ೬ ಗೇಣು ೮ ಅಂಗುಲ, ಕೆಳಗೆ ತೆರವಿದ್ದಸ್ಥಳ ೧ ಗೇಣು ೧೦ ಅಂಗುಲ.

## ಶಿಲಾಶಾಸನದ ಮಹತ್ವ

[illegible]ಗಳಲ್ಲಿ [illegible] ವಿದ್ವಾಂಸರ ವರೆಗೆ ಈ ಶಿಲಾಶಾಸನದಲ್ಲಿಯ ವಿ[illegible] ಏನೂ ಮಹತ್ವ[illegible] ಇದರೆ

ಈಗಿನ ಕಾಲಕ್ಕೆ ಐತಿಹಾಸಿಕ ದೃಷ್ಟಿಯಿಂದ ಕರ್ನಾಟಕದಲ್ಲಿ ಆಗಿ ಹೋಗಿರುವ ಮಹಾಪುರುಷರ ಚರಿತ್ರೆಗಳನ್ನು ಶೋಧಿಸಿ ಯಥಾರ್ಥ ವಿಷಯಗಳನ್ನು ನಿರೂಪಿಸುವದು ಅವಶ್ಯವಾಗಿರುತ್ತದೆ. ಈ ರೀತಿಯಿಂದ ಬಸವೇಶ್ವರನ ಚರಿತ್ರೆಯನ್ನು ಬರೆಯುವವರಿಗೆ ಈ ಶಿಲಾಶಾಸನವು ಬಹಳಮಹತ್ವದ್ದಿರುತ್ತದೆ. ಕರ್ನಾಟಕದಲ್ಲಿ ಬಿಜ್ಜಳನ ಶಿಲಾಶಾಸನವು ಅನೇಕವಿರುತ್ತವೆ. ಅವುಗಳಲ್ಲಿ ಅವನ ಮಾಂಡಲಿಕರ ಮತ್ತು ಅವನ ಅಧಿಕಾರಿಗಳ ಅನೇಕ ಹೆಸರುಗಳು ಉಪಲಬ್ಧವಿದ್ದರೂ ಬಸವೇಶ್ವರನ ಉಲ್ಲೇಖವು ಮಾತ್ರ ಅವುಗಳಲ್ಲಿ ಏನೂ ಇಲ್ಲ. ಇದು ಆಶ್ಚರ್ಯಕರವಾಗಿದೆ. ಇದರಿಂದ ಬಿಜ್ಜಳನ ಕಾಲದಲ್ಲಿ ಬಸವೇಶ್ವರನು ಇದ್ದ ಬಗ್ಗೆ ಮತ್ತು ಅವನು ಅದನ ಮಂತ್ರಿಯಾಗಿದ್ದ ಬಗ್ಗೆ ಸಹ ಅನುಮಾನವು ಉತ್ಪನ್ನವಾಗುತ್ತದೆ. ಫ್ಲೀಟಸಾಹೇಬರು ಒಂದೆಡೆಗೆ ವೀರಶೈವ ಧರ್ಮಪ್ರವರ್ತಕನು ಬಸವೇಶ್ವರನಿರದೆ ಏಕಾಂತದ ರಾಮಯ್ಯನಿರಬಹುದೆಂಬು ಬರೆದಿದ್ದಾರೆ. ಈ ತರದ ವಿಚಾರಗಳು ವಿದ್ವಜ್ಜನರಲ್ಲಿ ಇರುವದರಿಂದ ಇವುಗಳನ್ನು ದೂರ ಮಾಡಲಿಕ್ಕೆ ಈ ಶಿಲಾಶಾಸನವು ಬಹು ಮಟ್ಟಿಗೆ ಸಹಾಯಕವಾಗದೆ. ಈ ದೃಷ್ಟಿಯಿಂದ ಇದರ ಮಹತ್ವವು ಬಹಳವಿರುತ್ತದೆ.

( ಶಿವಾನುಭವ ಸಂಪುಟ ೩ ಸಂಚಿಕೆ ೯ ರಿಂದ )

# ವೀರಶೈವ ವಚನಕಾರರ ಕಾಲ

ನಾವು ಹೋದ ತಿಂಗಳಿನ ಸಂಚಿಕೆಯಲ್ಲಿ ಬಿಜ್ಜಳನ ಕಾಲದಲ್ಲಿ ಆವಾವ ಶಿವಶರಣರುದ್ಭವಿಸಿದರೆಂಬುದನ್ನು ನಿರ್ದೇಶಿಸಿ ಈ ವಿಷಯದ ವಿವೇಚನೆಗೋಸ್ಕರ ಅವನ ಆಳಿಕೆಯಲ್ಲಿ ಮೂರು ವಿಭಾಗಗಳನ್ನು ಕಲ್ಪಿಸಿದೆವು. ಅವು ೧೧೪೮ ರಿಂದ ೧೧೫೬, ೧೧೫೬ ರಿಂದ ೧೧೬೨ ಮತ್ತು ೧೧೬೨ ರಿಂದ ೧೧೬೭ ಹೀಗೆ ಇದ್ದದ್ದು ವಾಚಕರ ಸ್ಮರಣೆಯಲ್ಲಿರಬಹುದು. ಇವುಗಳಲ್ಲಿ ಮೊದಲನೆಯ ಕಾಲದಲ್ಲಿ ರೇವಣಸಿದ್ಧನು ತರ್ದೇವಾಡಿ ನಾಡಿನಲ್ಲಿ ಅತ್ಯಂತ ಮಹತ್ತರವಾದ ಧಾರ್ಮಿಕ ಚಟುವಟಿಕೆಗಳನ್ನೆಬ್ಬಿಸಿದನೆಂತಲೂ ಅಲ್ಲಿಂದ ಚೋಳ ನಾಡಿಗೆ ಹೋಗಿ ಅಲ್ಲಿ ೨ನೆಯ ಕುಲೋತ್ತುಂಗ ಚೋಳನಲ್ಲಿ ನಿಂತುಕೊಂಡು ಅನೇಕ ಮಹತ್ಕೃತ್ಯಗಳನ್ನು ಮಾಡಿದನೆಂತಲೂ ವಿಶದಪಡಿಸಿದ್ದೇವೆ. ತರ್ದೇವಾಡಿ ನಾಡಿನಲ್ಲಿದ್ದಾಗ ಇವನ ಪ್ರಭಾವದಿಂದ ಕೊಲ್ಲಾಪುರದಲ್ಲಿ ಗೋರಕ್ಷನು, ಹಾವಿನಹಾಳ ಗ್ರಾಮದಲ್ಲಿ ಕಲ್ಲಯ್ಯನು, ಇವನ ಮಗನಾದ ರುದ್ರಮುನೀಶ್ವರನು, ಮುಂದೆ ಇವನ ಆಶೀರ್ವಾದ ಬಲದಿಂದ ಬಸವೇಶ್ವರನಲ್ಲಿ ಬಹು ಪ್ರಖ್ಯಾತಿಯನ್ನು ಹೊಂದಿದ ಸಿದ್ಧರಾಮೇಶ್ವರನು ಹೀಗೆ ಅನೇಕ ಶಿವಶರಣರು ಉದಯಿಸಿ ವೀರಶೈವ ಧರ್ಮ ಚಾರಿತ್ರ್ಯದಲ್ಲಿ ಬಹು ಪ್ರಖ್ಯಾತಿಯನ್ನು ಹೊಂದಿರುತ್ತಾರೆ. ಈ ಮಹಾಪುರುಷರು ಮಾಡಿದ ಕಾರ್ಯಗಳ ಬಗ್ಗೆ ಹೋದ ಸಂಪುಟದ ಕೆಲವು ಸಂಚಿಕೆಗಳಲ್ಲಿ ಅನೇಕ ಸಲ ವಿಸ್ತರಿಸಿದ್ದೇವೆ. ನಾವು ಹೋದ ಸಂಚಿಕೆಯಲ್ಲಿ ರೇವಣಸಿದ್ಧನು ಆವ ಚೋಳ ರಾಜರಲ್ಲಿ ಇರಬಹುದೆಂಬ ವಿಷಯವನ್ನು ಮುಖ್ಯವಾಗಿ ಪ್ರಸ್ತಾಪಿಸಿ ಅವನ ಬಗ್ಗೆ ಅಲ್ಲಿಯ ಕೆಲವು ಸಂದರ್ಭಗಳನ್ನು ವಿವೇಚಿಸಿದ್ದೇವೆ. ಈಗಿನ ನಮ್ಮ ಈ ಲೇಖದಲ್ಲಿ ಅವನ ಚರಿತ್ರೆಯಲ್ಲಿ ತೋರುವ ಬೇರೆ ಕೆಲವು ವಿಷಯಗಳನ್ನು ಕುರಿತು ಐತಿಹಾಸಿಕ ದೃಷ್ಟಿಯಿಂದ ವಿವೇಚಿಸಲೆಣಿಸಿದ್ದೇವೆ.

## ಕದಂಬ ರಾಜ್ಯರಲ್ಲಿ ರೇವಣಸಿದ್ಧೇಶ್ವರನು

ಹರಿಹರನು ತನ್ನ ರಗಳೆಯಲ್ಲಿ ಮಾಸನೂರಿನಿಂದ ಜಯಂತಿಪುರಕ್ಕೆ ಹೋಗಿ ಅಲ್ಲಿ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಮನ್ನಣೆಯನ್ನು ಹೊಂದಿದನೆಂದು ವರ್ಣಿಸಿರುತ್ತಾನೆ. (ಹರಿಹರನ ರಗಳೆಗಳು ಭಾಗ ೨, ಪುಟ ೨೫ ನೋಡಿರಿ.) ಈ ಕಥಾನಕವು ರೇವಣಸಾಂಗತ್ಯ, ರೇವಣಸಿದ್ಧೇಶ್ವರ ಪುರಾಣ ಇವುಗಳಲ್ಲಿಯೂ ಅವನ ಬಗ್ಗೆ ಹೇಳಲ್ಪಟ್ಟಿದೆ. ಈಗ ಈ ರಾಜನಾರೆಂಬುದನ್ನು ನಾವು ಕಂಡುಹಿಡಿಯುವದು ಅವಶ್ಯವಿರುತ್ತದೆ.

ಜಯಂತಿಪುರವೆಂದರೆ ಈಗ ಶಿರ್ಶಿ ತಾಲೂಕಿನಲ್ಲಿರುವ ಬನವಾಸಿ ಎಂದು ಪ್ರಸಿದ್ಧವಿದೆ. ರೇವಣಸಿದ್ಧೇಶ್ವರನ ಕಾಲದಲ್ಲಿ ಇಲ್ಲಿ ಕದಂಬ ವಂಶದ ರಾಜರು ಆಳುತ್ತಿದ್ದರು. ಅದ್ದರಿಂದ ರೇವಣಸಿದ್ಧೇಶ್ವರನು ಈ ವಂಶದ ರಾಜನಲ್ಲಿಗೆ ಹೋಗಿ ಅವನಿಂದ ಮನ್ನಣೆಯನ್ನು ಹೊಂದಿರಬಹುದೆಂಬ ಅನುಮಾನವು ಉತ್ಪನ್ನವಾಗುತ್ತಿದೆ.

ಹರಿಹರನು ಈತನು ವಿಕ್ರಮಾರ್ಜುನನೆಂದು ತನ್ನ ರಗಳೆಯಲ್ಲಿ ಹೇಳುತ್ತಾನೆ. ಕದಂಬ ವಂಶದಲ್ಲಿ ವಿಕ್ರಮನೆಂಬುವನು [illegible] ಎಂಬ ರಾಜನ ಐದು ಜನ ಮಕ್ಕಳಲ್ಲಿ ಒಬ್ಬನಾಗಿದ್ದನೆಂದು ಶಿಲಾಶಾಸನಗಳಿಂದ ತಿಳಿಯುತ್ತಿದೆ. ಪ್ರೊ. ಕೆ. ಜಿ. ಕುಂದಣಗಾರ ಎಂ.ಎ., ಕನ್ನಡ ಪ್ರೊಫೆಸರ ರಾಜಾರಾಮ ಕಾಲೇಜ, ಕೊಲ್ಹಾಪುರ ಇವರು "ಹರಿಹರದೇವ" ಎಂಬ ತಮ್ಮ ಗ್ರಂಥದ ೪೫ನೆಯ ಪುಟದಲ್ಲಿ ಬನವಾಸಿಯ ಕದಂಬ ವಂಶದಲ್ಲಿದ್ದ ಜಯಸಿಂಹ ರಾಯನ ಮಗನು ಈತನಾಗಿರಬೇಕೆಂದು ನಾವು ತಿಳಿಯಬೇಕಾದರೆ, ಈತನು ಇಲ್ಲಿ ಪಟ್ಟವೇರಿದಂತೆ ಐತಿಹಾಸಿಕ ಆಧಾರಗಳು ದೊರೆಯುವದಿಲ್ಲವಾದ್ದರಿಂದ ಚಾಳುಕ್ಯವಂಶದ ನೂರ್ಮ್ಮಡಿ ತೈಲಪ ಅಥವಾ ಮೂರನೆಯ ತೈಲಪ ಇವನನ್ನೇ ಹರಿಹರನು ವಿಕ್ರಮನೆಂದು ಸಂಬೋಧಿಸಿರಬಹುದೆಂದು ಅವರು ಊಹಿಸಿದ್ದಾರೆ. ಅಂದರೆ ಯಾವ ಚಾಳುಕ್ಯ ರಾಜನ ಕೈಕೆಳಗೆ ಬಿಜ್ಜಳನು ಕೆಲವು ವರ್ಷ ಮಾಂಡಲಿಕನಾಗಿ ಆಳಿ ಮುಂದೆ ಅವನನ್ನು ಪದಚ್ಯುತ ಮಾಡಿದನೋ ಆತನ ರಾಜಧಾನಿಯಾದ ಕಲ್ಯಾಣ ನಗರಿಗೆ ರೇವಣಸಿದ್ಧನು ಹೋಗಿ ಈ

ಚಾಳುಕ್ಯನಿಂದ ಮನ್ನಣೆ ಪಡೆದನೆಂದು ನಾವು ತಿಳಿಯಬೇಕಾಗುತ್ತದೆ. ಆದರೆ ರೇವಣಸಿದ್ಧೇಶ್ವರನ ಚರಿತ್ರೆಯನ್ನು ನಾವು ಹಿಂದೆ ವಿಮರ್ಶಿಸುವಲ್ಲಿ ಕಲ್ಯಾಣ ನಗರಿಗೆ ಆತನು ಹೋಗಿ ಹೀಗೆ ಚಾಲುಕ್ಯನಲ್ಲಿ ಪ್ರಖ್ಯಾತಿಯನ್ನು ಪಡೆದಿದ್ದು ಸಂಭವನೀಯ ತೋರುವದಿಲ್ಲವೆಂದು ಬರೆದಿದ್ದೇವೆ. ಅವನು ಒಮ್ಮೆ ಮಾತ್ರ ಗುಪ್ತವೇಷದಿಂದ ಹೋಗಿ ಕೆಲವು ಕಾಲ ಅಲ್ಲಿ ಕಳೆದನೆಂದು ಅವನ ಚರಿತ್ರೆಗಳು ಹೇಳುತ್ತಿವೆ. ಅಲ್ಲದೆ ಅವನು ಜಯಂತಿಪುರ ಎಂದರೆ ಬನವಾಸಿಗೆ ಹೋಗಿ ರಾಜನಿಂದ ಮನ್ನಣೆ ಹೊಂದಿದನೆಂದು ಹರಿಹರನು ಸ್ಪಷ್ಟವಾಗಿ ಆ ಪಟ್ಟಣವನ್ನು ತನ್ನ ರಗಳೆಯಲ್ಲಿ ಹೇಳುತ್ತಾನೆ. ಅದರಂತೆಯೇ ಅವನ ಎಲ್ಲ ಪುರಾಣಗಳೂ ಹೇಳುತ್ತವೆ. ಅದು ಕಲ್ಯಾಣವೆಂದು ಹೇಳುವದಿಲ್ಲ. ಆದ್ದರಿಂದ ಹರಿಹರನು ಹೇಳುವ ವಿಕ್ರಮನು ಪ್ರೊ. ಕುಂದಣಗಾರ ಇವರು ಹೇಳುವಂತೆ ಪಟ್ಟಿಯಿಂದಂತೆ ಐತಿಹಾಸಿಕ ಆಧಾರಗಳು ಈವರೆಗೆ ದೊರೆಯದಿಲ್ಲವೆಂದು ತಿಳಿದರೂ ಕೂಡ ನಿಶ್ಚಿತವಾಗಿ ಐತಿಹಾಸಿಕ ಸಂಶೋಧನಗಳಾಗುವವರೆಗೆ ರೇವಣಸಿದ್ಧನು ಕದಂಬ ರಾಜನಲ್ಲಿಗೆ ಹೋದನೆಂಬುದನ್ನು ಪೂರ್ಣವಾಗಿ ಅಲ್ಲಗಳೆಯಲು ಬರಲಾರದು. ಆದರೆ ಈ ಕಾಲದಲ್ಲಿ ಜಯಂತಿ ಪಟ್ಟಣದಲ್ಲಿ ಮಲ್ಲಿಕಾರ್ಜುನನೆಂಬವನು ಆಳುತ್ತಿದ್ದನೆಂದು ಶಿಲಾಶಾಸನಗಳಿಂದ ವಿಶ್ವಸನೀಯವಾಗಿ ತಿಳಿದುಬರುತ್ತದೆ. ಅವನ ಒಂದು ಶಿಲಾಶಾಸನವು ಅವನು ಆಳಿದ್ದು ೧೧೩೨ ಎಂತಲೂ ಮತ್ತೊಂದು ೧೧೫೫ ಎಂತಲೂ ಹೇಳುತ್ತಿವೆ. ಬಿಜ್ಜಳನು ಈ ಕಾಲದಲ್ಲಿ ಅಸ್ತಿತ್ವದಲ್ಲಿರುವದರಿಂದ ಈ ಮಲ್ಲಿಕಾರ್ಜುನನಲ್ಲಿಯೇ ರೇವಣಸಿದ್ಧೇಶ್ವರನು ಹೋಗಿರಬೇಕೆಂದು ನಮಗೆ ತೋರುತ್ತಿದೆ. ವಿಕ್ರಮಾದಿತ್ಯನೆಂದು ಹರಿಹರನು ಬರೆದದ್ದು ತಪ್ಪಿರಬಹುದು.

ರೇವಣಸಿದ್ಧೇಶ್ವರನು ಈ ಪ್ರಕಾರ ಈ ಬನವಾಸಿ ನಾಡಿನಲ್ಲಿ ಹೋಗಿದ್ದನೋ ಹೇಗೆ ಎಂಬುದನ್ನು ನಿಶ್ಚಯಿಸಲು ಹರಿಹರನ ರಗಳೆಯ ಹೊರತಾಗಿ ಬೇರೆ ಏನಾದರೂ ಪ್ರತ್ಯಂತರ ಆಧಾರವು ಇದೆಯೋ ಹೇಗೆ ಎಂಬುದನ್ನು ನಾವು ಪರೀಕ್ಷಿಸಿದಲ್ಲಿ ಆ ಬಗ್ಗೆ ಒಂದು ಮಹತ್ವದ ಪುರಾವೆಯು ನಮಗೆ ದೊರೆಯುತ್ತದೆ. ಅದಾವುದೆಂದರೆ ಈ ಪ್ರಾಂತದಲ್ಲಿ ರೇವಣಸಿದ್ಧೇಶ್ವರನ ಹೆಸರಿಗೆ ಸಂಬಂಧಿಸಿದ ಒಂದು ಪುಣ್ಯಕ್ಷೇತ್ರವು ಇದ್ದದ್ದೇ ಇದೆ. ಯಾವದಾ

ವರೂ ಒಂದು ಸ್ಥಾನವು ಒಬ್ಬ ಮಹಾಪುರುಷನ ಹೆಸರಿಗೆ ಸಂಬಂಧಪಟ್ಟು ಜನರಲ್ಲಿ ಅದು ಪ್ರಸಿದ್ಧವಾಗಿದ್ದರೆ ಅದು ಅವನಿಗೆ ಸಂಬಂಧಿಸಿದ್ದೆಂದು ಊಹಿಸಲು ಆವ ಪ್ರತ್ಯವಾಯವೂ ಇರಲಾರದು. ರೇವಣಸಿದ್ಧೇಶ್ವರನ ಇಂಥ ಸ್ಥಾನವು ಹಾವೇರಿಯ ಹತ್ತಿರ ಕಬ್ಬೂರು ಎಂಬ ಗ್ರಾಮದಲ್ಲಿ ಈಗಲೂ ಇದ್ದುದು ಕಂಡುಬರುತ್ತಿದೆ. ಈ ಕ್ಷೇತ್ರದ ಉಲ್ಲೇಖವು ಶಿವಾನುಭವ ಸಂಪುಟ ೧೩ ಸಂಚಿಕೆ ೧ ಪುಟ ೩೭ ಇದರಲ್ಲಿ ಬಂದಿದೆ. ಈ ಸಂಚಿಕೆಯಲ್ಲಿಯ ಲೇಖನವನ್ನು ಶ್ರೀ ಗುರುಪಾದ ಸ್ವಾಮಿಗಳು ಹಿರೇಮಠ ಶ್ರೀ ಧರ್ಮಾಶ್ರಮ ಮು. ಮಲ್ಲೂರು ಇವರು ಬರೆದಿದ್ದು ಅದರಲ್ಲಿ ಅವರು ಹಾವೇರಿಯಿಂದ ಎಂಟು ಮೈಲಿನ ಮೇಲೆ ಕಬ್ಬೂರು ಎಂಬ ಗ್ರಾಮವಿದ್ದು ಇದಕ್ಕೆ ಸಮೀಪವಾಗಿ "ರೇವಣಸಿದ್ಧಗಿರಿ" ಎಂಬ ಹೆಸರಿನ ಗಿರಿ ಇರುವದನ್ನು ಹೇಳಿದ್ದಾರೆ. ಇದಕ್ಕೆ "ರೇವಣಸಿದ್ಧೇಶ್ವರನ ಗುಡ್ಡ" "ಸಿದ್ಧೇಶ್ವರನ ಗುಡ್ಡ" "ಸಿದ್ಧನ ಗುಡ್ಡ" ಎಂಬ ಹೆಸರುಗಳಿರುವವೆಂತಲೂ ಇಲ್ಲಿಗೆ ಬಸವೇಶ್ವರನ ಪುತ್ರನಾದ ಸಂಗಮನಾಥನು ಆಗಮಿಸಿ ವಾಸಮಾಡಿದನೆಂತಲೂ ಬಂಕಾಪುರ ತಾಲೂಕು ಶಿಗ್ಗಲಿಯಲ್ಲಿ ದೊರೆತ ಒಂದು ಪುರಾಣದ ಆಧಾರದಿಂದ ಅವರು ಬರೆದಿದ್ದಾರೆ. ಪುರಾತನ ಕಾಲದಲ್ಲಿ ಪ್ರಸಿದ್ಧಿಗೆ ಬಂದ ಶಿವಶರಣರಿಗೆ ಸಂಬಂಧಪಟ್ಟ ಸ್ಥಾನಗಳೆಲ್ಲ ಪುನೀತವಾದವುಗಳೆಂದು ಜನರು ಭಾವಿಸಿ ಅವರ ಸ್ಮರಣಾರ್ಥವಾಗಿ ಹೀಗೆ ಗುಡಿಗಳನ್ನು ಅಲ್ಲಿ ಸ್ಥಾಪಿಸುವದುಂಟು. ಮತ್ತು ಭಾವಿಕ ಜನರು ಅಲ್ಲಿ ಜಾತ್ರೆಗಳನ್ನು ನೆರವೇರಿಸುತ್ತಿರುವದೂ ಉಂಟು ಇದು ಬಹು ಕಾಲದಿಂದಲೂ ಹಿಂದುಸ್ಥಾನದಲ್ಲೆಲ್ಲ ಪ್ರಚಲಿತವಿರುವ ಪದ್ಧತಿಯಾಗಿದೆ. ಸಾವಿರಾರು ವರ್ಷಗಳಾಗಿ ಹೋದರೂ ಅನೇಕ ರಾಜ್ಯಕ್ರಾಂತಿಗಳಾದರೂ ಪುಣ್ಯಪುರುಷರ ಸ್ಥಳಗಳ ಹೆಸರುಗಳು ಬದಲಾಗಿರುವದಿಲ್ಲ. ಕೃಷ್ಣ, ರಾಮ, ಶಂಕರಾಚಾರ್ಯ, ಮಧ್ವಾಚಾರ್ಯ, ಬಸವ, ಸಿದ್ಧರಾಮ ಇವರ ಕ್ಷೇತ್ರಗಳು ಅವ್ಯಾಹತವಾಗಿ ಅವರ ಹೆಸರುಗಳಿಂದಲೇ ಇನ್ನೂ ನಡೆದು ಬಂದಿವೆ. ಅದ್ದರಿಂದ ಈ ಸ್ಥಳಗಳು ಆ ಮಹಾನುಭಾವರ ಐತಿಹಾಸಿಕ ಅಸ್ತಿತ್ವವನ್ನು ಸೂಚಿಸುತ್ತವೆ. ಮತ್ತು ಅವರು ಅಲ್ಲಿ ಇದ್ದರೆಂದು ತಿಳಿಯಲೂ ಸಾಧನೀಭೂತವಾಗಿದೆ. ಈ ಆಧಾರಗಳು ಸಂಪೂರ್ಣ ತ್ಯಾಜ್ಯವೆಂದು ಹೇಳಲು ಬರಲಾರದು. ಆದ್ದರಿಂದ ಪುಣ್ಯಕ್ಷೇತ್ರಗಳ ಹೆಸರುಗಳು

ಯಾವ ಮಹಾತ್ಮರನ್ನು ನಿರ್ದೇಶಿಸುತ್ತವೆಯೋ ಅವರು ಅಲ್ಲಿ ಕೆಲಕಾಲವಾದರೂ ವಾಸಿಸಿರಬಹುದೆಂದು ನಾವು ಅನುಮಾನ ಮಾಡಬಹುದಾಗಿದೆ.

ಹಾವೇರಿ ಪಟ್ಟಣವಿದ್ದ ಪ್ರಾಂತ ಭಾಗವು ಮೊದಲಿನ ಕಾಲದಲ್ಲಿ ಬನವಾಸಿ ನಾಡಿನಲ್ಲಿ ಸೇರ್ಪಡೆಯಾಗಿತ್ತು. ಕಬ್ಬೂರು ಬನವಾಸಿಯಿಂದ ಕೆಲವು ಮೈಲು ಮಾತ್ರ ದೂರವಿದ್ದು ರೇವಣಸಿದ್ಧೇಶ್ವರನ ಸ್ಥಾನವಿದ್ದುದರಿಂದ ಅವನು ಹರಿಹರನು ಹೇಳುವಂತೆ ಬನವಾಸಿಯ ಪ್ರಾಂತಕ್ಕೆ ಬಂದಿದ್ದನೆಂತಲೂ ಆಗ ಆಳುತ್ತಿದ್ದ ಕದಂಬ ರಾಜನಲ್ಲಿ ತನ್ನ ಪ್ರಭಾವವನ್ನು ತೋರಿಸಿರಬಹುದೆಂತಲೂ ಅನುಮಾನವನ್ನು ಮಾಡಲಿಕ್ಕೆ ಅಡ್ಡಿ ತೋರುವದಿಲ್ಲ.

ಆದರೆ ಈ ರಾಜನ ಹೆಸರು ಮಾತ್ರ ಅವುದಿರಬಹುದೆಂಬುದರಲ್ಲಿ ಸಂದೇಹವು ಉತ್ಪನ್ನವಾಗುತ್ತದೆ. ಜಜ್ಜಳನಿಗೆ ಸಮಕಾಲೀಕವಾಗಿ ಇಲ್ಲಿ ರಾಜ್ಯವಾಳಿದವನಾದ ಮಲ್ಲಿಕಾರ್ಜುನನೇ ಇವನು ಇರಬೇಕೆಂದು ನಮಗೆ ತೋರುತ್ತದೆ. ಹರಿಹರನು ಇವನು ವಿಕ್ರಮನೆಂದು ತನ್ನ ರಗಳೆಯಲ್ಲಿ ನಿರ್ದೇಶಿಸುವಲ್ಲಿ ತಪ್ಪಾಗಿರಬಹುದು. ರೇವಣಸಿದ್ಧೇಶ್ವರ ಪುರಾಣದಲ್ಲಿ ಈ ವಿಕ್ರಮನು ''ಚಾಲುಕ್ಯ'' ಎಂದು ಬರೆದಿದ್ದು ಇದೂ ತಪ್ಪು. ಯಾಕೆಂದರೆ ಚಾಲುಕ್ಯರು ಜಯಂತಿ ಪಟ್ಟಣದಲ್ಲಿ ರಾಜ್ಯಭಾರ ಮಾಡಿದ್ದು ಕಂಡುಬರುವದಿಲ್ಲ. ಈ ಪುರಾಣಗಳು ರೇವಣಸಿದ್ಧೇಶ್ವರನ ತರುವಾಯ ೧೫೦-೨೦೦ ವರ್ಷಗಳ ಮೇಲೆ ಆಗಿನ ಜನರ ಹೇಳಿಕೆಗಳ ಮೇಲಿಂದ ಬರೆಯಲ್ಪಟ್ಟಿರುವದರಿಂದ ಇಂಥ ತಪ್ಪುಗಳಾಗುವ ಸಂಭವವಿದೆ. ಇವುಗಳನ್ನು ನಮಗೆ ಈಗ ದೊರೆತ ನಿಶ್ಚಿತ ಐತಿಹಾಸಿಕ ಆಧಾರಗಳ ಮೇಲಿಂದ ಚರ್ಚಿಸಿ ಅವುಗಳಲ್ಲಿ ಆವಶ್ಯಕ ತಿದ್ದುಪಡೆಗಳನ್ನು ನಾವು ಮಾಡಬೇಕಾಗುತ್ತಿದೆ.

ರೇವಣಸಿದ್ಧೇಶ್ವರನ ಹೆಸರು ಬನವಾಸಿ ನಾಡಿನಲ್ಲಿ ಹೀಗೆ ನೆಲೆಗೊಳ್ಳಬೇಕಾದರೆ ಅವನು ಕೆಲವು ಕಾಲ ಅಲ್ಲಿ ವಾಸಿಸಲಿಕ್ಕೆ ಬೇಕು. ಇಲ್ಲಿಯೂ ಅವನು ಧರ್ಮಜಾಗ್ರತಿಯನ್ನುಂಟುಮಾಡಿರಬೇಕು. ಈ ಪ್ರಕಾರ ರೇವಣಸಿದ್ಧೇಶ್ವರನು ಚೋಳಮಂಡಲದಲ್ಲಿ, ಆಮೇಲೆ ಉತ್ತರ ಕರ್ನಾಟಕವಾದ ತರ್ದೇವಾಡಿ ನಾಡಿನಲ್ಲಿ, ಆಮೇಲೆ ಮಧ್ಯ ಕರ್ನಾಟಕವಾದ ಬನವಾಸಿ ನಾಡಿ

ನಲ್ಲಿ, ಧರ್ಮಜಾಗ್ರತಿಯ ಕಾರ್ಯಗಳನ್ನು ಮಾಡಿ ಮೈಸೂರ ಪ್ರಾಂತದಲ್ಲಿಯೂ ಕೂಡ ಅವುಗಳನ್ನು ಜರಗಿಸಿದಂತೆ ತೋರುತ್ತದೆ. ಅಲ್ಲಿ ಬೆಂಗಳೂರ ಜಿಲ್ಲಾ ಕ್ಲೋಸ ಪೇಟೆಯ ಸಮೀಪದಲ್ಲಿ ರೇವಣಸಿದ್ಧೇಶ್ವರನಿಗೆ ಸಂಬಂಧಿಸಿದ ಒಂದು ಸ್ಥಳವಿರುವದರಿಂದ ಈ ಊಹೆಯು ಸತ್ಯವೆಂಬ ತಿಳುವಳಿಕೆಯು ಉತ್ಪನ್ನವಾಗುತ್ತಿದೆ.

## ಕ್ಲೋಸಪೇಟೆಯಲ್ಲಿ ರೇವಣಸಿದ್ಧೇಶ್ವರನು

ಕ್ಲೋಸ ಪೇಟೆಗೆ ಸಮೀಪವಾಗಿ ರೇಣುಕ ಕ್ಷೇತ್ರವಿದ್ದು ಇದರ ವಿವರಣೆಯನ್ನು ಶ್ರೀ ಎಚ್. ಜಿ. ಸಿದ್ಧಲಿಂಗಯ್ಯ ಹಾರೋಹಳ್ಳಿ ಇವರು ಶಿವಾನುಭವ ಸಂಪುಟ ೪, ಸಂಚಿಕೆ ೭, ಪುಟ ೩೦೭, ಇದರಲ್ಲಿಯೂ ವೇ. ಮೂ. ಶಿವಮೂರ್ತಿ ಶಾಸ್ತ್ರಿಗಳು, ಕೀರ್ತನ ಕೇಸರಿ ಇವರು ಸಂಪುಟ ೧೦, ಸಂಚಿಕೆ ೫, ಪುಟ ೪೯೨, ಇದರಲ್ಲಿಯೂ ಮಾಡಿದ್ದಾರೆ. ಈ ಕ್ಷೇತ್ರವು ಒಂದು ರಮಣೀಯವಾದ ಬೆಟ್ಟದ ಮೇಲ್ಭಾಗದಲ್ಲಿದ್ದು ಅಲ್ಲಿ ರೇವಣಸಿದ್ಧೇಶ್ವರನ ಗವಿಯೊಂದಿರುತ್ತದೆ. ಈ ಭಾಗಕ್ಕೆ ''ರೇಣುಕ ಗಿರಿ" ಎಂಬ ಹೆಸರೂ ಇದೆ. ಇಲ್ಲಿ ರುದ್ರಮುನೀಶ್ವರ ಸ್ವಾಮಿಯ ಒಂದು ದೇವಸ್ಥಾನವೂ ಇದೆ. ಬೆಟ್ಟದ ಬುಡದಲ್ಲಿ ರೇವಾಂಬೆಯ ದೇವಸ್ಥಾನವೂ ಇದೆ. ಈ ರೇವಾಂಬೆಯು ಹರಿಹರನು ವಿವರಿಸಿದ ರೇವಣ ದೇವಿಯೇ ಇರುತ್ತಾಳೆ. ಈಕೆಯು ರೇವಣಸಿದ್ಧೇಶ್ವರನ ಮಗಳು ಮತ್ತು ರುದ್ರಮುನಿಯು ರೇವಣಸಿದ್ಧೇಶ್ವರನ ಮಗನು. ಈ ಉಭಯತರು ರೇವಣಸಿದ್ಧೇಶ್ವರನು ಮಂಗಳವಾಡದಲ್ಲಿದ್ದಾಗಲೇ ಹುಟ್ಟಿದರೆಂದು ಅವನ ಚರಿತ್ರೆಯಿಂದ ತಿಳಿದುಬರುತ್ತಿದೆ. ಇದರಿಂದ ರೇವಣಸಿದ್ಧೇಶ್ವರನು ಚೋಳ ದೇಶದಿಂದ ತರ್ದೇವಾಡಿ ನಾಡಿಗೆ ಮೊದಲು ಆಗಮಿಸಿ ಅಲ್ಲಿ ಕೆಲವು ವರ್ಷಗಳಿದ್ದು ಅವನ ಈ ಮಕ್ಕಳು ದೊಡ್ಡವರಾದ ಬಳಿಕ ಕರ್ನಾಟಕದ ದಕ್ಷಿಣ ಭಾಗದಲ್ಲಿ ಬಂದಿದ್ದನೆಂದು ತೋರುತ್ತದೆ. ಅಲ್ಲಿ ಅವನು ಪ್ರಸಿದ್ಧಿಗೆ ಬಂದಿದ್ದರಿಂದಲೇ ಇದು ಕ್ಷೇತ್ರಸ್ಥಾನವಾಗಿದೆ. ಅವನ ಇಬ್ಬರು ಮಕ್ಕಳಿಗೋಸ್ಕರ ದೇವಾಲಯಗಳು ಇಲ್ಲಿ ಸ್ಥಾಪಿಸಲ್ಪಟ್ಟಿರುವದರಿಂದ ಇವರೂ ಇಲ್ಲಿಯೇ ಜನರಲ್ಲಿ ಪ್ರಸಿದ್ಧಿಗೆ ಬಂದಿರಬೇಕು.

## ರೇಣಾವಿಯಲ್ಲಿ ರೇವಣಸಿದ್ಧೇಶ್ವರನು

ರೇವಣಸಿದ್ಧೇಶ್ವರನ ಇನ್ನೊಂದು ಮಹತ್ವದ ಸ್ಥಾನವು ಸಾತಾರಾ ಜಿಲ್ಹೆಯಲ್ಲಿ ರೇಣಾವಿ ಎಂಬ ಗ್ರಾಮದಲ್ಲಿದೆ. ಇದರ ಪೂರ್ಣ ವಿವಿರಣೆಯನ್ನು ಶ್ರೀ ವೀರಭದ್ರಪ್ಪ ಹಾಲಭಾವಿ, ರಿಟಾಯರ್ಡ ೧ನೇ ವರ್ಗ ಸಬ್ ಜಜ್ಜ ಧಾರವಾಡ ಇವರು ಶಿವಾನುಭವ ಸಂಪುಟ ೪, ಸಂಚಿಕೆ ೪, ಪುಟ ೧೪೯ ಇದರಲ್ಲಿ ಮಾಡಿದ್ದಾರೆ. ಈಗಲೂ ಈ ಸ್ಥಾನವು ಅತ್ಯಂತ ಪವಿತ್ರವಾದುದೆಂದು ಇದರ ನೆರೆ ಪ್ರಾಂತದವರು ತಿಳಿದು ಅಲ್ಲಿ ಯಾವ ತರದ ಹಿಂಸಾ ಕರ್ಮಗಳನ್ನು ಆಚರಿಸಲು ಧೈರ್ಯ ಮಾಡುವದಿಲ್ಲ. ಈ ದೇವ ಸ್ಥಾನವನ್ನು ಎಲ್ಲ ಜಾತಿಯ ಜನರು ಬಹು ಭಕ್ತಿಪೂರ್ವಕವಾಗಿ ಕಾಣುತ್ತಾರೆ. ಇಲ್ಲಿಯೂ ರೇವಣಸಿದ್ಧೇಶ್ವರನ ಒಂದು ಗುಹೆಯು ಇರುತ್ತದೆ. ಆದರೆ ಈ ಗುಡಿಯ ಹಿಂಭಾಗವು ಮುಚ್ಚಲ್ಪಟ್ಟಿದ್ದು ಅಲ್ಲಿ ಏನಿರುವದೆಂಬುದನ್ನು ತಿಳಿಯಲು ಶಕ್ಯವಿರುವದಿಲ್ಲ. ಈ ಪ್ರಾಂತವನ್ನು ಈ ಕಾಲಕ್ಕೆ ಶಿಲಾಹಾರ ರಾಜರು ಆಳುತ್ತಿದ್ದರು.

ನಾವು ಈ ಎಲ್ಲ ಸಂಗತಿಗಳನ್ನು ಇಲ್ಲಿ ವಿವರಿಸುವ ಉದ್ದೇಶವು ರೇವಣ ಸಿದ್ಧನು ಈ ಕಾಲದಲ್ಲಿ ಕರ್ನಾಟಕದಲ್ಲಿ ಆಗಿಹೋದ ರಾಜ್ಯಗಳಲ್ಲಿ ಸಂಚರಿಸಿಕೊಂಡು ವಿಶೇಷ ಮನ್ನಣೆಯನ್ನು ಜನರಿಂದ ಪಡೆದವನಾಗಿದ್ದನೆಂದು ತೋರಿಸುವದೇ ಇರುತ್ತದೆ. ಈ ಸ್ಥಿತಿಯುತ್ಪನ್ನವಾಗಲು ಅವನು ಅಲ್ಲಿ ಅನೇಕ ಧಾರ್ಮಿಕ ಜಾಗ್ರತಿಯ ಕಾರ್ಯಗಳನ್ನು ಮಾಡಿರಬೇಕು. ಇದರಿಂದ ಅವನಿದ್ದ ಸ್ಥಳದಲ್ಲಿಯ ಜನರು ಭಕ್ತಿ ಭಾವವನ್ನು ತಾಳಿದವರಾಗಿ ದೇವಾಲಯ ಗಳನ್ನು ಸ್ಥಾಪಿಸಿದರು. ಮತ್ತು ಈಗಲೂ ಕೂಡ ಅವು ಪುಣ್ಯಕ್ಷೇತ್ರಗಳೆಂದು ಭಾವಿಸಲ್ಪಟ್ಟಿವೆ. ಕೆಲವೆಡೆಗಳಲ್ಲಿ ಅವನು ರಾಜರಿಂದಾದರೂ ಕೂಡ ಮನ್ನಣೆಯನ್ನು ಹೊಂದಿರುತ್ತಾನೆ. ಈ ಮೇರೆಗೆ ಬಿಜ್ಜಳನ ಆಳಿಕೆಯ ಪ್ರಥಮ ಭಾಗದಲ್ಲಿ ರೇವಣಸಿದ್ಧೇಶ್ವರನು ಮಹತ್ತರವಾದ ಧಾರ್ಮಿಕ ಕೃತ್ಯಗಳನ್ನು ಉತ್ತರಕ್ಕೆ ಸಾತಾರ ಜಿಲ್ಲೆಯಿಂದ ದಕ್ಷಿಣಕ್ಕೆ ಬೆಂಗಳೂರು ಜಿಲ್ಲೆಯ ವರೆಗೂ ಇಡೀ ಕರ್ನಾಟಕ ದೇಶದಲ್ಲಿ ಮಾಡಿದ ಹಾಗೆ ಕಂಡುಬರುತ್ತಿದೆ.

ಆದರೆ ಅವನು ತನ್ನ ಆಯುಷ್ಯದಲ್ಲಿ ಆವ ಆವ ರಾಜರಲ್ಲಿ ಆವ ಆವ ನಿಶ್ಚಿತ ಕಾರ್ಯಗಳನ್ನು ಮಾಡಿದನೆಂಬುದನ್ನು ನಾವು ಇನ್ನೂ ನಿಶ್ಚಯಿಸತಕ್ಕ ಸಂಗತಿಯಾಗಿರುತ್ತದೆ. ಆಗಿನ ಕಾಲದಲ್ಲಿ ದಕ್ಷಿಣ ಹಿಂದುಸ್ಥಾನದಲ್ಲಿ ಚಾಳುಕ್ಯ, ಹೊಯಿಸಳ ಮತ್ತು ಚೋಳರಾಜರು ಅತ್ಯಂತ ಬಲಾಢ್ಯರಾಗಿ ಉನ್ನತ ಸ್ಥಾನವನ್ನು ಹೊಂದಿದವರಾಗಿದ್ದರು. ಇದರಲ್ಲಿ ಶೈವಮತಾವಲಂಬಿಗಳಾದ ಚೋಳ ರಾಜರು ಶಿವಭಕ್ತರಾದ ರೇವಣಸಿದ್ಧ ಮೊದಲಾದವರನ್ನು ಆದರಿಸುತ್ತಿರಬೇಕು. ಆದರೆ ಈ ಕಾಲದಲ್ಲಿ ಅಂದರೆ ೧೨ನೇ ಶತಮಾನದ ಆದಿಭಾಗದಲ್ಲಿ ಹೊಯಿಸಳರು ಜೈನರಾಗಿ ಆಮೇಲೆ ರಾಮಾನುಜ ಪಂಥವನ್ನು ಅನುಸರಿಸುವವರಾದ್ದರಿಂದ ಅವರಿಂದ ವೀರಶೈವ ಮತಕ್ಕೆ ವಿಶೇಷ ಪ್ರೋತ್ಸಾಹವು ದೊರೆತಿರಲಿಕ್ಕಿಲ್ಲ. ಅದರಂತೆಯೇ ರೇವಣಸಿದ್ಧ ಮತ್ತು ಅವನ ಕಾಲಕ್ಕಿದ್ದ ಶಿವಶರಣರು ಕಲ್ಯಾಣಕ್ಕೆ ಹೋಗಿ ಚಾಳುಕ್ಯ ರಾಜರಲ್ಲಿ ಮನ್ನಣೆ ಹೊಂದಿದ್ದರ ಉಲ್ಲೇಖಗಳೂ ಇಲ್ಲ. ಅದ್ದರಿಂದ ಈ ರಾಜರೂ ರೇವಣಸಿದ್ಧೇಶ್ವರನನ್ನು ಮನ್ನಿಸಿರಲಿಕ್ಕಿಲ್ಲ. ಆದರೂ ಚಾಲುಕ್ಯ ರಾಜರ ಮಾಂಡಲಿಕನಾಗಿದ್ದ ಆಗಿನ ಕದಂಬ ರಾಜನು ಅವನನ್ನು ಆದರಿಸಿದ್ದನೆ. ಹಾಗೆಯೇ ಹೊಯಿಸಳರ ಕಾಲದಲ್ಲಿ ಕೊಳ್ಳೇಗಾಲಕ್ಕೆ ಸಮೀಪವಾಗಿ ಚಾಮರಾಜೇಂದ್ರನೆಂಬ ಹೆಸರಿನ ಒಬ್ಬ ಮಾಂಡಲಿಕನು ಆಳುತ್ತಿದ್ದು ಅವನು ರೇವಣಸಿದ್ಧೇಶ್ವರನನ್ನು ಸ್ವಾಗತಿಸಿರಬೇಕೆಂದು ತೋರುತ್ತದೆ. ಯಾಕಂದರೆ ಇವನು ತೆಂಗಿನಕಲ್ ದೊರೆ ಎಂತಲೂ ಅವನ ವಿಗ್ರಹವು ಆ ಬೆಟ್ಟವನ್ನು ಹತ್ತುವ ಪ್ರಥಮದಲ್ಲಿಯೇ ಬಂಡೆಯ ಮೇಲೆ ಕೆತ್ತಿದೆ ಎಂತಲೂ ಶ್ರೀ ಎಚ್. ಜಿ. ಸಿದ್ಧಲಿಂಗಯ್ಯನವರು ತಮ್ಮ ಲೇಖದಲ್ಲಿ ವಿವರಿಸಿದ್ದಾರೆ. ಈ ಎಲ್ಲ ಸಂಗತಿಗಳಿಂದ ವೀರಶೈವ ಧರ್ಮವು ಈ ಕಾಲದಲ್ಲಿ ಸಾಮಾನ್ಯ ಜನ ಸಮುದಾಯದಲ್ಲಿ ಮತ್ತು ಬಿಜ್ಜಳ ರಾಜ, ಕದಂಬ ರಾಜ ಈ ಮೊದಲಾದ ಮಾಂಡಲಿಕ ರಾಜರಲ್ಲಿ ಮನ್ನಣೆಗೆ ಮೊದಲು ಪಾತ್ರವಾಯಿತೆಂಬ ಅನುಮಾನವನ್ನು ಮಾಡಬಹುದಾಗಿದೆ.

ನಿಜಾಮನ ರಾಜ್ಯದಲ್ಲಿ ರೇವಣಸಿದ್ಧನ ಸ್ಥಾನಗಳು ಇವೆಯೋ ಹೇಗೆ ಎಂಬುದನ್ನು ನಮಗೆ ಇನ್ನೂ ತಿಳಿದುಬಂದಿಲ್ಲ. ಆದ್ದರಿಂದ ಅವನ ಬಗ್ಗೆ ಅಲ್ಲಿ ನಡೆದ ಸಂಗತಿಗಳನ್ನು ಕುರಿತು ನಮಗೆ ಹೇಳಲು ಶಕ್ಯವಾಗುವದಿಲ್ಲ.

ರೇವಣಸಿದ್ಧೇಶ್ವರನು ಕೊಲ್ಲಿಪಾಕಿಯಲ್ಲಿ ಐಕ್ಯ ಹೊಂದಿದನೆಂದು ಪುರಾಣಗಳಲ್ಲಿ ಹೇಳಲ್ಪಡುತ್ತಿದೆ. ಆದರೆ ಅವನ ಸ್ಥಾನಗಳು ಯಾವ ಯಾವ ಕಡೆಯಲ್ಲಿರುತ್ತವೆಂಬುದು ಇನ್ನೂ ಪೂರ್ಣವಾಗಿ ಸಂಶೋಧಿಸಲ್ಪಟ್ಟಿಲ್ಲ. ಅವು ಸಂಶೋಧಿತವಾಗುವವರೆಗೂ ಈ ವಿಷಯವಾಗಿ ಯಾವುದನ್ನೂ ನಿಶ್ಚಿತವಾಗಿ ಹೇಳಲಿಕ್ಕೆ ಬರುದಿಲ್ಲ.

ರೇವಣಸಿದ್ಧೇಶ್ವರನ ವಿಷಯವಾಗಿ ಅನೇಕ ನೀತಿಗೆ ಬಾಹಿರವಾದ ಕಥೆಗಳಿರುತ್ತವೆ. ಅನೇಕ ಶಿವಶರಣರ ಚರಿತ್ರೆಗಳಲ್ಲಿ ಈ ತರದ ಕಥೆಗಳು ಹೇಳಲ್ಪಡುವದುಂಟು. ಬಸವೇಶ್ವರನೂ ಕೂಡ ಜಾರ ಚೋರರಿಗೆ ಲಿಂಗ ವಿದ್ದಮಾತ್ರದಿಂದ ಬೇಕಾದ ಹಾಗೆ ಅವರನ್ನು ಪ್ರೋತ್ಸಾಹಿಸುತ್ತಿದ್ದನೆಂದು ಅನೇಕ ಕಥೆಗಳು ಇವೆ. ಆದರೆ ಸುದೈವದಿಂದ ಈ ಶಿವಶರಣರಿಂದ ರಚಿತವಾದ ವಚನ ಗ್ರಂಥಗಳು ಈಗ ನಮಗೆ ಉಪಲಬ್ಧವಾಗಿವೆ. ಅವುಗಳಲ್ಲಿ ಅವರು ಒಬ್ಬನು ಲಿಂಗಧಾರಿಯಾದ ಬಳಿಕ ನೈತಿಕಾಚರಣೆಯುಳ್ಳವನಾಗಬೇಕೆಂದು ಒತ್ತಿ ಹೇಳುವದು ಕಂಡುಬರುತ್ತಿದೆ. ಹೀಗೆ ಬೋಧಿಸುವವರು ಅನೀತಿಗೆ ಆಸ್ಪದ ಕೊಡುವದು ಶಕ್ಯವಿಲ್ಲ. ಬಸವೇಶ್ವರನ ತರುವಾಯ ೧೦೦—೨೦೦ ವರ್ಷಗಳ ಮೇಲೆ ಆಗಿನ ರಾಜಕೀಯ ಅನಾಯಕತನದ ಮೂಲಕ ಸಮಾಜದಲ್ಲಿ ಮೌಢ್ಯ ಭಾವನಾ ಅವ್ಯವಸ್ಥೆಯೂ ಹೆಚ್ಚಿದ ಹಾಗೆ ಕಂಡುಬರುತ್ತದೆ. ಈ ಸ್ಥಿತಿಯಲ್ಲಿ ಜಂಗಮರು ತಮ್ಮ ಸ್ವೈರ ವರ್ತನೆಗಳನ್ನು ಸಮರ್ಥಿಸಿಕೊಳ್ಳಲು ಇಂಥ ಕಟ್ಟು ಕಥೆಗಳನ್ನು ರಚಿಸಿದ ಹಾಗೆ ತೋರುತ್ತದೆ. ಆಗ ಶಿವಶರಣರ ಚರಿತ್ರೆಗಳು ವಿಪರ್ಯಾಸ ಮಾಡಲ್ಪಟ್ಟವು. ಇಷ್ಟೇ ಅಲ್ಲ, ಅವರು ವಚನಕಾರರ ಶ್ರೇಷ್ಠವಾದ ಮತ್ತು ಉದಾರವಾದ ತತ್ವಗಳನ್ನು ಜನತೆಯಲ್ಲಿ ಪ್ರಸಾರ ಮಾಡುವ ಬದಲು ಕಟ್ಟು ಕಥೆಗಳುಳ್ಳ ಪುರಾಣಗಳನ್ನು ರಚಿಸಿ ಜನತೆಯಲ್ಲಿ ಧರ್ಮಮೂಢತನವನ್ನು ಹೆಚ್ಚಿಸಲಿಕ್ಕೆ ಪ್ರಯತ್ನಿಸಿದಂತೆ ಕಂಡುಬರುತ್ತದೆ. ವಚನಗಳಲ್ಲಿಯೂ ಕೂಡ ಸಲ್ಲದ ವಿಚಾರಗಳು ಅಲ್ಲಲ್ಲಿ ಇದ್ದು ಇವು ಸಹ ಹಿಂದಿನಿಂದ ಅವುಗಳಲ್ಲಿ ಸೇರ್ಪಡೆ ಮಾಡಲ್ಪಟ್ಟ ಹಾಗೆ ತೋರುತ್ತದೆ. ಇಂಥ ಭಾಗಗಳನ್ನು ಈಗಿನ ಕಾಲದಲ್ಲಿ ನಾವು ತೆಗೆದುಹಾಕಿ ವೀರಶೈವಧರ್ಮದ ನಿಜವಾದ ಮತ್ತು ಶುದ್ಧವಾದ ಸಾಮಾಜಿಕ ಧಾರ್ಮಿಕ ಇತಿಹಾಸವನ್ನು ಮತ್ತು ವಾಙ್ಮಯವನ್ನು ನಾವು ಪ್ರಚಾರಗೊಳಿಸಬೇಕಾಗಿದೆ.

ರೇವಣಸಿದ್ಧೇಶ್ವರ ಮೊದಲಾದ ಶಿವಶರಣರ ಮೂಲಕ ಹೇಗೆ ಬಿಜ್ಜಳನ ಆರಂಭದ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ಒಂದು ಧಾರ್ಮಿಕ ಚಳವಳಿಯು ಉತ್ಪನ್ನವಾಯಿತೋ ಹಾಗೆಯೇ ಬನವಾಸಿಯಲ್ಲಿಯೂ ವೀರ ಶೈವ ಧರ್ಮದ ಬೇರೊಂದು ಚಳವಳಿಯು ಹೆಚ್ಚು ಕಡಿಮೆ ಇದೇ ಸಮಯ ದಲ್ಲಿ ಉದ್ಭವಿಸಿತೆಂದು ತೋರುತ್ತದೆ. ಈ ಕಾಲದಲ್ಲಿ ಇಲ್ಲಿ ಪ್ರಭುದೇವ, ಅನುಮಿಷ, ಮಹಾದೇವಿಯಕ್ಕ, ಮೊದಲಾದ ಶರಣಶರಣೆಯರು ಉಗಮಿ ಸಿದರು. ಹೀಗಾದುದು ಬಸವನ ಕಾಲಕ್ಕಿಂತ ಸ್ವಲ್ಪ ಮೊದಲು. ಈ ಚಳ ವಳಿಯು ಬಸವೇಶ್ವರನು ಪ್ರಧಾನಿ ಪಟ್ಟವನ್ನು ಹೊಂದಿದ ಬಳಿಕ ಆದುದಲ್ಲ. ಇದು ರೇವಣಸಿದ್ಧೇಶ್ವರನ ಕಾಲಕ್ಕೆ ಸಮೀಪವರ್ತಿಯಾಗಿರುತ್ತದೆ. ಈ ಚಳವಳಿಯು ಆಗಿನ ಬನವಾಸಿ ೧೨ ಸಾವಿರ ನಾಡಿನಲ್ಲಿ ಅಂದರೆ ಈಗಿನ ಶಿವಮೊಗ್ಗಾ ಜಿಲ್ಹಾ, ಹಾನಗಲ್ಲು, ಶಿರ್ಸಿ, ರಾಣೆಬೆನ್ನೂರ, ಹಿರೆಕೆರೂರು, ಹಾವೇರಿ ತಾಲೂಕುಗಳನ್ನು ವ್ಯಾಪಿಸಿತ್ತು. ಈ ನಾಡಿನಲ್ಲಿ ಯಾವ ಯಾವ ವಚನಕಾರರು ಉದ್ಭವಿಸಿದರು ಮತ್ತು ಅವರು ಯಾವ ಯಾವ ಕಾರ್ಯಗಳನ್ನು ಮಾಡಿ ದರು ಎಂಬುದನ್ನು ನಾವು ಮುಂದೆ ವಿವರಿಸುವೆವು.

ವೀರಶೈವ ಸಾಮಾಜಿಕ ಇತಿಹಾಸದಲ್ಲಿ ಮೊಟ್ಟಮೊದಲು ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯನವರು, ಮುಂದೆ ರೇವಣಸಿದ್ದನು, ಇವನ ತರುವಾಯ ಪ್ರಭುದೇವ, ಅನುಮಿಷರು. ಇವರ ತರುವಾಯ ಬಸವ, ಸಿದ್ಧರಾಮ, ಚನ್ನಬಸವಾದಿಗಳು, ಆಮೇಲೆ ರುದ್ರಮುನಿ ಮೊದಲ್ಗೊಂಡು ಅನೇಕ ಆಚಾರ್ಯರು ವೀರಶೈವ ಸಮಾಜದಲ್ಲಿ ಕಾಲ ಕಾಲಕ್ಕೆ ಉದ್ಭವಿಸಿ ೧೦೦, ೧೫೦ ವರ್ಷಗಳವರೆಗೆ ಕ್ರಾಂತಿಗಳನ್ನೆಸಗುತ್ತ ಬಂದಿರುತ್ತಾರೆ. ಇವರ ಚರಿತ್ರೆಗಳು ಘನತರವಾದವುಗಳು. ಇವುಗಳನ್ನು ಸಂಶೋಧಿಸಿ ಒಂದುಸ್ಥಾನ ದಲ್ಲೆಲ್ಲ ಪ್ರಚಾರ ಮಾಡುವದು ವೀರಶೈವರ ಆದ್ಯ ಕರ್ತವ್ಯವಾಗಿದೆ.

(ಶಿವಾನುಭವ ಸಂಪುಟ ೧೪ ಸಂಚಿಕೆ ೫ ರಿಂದ)

ಯಕ್ಕ ಮತ್ತು ಸತ್ಯಕ್ಕ ಇವರಿಬ್ಬರು ಸ್ತ್ರೀ ವಚನಕಾರರಾಗಿ ಪ್ರಸಿದ್ಧಿಯನ್ನು ಹೊಂದಿದ್ದಾರೆ. ಆದರೆ ಈ ಪ್ರಾಂತದಲ್ಲಿ ಉದ್ಭವಿಸಿದ ಈ ಶಿವಶರಣರು ಗಳು ತರ್ದೆವಾಡಿ ನಾಡಿನಲ್ಲಿಯ ಶಿವಶರಣರಿಗೆ ಸಂಬಂಧಪಟ್ಟವರಾಗಿ ವೃದ್ಧಿಂಗತ ಹೊಂದಿದ್ದು ತೋರುವದಿಲ್ಲ. ಯಾಕೆಂದರೆ ಅವರ ಚರಿತ್ರೆಗಳು ರೇವಣಸಿದ್ಧ, ಸಿದ್ಧರಾಮ, ಬಸವೇಶ್ವರರಿಗೆ ಸಂಬಂಧಪಡುವದಿಲ್ಲ. ಆದುದರಿಂದ ಈ ಬನವಸೆ ನಾಡಿನ ವೀರಶೈವ ಚಳವಳಿಯು ಇಲ್ಲಿಯೇ ಉದ್ಭವಿಸಿ ಪಸರಿಸಿರಬಹುದೆಂದು ತೋರುತ್ತದೆ. ಈ ಕಾಲದಲ್ಲಿ ಶೈವಧರ್ಮದ ಚಳವಳಿಗಳು ಬರೇ ಕರ್ನಾಟಕದಲ್ಲಿಯಷ್ಟೇ ಅಲ್ಲ, ಇಡೀ ದಕ್ಷಿಣ ದೇಶದಲ್ಲಿ ಅನೇಕ ಭಾಗಗಳಲ್ಲಿ ವ್ಯಾಪಿಸಿದ್ದವು. ಅವುಗಳಲ್ಲಿ ಮುಖ್ಯವಾಗಿ ಆಂಧ್ರ ಮತ್ತು ಕರ್ನಾಟಕ ದೇಶಗಳಲ್ಲಿ ಅಲ್ಲಲ್ಲಿ ಶಿವಶರಣರುಗಳು ಉದ್ಭವಿಸಿ ಧರ್ಮ ಪ್ರಸಾರ ಕಾರ್ಯವನ್ನು ಸ್ವತಂತ್ರವಾಗಿ ಕೈಕೊಂಡು ನಡೆಸುತ್ತಇದ್ದು, ಮುಂದೆ ಅವರು ಬಸವೇಶ್ವರನು ಕಲ್ಯಾಣ ಪಟ್ಟಣದಲ್ಲಿ ಮಂತ್ರಿ ಪದಾರೂಢನಾದ ಬಳಿಕ ಅವನ ಸನ್ನಿಧಿಯನ್ನು ಸಾರಿ, ಅವನು ಅಲ್ಲಿ ಸ್ಥಾಪಿಸಲ್ಪಟ್ಟ ಶಿವಾನುಭವ ಮಂಟಪದಲ್ಲಿ ಸೇರಿ, ಅಲ್ಲಿ ನಡೆದ ಧರ್ಮತತ್ವಗಳನ್ನು ವಚನ ವಾಙ್ಮಯದ ಮೂಲಕ ದೇಶದಲ್ಲೆಲ್ಲ ಅವರು ಪಸರಿಸಿದ ಹಾಗೆ ತೋರುತ್ತದೆ. ಬಸವೇಶ್ವರನ ಕಾಲದಲ್ಲಿ ಮುಂದುವರಿದು ಈ ಘನತರವಾದ ಕಾರ್ಯದಲ್ಲಿ ಮುಂದುವರಿದು ಜೋರಾಗಿ ಪ್ರಯತ್ನಿಸಿದವರಲ್ಲಿ ಅಲ್ಲಮಪ್ರಭುವೇ ಅಗ್ರೇಸರನಾಗಿದ್ದಾನೆ.

ಅಲ್ಲಮ ಪ್ರಭುವು ಬನವಸೆ ೧೨ ಸಾವಿರ ನಾಡಿನಲ್ಲಿ ಉದ್ಭವಿಸುವ ಪೂರ್ವದಲ್ಲಿಯೇ ರೇವಣಸಿದ್ಧನು ಈ ಭಾಗದಲ್ಲಿ ತಲೆದೋರಿ ಇಲ್ಲಿ ಆಳುತ್ತಿದ್ದ ಹಾನಗಲ್ಲ ಕದಂಬ ರಾಜನಲ್ಲಿ ಮನ್ನಣೆ ಹೊಂದಿದ್ದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ. ಈ ರಾಜನು ೧೧೩೧ ಮತ್ತು ೧೧೪೫ ಈ ವರ್ಷಗಳಲ್ಲಿ ದೊರೆಯುವ ಶಿಲಾಲೇಖಗಳಿಂದ ಮಲ್ಲಿಕಾರ್ಜುನನೇ ಇರಬಹುದೆಂದು ನಾವು ಹಿಂದಿನ ಶಿವಾನುಭವ ಸಂಚಿಕೆಯಲ್ಲಿ ಊಹಿಸಿ ಲೇಖವನ್ನು ಬರೆದುದು ವಾಚಕರ ಸ್ಮರಣೆಯಲ್ಲಿರಬಹುದು. ಆದರೂ ಕೂಡ ಅಲ್ಲಮಪ್ರಭುವು ರೇವಣಸಿದ್ಧನ ಮೂಲಕ ಪ್ರಸಿದ್ಧಿಗೆ ಬಂದನೆಂದು ಹೇಳಲು ಮಾತ್ರ ನಮಗೆ

ಆಧಾರಗಳು ದೊರೆಯುದಿಲ್ಲ. ಆದರೆ ಅವನು ಬಸವೇಶ್ವರನಕಿಂತಲೂ ವಯಸ್ಸಿನಲ್ಲಿ ಹಿರಿಯನು ಮತ್ತು ಅವನು ಸಮಕಾಲೀನನು ಎಂದು ತಿಳಿದು ಬರುತ್ತದೆ. ಆದರೆ ಬಿಜ್ಜಳನು ಮಂಗಳವಾಡದಲ್ಲಿ ಚಾಲುಕ್ಯರಾಜನ ಮಹಾಮಂಡಲೇಶ್ವರನಾಗಿ ಆಳುತ್ತಿದ್ದಾಗ ಬಸವೇಶ್ವರನಂತೆ ಅಲ್ಲಮನು ಆ ಸ್ಥಳಕ್ಕೆ ಹೋದದ್ದು ತಿಳಿದುಬರುವದಿಲ್ಲ. ಮುಂದೆ ಬಸವೇಶ್ವರನು ಕಲ್ಯಾಣಪಟ್ಟಣದಲ್ಲಿ ಮಂತ್ರಿ ಪದಾರೂಢನಾದಬಳಿಕ ಅಲ್ಲಮಪ್ರಭುವು ಅಲ್ಲಿಗೆ ಹೋಗಿ ಪ್ರಸಿದ್ಧಿಗೆ ಬಂದನೆಂದು ಕಂಡುಬರುತ್ತದೆ. ಅದ್ದರಿಂದ ಅವನು ೧೧೬೨ರ ಸುಮಾರಕ್ಕೆ ಕಲ್ಯಾಣಕ್ಕೆ ಬಂದಿರಬೇಕು. ಮತ್ತು ಅವನು ಶಿವಶರಣರು ಉಳವಿಗೆ ಹೋಗುವವರೆಗೂ ಅಂದರೆ ೧೧೬೮ರವರೆಗೂ ಅಲ್ಲಿಯೇ ಶಿವಾನುಭವ ಮಂಟಪದಲ್ಲಿದ್ದು ವೀರಶೈವ ಧರ್ಮಕ್ಕೆ ಉಚ್ಚ ಸ್ಥಾನವನ್ನು ತಂದುಕೊಟ್ಟಿರಬೇಕೆಂದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ.

ಅನಿಮಿಷಾಚಾರ್ಯನು ಅಲ್ಲಮಪ್ರಭುವಿನ ಗುರುವು. ಅದ್ದರಿಂದ ಅವನು ಬಸವೇಶ್ವರನಕ್ಕಿಂತಲೂ ಮೊದಲಿಗನೆಂದು ಹೇಳಬಹುದಾಗಿದೆ. ಆದರೆ ಈ ಅನಿಮಿಷನು ಬಸವೇಶ್ವರನಿಗೆ ಸಂಬಂಧಪಡುವದಿಲ್ಲವಾದ್ದರಿಂದ, ಬಸವೇಶ್ವರನಕ್ಕಿಂತಲೂ ಮೊದಲು ಈ ಭಾಗದಲ್ಲಿ ವೀರಶೈವ ಧರ್ಮವು ನೆಲೆಸಿತ್ತೆಂದು ಊಹಿಸಬಹುದಾಗಿದೆ. ಈ ಭಾಗದಲ್ಲಿ ಪ್ರಸಿದ್ಧಿಗೆ ಬಂದ ಮುಕ್ತಾಯಕ್ಕ, ಅಜಗಣ್ಣ ಇವರು ಅಲ್ಲಮಪ್ರಭುವಿನ ಸಮಕಾಲೀನರು. ಶಿವಶರಣೆ ಸತ್ಯಕ್ಕನಾದರೂ ಇದೇ ಕಾಲದಲ್ಲಿದ್ದು ಆಕೆಯ ವಚನಗಳನ್ನು ನಾವು ಹಿಂದಿನ ಸಂಚಿಕೆಯಲ್ಲಿ ಪ್ರಸಿದ್ಧಿಸಿದ್ದೇವೆ. ಆದರೆ ಈಕೆಯು ಮಹಾದೇವಿಯಕ್ಕನಂತೆ ಬಸವೇಶ್ವರನಲ್ಲಿಗೆ ಹೋಗಿ ಅವನ ಸನ್ನಿಧಿಯಲ್ಲಿ ಶಿವಾನುಭವದ ಸ್ವಾದವನ್ನು ಉಂಡಂತೆ ಕಂಡುಬರುವದಿಲ್ಲ. ಆದರೂ ಆಕೆಯ ವಚನಗಳನ್ನು ಮಹಾದೇವಿಯಕ್ಕನ ವಚನಗಳಿಗೆ ಹೋಲಿಸಿ ನೋಡಿದರೆ ಈ ಉಭಯತರ ವಚನಗಳಲ್ಲಿ ಸಾಮ್ಯತೆಯು ಬಹಳ ಇರುವದು ಕಂಡುಬರುತ್ತದೆ. ಅದ್ದರಿಂದ ಆ ಉಭಯತರು ಪರಸ್ಪರ ಪರಿಚಯಸ್ಥರಿರಬಹುದು. ಏಕಾಂತದ ರಾಮಯ್ಯನು ಇವರಿಗೆ ಸಮಕಾಲೀನನಾಗಿದ್ದನು. ಇವನೂ ಬನವಸೆ ನಾಡಿನಲ್ಲಿಯೇ ಪ್ರಸಿದ್ಧಿಗೆ ಬಂದನು. ಆದರೆ ಇವರೆಲ್ಲರ ತರುವಾಯ ಈತನು ಬಹಳ ದಿನಗಳ

ವರೆಗೆ ಜೀವಿಸಿರಬೇಕೆಂದು ಅಬ್ಬಲೂರು ಶಿಲಾಶಾಸನದಿಂದ ಕಂಡುಬರುತ್ತದೆ. ಮಹಾದೇವಿಯಕ್ಕನ ಚರಿತ್ರೆಯಂತಲೂ ಈಗ ಎಲ್ಲರಿಗೂ ಚೆನ್ನಾಗಿ ಪರಿಚಯವಾಗಿದೆ. ಈ ಪ್ರಕಾರ ಬನವಸೆ ನಾಡಿನಲ್ಲಿ ವೀರಶೈವ ಧರ್ಮದ ಚಳವಳಿಯು ಈ ಕಾಲದಲ್ಲಿ ವಿಶೇಶವಾಗಿ ಉದ್ಭವಿಸಿತ್ತೆಂತಲೂ ಅಲ್ಲಿಂದ ಅನೇಕ ಶಿವಶರಣರು ಕಲ್ಯಾಣದಲ್ಲಿ ಬಸವೇಶ್ವರನಿಗೆ ಪ್ರಧಾನಿ ಪಟ್ಟ ಉಂಟಾದ ಬಳಿಕ ಅವನಲ್ಲಿಗೆ ಹೋಗಿ ವೀರಶೈವ ಧರ್ಮವನ್ನು ಪ್ರಸಿದ್ಧಿಗೆ ತಂದರೆಂತಲೂ ನಾವು ಊಹಿಸಬಹುದಾಗಿದೆ. ಆದರೆ ಈ ಕಾಲದಲ್ಲಿ ಈ ಭಾಗದಲ್ಲಿ ರಾಜಕೀಯ ಪರಿಸ್ಥಿತಿಯು ಹೇಗಿತ್ತೆಂಬುದನ್ನು ಕುರಿತು ಇಲ್ಲಿ ಸ್ವಲ್ಪ ವಿವರಿಸುವದು ಅತ್ಯಾವಶ್ಯಕವಾಗಿರುತ್ತದೆ.

ರೇವಣಸಿದ್ಧನು ಹಾನಗಲ್ಲು ಕದಂಬ ವಂಶದ ಮಲ್ಲಿಕಾರ್ಜುನನಲ್ಲಿ ಪ್ರಸಿದ್ಧಿಗೆ ಬಂದಿರಬಹುದೆಂದು ನಾವು ಹಿಂದಿನ ಸಂಚಿಕೆಯಲ್ಲಿ ವಿವರಿಸಿರುವೆವಷ್ಟೇ ? ಈ ರಾಜನ ತರುವಾಯ ಇವನ ತಮ್ಮನಾದ ತೈಲಪನು ಹಾನಗಲ್ಲಿನಲ್ಲಿ ಪಟ್ಟಾಧಿಕಾರಿಯಾಗಿ ಆಳಿದನು. ಆದರೆ ಅವನು ಬಹಳ ದಿವಸ ಆಳಿದಂತೆ ತೋರುವದಿಲ್ಲ. ಯಾಕೆಂದರೆ ಅವನ ತರುವಾಯ ಅವನ ಮಗನಾದ ಕೀರ್ತಿದೇವನೆಂಬವನ ಅನೇಕ ಶಿಲಾಶಾಸನಗಳು ೧೧೫೧ರಿಂದ ೧೧೬೬ರ ವರೆಗೂ ಉಪಲಬ್ಧವಿರುತ್ತವೆ. ಈ ಶಾಸನಗಳು ಶಿವಮೊಗ್ಗಾ ಜಿಲ್ಲಾ ಸೊರಬ ತಾಲೂಕಿನ ಮುಂಗಳೂರು, ಹಿರೇಇಡಗೋಡು, ಬಿದರೇಕೊಪ್ಪ, ಕೊರಕೋಡು, ಹಾಯು ಎಂಬ ಗ್ರಾಮಗಳಲ್ಲಿ ಉಪಲಬ್ಧವಿರುತ್ತವೆ. ಈ ಶಿಲಾಶಾಸನಗಳ ಬಗ್ಗೆ 'ಕರ್ನಾಟಕ ಎಪಿಗ್ರಾಫಿಕಾ' ಶಿವಮೊಗ್ಗ ಜಿಲ್ಲೆಯ ೨ನೇ ವ್ಹಾಲ್ಯೂಮ ಸೊರಬ ತಾಲೂಕಿನ ಶಿಲಾಶಾಸನಗಳು ಅನುಕ್ರಮವಾಗಿ ನಂ. ೪೬೪, ೪೧೬, ೫೬೨, ೧೭೭, ೩೦೬ ಇದ್ದು ಇವುಗಳನ್ನು ವಾಚಕರು ನೋಡಬೇಕು. ಇವೆಲ್ಲವುಗಳಲ್ಲಿ ಕೀರ್ತಿದೇವನ ಉಲ್ಲೇಖವಿದ್ದು ಇವನ ಕಾಲದಲ್ಲಿಯಾಗಲಿ ಇಲ್ಲವೆ ಇವನ ತಂದೆಯಾದ ತೈಲಪನ ಕಾಲದಲ್ಲಿಯಾಗಲಿ ಅಲ್ಲಮಪ್ರಭುವು ಬನವಸೆಯಲ್ಲಿ ಪ್ರಸಿದ್ಧಿಗೆ ಬಂದಿರಬೇಕು. 'ಅವನಿಗೆ ಮುಗ್ಧನಾಗಿದ್ದ ಕಾಮಲತೆಯು ಕೀರ್ತಿದೇವನ ಮಗಳಾಗಿರಬೇಕು. ಆದರೆ ಈ ಕೀರ್ತಿದೇವನು ಸ್ವತಂತ್ರ ರಾಜನಾಗಿರದೆ ಚಾಲುಕ್ಯ ಸಾರ್ವಭೌಮ ತೈಲಪನ

ಮತ್ತು ಅವನ ತರುವಾಯ ಬಿಜ್ಜಳನಿಗೆ ಅಂಕಿತನಾಗಿ ರಾಜ್ಯವಾಳುತ್ತಿದ್ದನು. ಕದಂಬ ರಾಜರ ರಾಜಧಾನಿಯಾದ ಹಾನಗಲ್ಲು ಪಟ್ಟಣವು ಬನವಾಸೆ ೧೨ ಸಾವಿರ ನಾಡಿನಲ್ಲಿದ್ದು ಈ ನಾಡಿನ ವಿಸ್ತಾರವು ಉತ್ತರಕ್ಕೆ ಹಾನಗಲ್ಲ ತಾಲೂಕಿನಿಂದ ದಕ್ಷಿಣಕ್ಕೆ ಶಿವಮೊಗ್ಗ ಜಿಲ್ಲೆಯವರೆಗೆ ವ್ಯಾಪಿಸಿತ್ತು. ಚಾಲುಕ್ಯ ರಾಜರ ಪರವಾಗಿ ಈ ಮಾಂಡಲೀಕರನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ಬನವಸೆಯಲ್ಲಿ ಪ್ರತ್ಯಕ್ಷವಾಗಿ ರಾಜ್ಯ ಮಾಡುತ್ತಿದ್ದವರು ಈ ಕಾಲದಲ್ಲಿ ಬರ್ಮದೇವ, ಬಿಜ್ಜಳ ಮತ್ತು ಕಾಮದೇವ ಎಂಬವರಿದ್ದಾರೆ. ಇವರೆಲ್ಲರೂ ಶೂರ ಸೇನಾಪತಿಗಳಾಗಿದ್ದು ದಕ್ಷಿಣಕ್ಕೆ ಜೀಳುತ್ತಿದ್ದ ಹೊಯಿಸಳರ ಆಕ್ರಮಣಗಳನ್ನು ಅವರು ತಡೆಯುವಷ್ಟು ಸಾಮರ್ಥ್ಯವುಳ್ಳರಾಗಿದ್ದರು. ಇವರೆಲ್ಲರು ಶೈವ ಧರ್ಮದ ಪಕ್ಷಪಾತಿಗಳು ಆದ್ದರಿಂದ ಶಿವಶರಣರ ಧಾರ್ಮಿಕ ಚಳವಳಿಗೆ ಇವರಿಂದ ಯಾವ ಆತಂಕಗಳೂ ಉಂಟಾದಂತೆ ಕಂಡುಬರುವದಿಲ್ಲ.

ಬನವಸೆ ನಾಡಿನಲ್ಲಿ ಉತ್ಪನ್ನರಾದ ಈ ಎಲ್ಲ ಶಿವಶರಣರ ಸ್ಥಾನಗಳ ಸಂಪೂರ್ಣ ವಿವರಣೆಗಳು ಶಿವಾನುಭವ ಪತ್ರಿಕೆಯ ೧೧ನೇ ಸಂಪುಟದ ಸಂಚಿಕೆ ೪ ಇದರಲ್ಲಿ ಸವಿಸ್ತಾರವಾಗಿ ಬಂದಿರುತ್ತದೆ. ಅವುಗಳನ್ನು ವಾಚಕರು ಅವಶ್ಯವಾಗಿ ನೋಡಬೇಕೆಂದು ನಮ್ಮ ಸೂಚನೆ ಇದೆ.

(ಶಿವಾನುಭವ ಸಂಪುಟ ೧೪ ಸಂಚಿಕೆ ೬ ರಿಂದ)

# ಕೆಳದಿ ಮತ್ತು ಸ್ವಾದಿ ರಾಜ್ಯಗಳು

ಈಗಿನ ಕಾಲಕ್ಕೆ ಕಾರವಾರ ಮತ್ತು ಮಂಗಳೂರ ಜಿಲ್ಲೆಗಳು ಅರಣ್ಯದಿಂದ ತುಂಬಿಕೊಂಡು ಯಾವದೊಂದು ತರದ ವ್ಯಾಪಾರೋದ್ಯೋಗಗಳು ಇಲ್ಲದೆ ಒಕ್ಕಲುತನವು ಹಾಳಾಗಿದ್ದು ಹಿಂದುಸ್ಥಾನದ ಬಡ ಜಿಲ್ಲೆಗಳಲ್ಲಿ ಎಣಿಸಲ್ಪಟ್ಟಿರುತ್ತವೆ. ಈ ಕಾರಣ ಅಲ್ಲಿಯ ಜನರು ಉದರನಿಮಿತ್ತವಾಗಿ ಸ್ವದೇಶವನ್ನು ಬಿಟ್ಟುಕೊಟ್ಟು ಪರ ಪ್ರಾಂತಗಳಿಗೆ ಹೋಗಬೇಕಾಗಿರುತ್ತದೆ. ಆದರೆ ಈ ಕ್ಲೇಶಕರವಾದ ಸ್ಥಿತಿಯು ಇಂಗ್ಲೀಷರು ಈ ಪ್ರದೇಶಗಳಿಗೆ ಬರುವ ಪೂರ್ವದಲ್ಲಿ ಇರಲಿಲ್ಲ. ಈ ಜಿಲ್ಲೆಗಳು ಆ ಕಾಲಕ್ಕೆ ಒಕ್ಕಲುತನ, ವ್ಯಾಪಾರ, ಕೈಗಾರಿಕೆಗಳಿಂದ ತುಂಬಿಕೊಂಡು ಅತ್ಯಂತ ಅಭಿವೃದ್ಧಿ ಸ್ಥಿತಿಯಲ್ಲಿದ್ದವು. ಈ ಪ್ರದೇಶಗಳಲ್ಲಿ ಅತ್ಯಂತ ಬೆಲೆಯುಳ್ಳ ತೋಟದ ಜಿನಸುಗಳು ಬೆಳೆಯುತ್ತಿದ್ದು ಒಕ್ಕಲಿಗರು ಸುಖಿಯಾಗಿದ್ದರು. ಕರ್ನಾಟಕದ ವ್ಯಾಪಾರವೆಲ್ಲ ಈ ಜಿಲ್ಲೆಗಳ ಬಂದರಗಳೊಳಗಿಂದ ಹಾಯ್ದು ಪರದೇಶಗಳಿಗೆ ಸಾಗುತ್ತಿದ್ದರಿಂದ ಧನ ಕನಕ ಸಂಪತ್ತಿನಿಂದ ಹೆಸರಾದ ಅನೇಕ ವ್ಯಾಪಾರೀ ಪಟ್ಟಣಗಳು ಉದ್ಭವಿಸಿದ್ದವು. ಈ ಸ್ಥಿತಿಯು ಈ ಜಿಲ್ಲೆಗಳಿಗೆ ಬಿದನೂರ ಮತ್ತು ಸ್ವಾದಿ ಅರಸರು ಆಳುತ್ತಿದ್ದಾಗ ಪ್ರಾಪ್ತವಾಗಿತ್ತು. ಆದರೆ ಆ ರಾಜ್ಯಗಳು ನಾಶವಾದ ಕೂಡಲೆ, ಈ ಪ್ರದೇಶಗಳ ವೈಭವವು ಸಂಪೂರ್ಣವಾಗಿ ಮುಗ್ಗಿಹೋಯಿತು. ಈ ಸ್ಥಿತಿಯು ಈಗ್ಗಯೂ ಹಾಗೆಯೇ ಇದ್ದುದನ್ನು ನಾವು ಕಾಣುತ್ತೇವೆ. ಇದರಿಂದ ಈ ಜಿಲ್ಲೆಗಳಿಗೆಷ್ಟೇ ಅಲ್ಲ, ಇಡೀ ಕರ್ನಾಟಕಕ್ಕೂ ಸಾಂಪತ್ತಿಕ ಹಾನಿಯು ಉಂಟಾಗಿರುತ್ತದೆ.

## ವಿಜಯನಗರದ ಕಾಲ

ವಿಜಯನಗರದ ಅರಸರು ಆಳುತ್ತಿದ್ದಾಗ ಈ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಅವರ ಅಂಕಿತದಲ್ಲಿಯೇ ಇದ್ದವು. ಆಗೆ ಇವುಗಳ ದಕ್ಷಿಣ ಭಾಗವನ್ನು ಕೊಡಗು ಸೀಮೆಯ ವರೆಗೆ ಕೆಳದಿ ಅಥವಾ ಬಿದನೂರಿನ ಅರಸರು ವಿಜಯನಗರದ ಭೂಪತಿಗಳ ಮಾಂಡಲಿಕರಾಗಿ ಆಳುತ್ತಿ

ದ್ದರು. ಮತ್ತು ಉತ್ತರ ಭಾಗವನ್ನು ಗೋವೆಯ ಪ್ರಾಂತದವರೆಗೆ ಸ್ವಾದಿಯ ಅರಸರು ಆಳುತ್ತಿದ್ದರು. ಕೆಳದಿಯ ಅರಸರ ಪೂರ್ವಜರಲ್ಲಿ ಸದಾಶಿವರಾಯ, ಸಂಕಣ್ಣನಾಯಕ ಮೊದಲಾದ ಶೂರ ನಾಯಕರು ಜನಿಸಿ, ಅವರು ಮುಸಲ್ಮಾನರ ಕೂಡ ಬಹು ಕಲಿತನದಿಂದ ಕಾದಾಡಿ, ವಿಜಯನಗರದ ಅರಸರಿಗೆ ಅತ್ಯಂತ ಸಹಾಯಕರಾಗಿದ್ದರು. ಸ್ವಾದಿ ಅರಸರ ಪೂರ್ವಜನಾದ ಅರಸಪ್ಪ ನಾಯಕನು ವಿಜಯನಗರದ ಮಹಾ ಪ್ರತಾಪಶಾಲಿ ರಾಜನಾದ ಕೃಷ್ಣರಾಜನ ಸಹೋದರಿಯ ಮಗನಾಗಿದ್ದನು. ಕೃಷ್ಣರಾಜನು ತನಗೆ ಮಕ್ಕಳಿಲ್ಲದಾಗ ಈತನನ್ನೇ ರಾಜ್ಯಕ್ಕೆ ಪಟ್ಟಗಟ್ಟುವನೆಂದು ಆತನಿಗೆ ವಚನ ಕೊಟ್ಟಿದ್ದನು. ಆದರೆ ಆತನಿಗೆ ಮುಂದೆ ಮಕ್ಕಳುಗಳಾಗಲು ಅರಸಪ್ಪ ನಾಯಕನಿಗೆ ಸ್ವಾದಿಯ ಪ್ರಾಂತದ ಅಧಿಪತ್ಯವು ಕೊಡಲ್ಪಟ್ಟಿತು. ಈ ಎರಡೂ ಅರಸು ಮನೆತನಗಳಲ್ಲಿ ಶೂರರೂ ಧಾರ್ಮಿಕರೂ ವಿದ್ವಾಂಸರೂ ಆದ ಅನೇಕ ರಾಜರು ಆಗಿ ಹೋದರು. ಕೆಳದಿಯ ರಾಜರಲ್ಲಿ ಸದಾಶಿವ ರಾಯ (೧೫೧೪-೧೫೪೬) ಸಂಕಣ್ಣನಾಯಕ (೧೫೪೬-೧೫೭೦) ವೆಂಕಪ್ಪ ನಾಯಕ (೧೫೮೩-೧೬೩೦) ಶಿವಪ್ಪನಾಯಕ (೧೬೪೮-೧೬೬೦) ಚನ್ನಮ್ಮಾಜಿ (೧೬೭೨-೧೬೯೭) ಬಸವಪ್ಪ ನಾಯಕ (೧೬೯೭-೧೭೧೪) ಇವರು ಅತ್ಯಂತ ಪ್ರಸಿದ್ಧಿಯನ್ನು ಹೊಂದಿದರು. ಸ್ವಾದಿ ಅರಸರಲ್ಲಿ ಸದಾಶಿವರಾಯ (೧೬೭೪-೧೬೯೭) ಮತ್ತು ಬಸವರಾಜ (೧೬೯೭-೧೭೪೫) ಇವರು ಅತ್ಯಂತ ಶೂರರೂ ಬಲಾಢ್ಯರೂ ಆಗಿದ್ದರು. ಈ ರಾಜ್ಯಗಳಲ್ಲಿ ಇಕ್ಕೇರಿ ರಾಜ್ಯದ ವಿಸ್ತಾರವು ಈಗಿನ ಮೈಸೂರಿನ ಉತ್ತರ ಮೂಲೆ, ಇಡೀ ಮಂಗಳೂರ ಜಿಲ್ಲೆ ಮತ್ತು ಕಾರವಾರ ಜಿಲ್ಲೆ, ಮಿರ್ಜಾನ ಹೊಳೆಯವರೆಗೆ ಮತ್ತು ಪೂರ್ವಕ್ಕೆ ಘಟ್ಟಗಳನ್ನು ದಾಟಿ ಧಾರವಾಡ ಜಿಲ್ಲೆಯಲ್ಲಿ ಸವಣೂರ ಮತ್ತು ರಾಣೆಬೆನ್ನೂರ ಈ ವರೆಗೂ ಹಬ್ಬಿತ್ತು. ಸ್ವಾದಿಯ ರಾಜ್ಯವು ಕಾರವಾರ ಜಿಲ್ಲೆಯಲ್ಲಿ ಈಗಿನ ಶಿರಸಿ, ಯಲ್ಲಾಪುರ, ಹಳ್ಳಿಯಾಳ, ಸುಪಾ, ಕಾರವಾರ ತಾಲೂಕಗಳು ಮತ್ತು ದಕ್ಷಿಣಕ್ಕೆ ಮಿರ್ಜಾನಹೊಳೆ ಮತ್ತು ಉತ್ತರಕ್ಕೆ ಗೋಮಾಂತಕ ಸೀಮೆ ಈ ವರೆಗೆ ಪಸರಿಸಿತ್ತು. ಈ ರಾಜ್ಯಗಳಲ್ಲದೆ ಈ ಪ್ರದೇಶಗಳಲ್ಲಿ ಕಾರ್ಕಳ, ಗೆರೆಸೊಪ್ಪೆ, ಮತ್ತು ಬೀಳಗಿ ಎಂಬ ಸಣ್ಣ ರಾಜ್ಯಗಳಿದ್ದು ಅವುಗಳ ರಾಜರು ಕೆಳದಿ ಅಥವಾ ಸ್ವಾದಿ ಅರಸರ ಮಾಂಡಲಿಕರಾಗಿ ಆಳು

ತ್ತಿದ್ದರು. ಕೆಲವು ಕಾಲ ಕಾರ್ಕಳದ ಭೈರಸು ಒಡೆಯರು ಅತ್ಯಂತ ಬಲಿಷ್ಠರಾಗಿದ್ದರು. ಆದರೆ ಅವರು ಕಡೆಗೆ ಕೆಳದಿಯ ವೆಂಕಟಪ್ಪನಾಯಿಕನಿಂದ ಜಯಿಸಲ್ಪಟ್ಟು ಅವರ ರಾಜ್ಯವು ಕೆಳದಿಯಲ್ಲಿ ಸೇರಿಸಲ್ಪಟ್ಟಿತು. ಈ ಮೇರೆಗೆ ಈ ಎರಡೂ ರಾಜ್ಯಗಳು ಹೈದರನಿಂದ ಗೆಲ್ಲಲ್ಪಡುವವರೆಗೂ ಈ ಸೀಮೆಯಲ್ಲಿ ಅತ್ಯಂತ ವೈಭವದಿಂದ ರಾಜ್ಯವಾಳಿದವು.

ವಿಜಯನಗರದ ರಾಜ್ಯವು ಹಾಳಾದ ಬಳಿಕ ಮುಸಲ್ಮಾನರ ಹಾವಳಿಗಳು ದಕ್ಷಿಣ ದೇಶದಲ್ಲೆಲ್ಲ ಪಸರಿಸಿದವು. ಆಗ ದೇಶದ ತುಂಬ ಸಣ್ಣ ಸಣ್ಣ ಪಾಳೆಯಗಾರರು ಉತ್ಪನ್ನರಾಗಿ ಕೊಲೆ ಸುಲಿಗೆಗಳು ನಿರಾತಂಕವಾಗಿ ಸಾಗಿದವು. ಯಾವ ಕರ್ನಾಟಕವು ವಿಜಯನಗರ ಭೂಪತಿಗಳ ಕಾಲದಲ್ಲಿ ಅತ್ಯಂತ ವೈಭವದಿಂದ ಮೆರೆಯುತ್ತ ಬಂದಿತ್ತೋ ಆ ದೇಶಕ್ಕೆ ಈ ಕಾಲಕ್ಕೆ ಅತ್ಯಂತ ಕನಿಕರ ಸ್ಥಿತಿಯು ಪ್ರಾಪ್ತವಾಯಿತು. ಮತ್ತು ಕರ್ನಾಟಕದ ಸಂಸ್ಕೃತಿಯು ನಾಶವಾಗುವ ಪ್ರಸಂಗವು ಒದಗಿ ಬಂದಿತ್ತು. ಮುಂದೆ ಕೆಲವು ಕಾಲದ ಮೇಲೆ ವಿಜಾಪುರ ಆದಿಲಶಾಹಿಯು ನಷ್ಟವಾಗಲಾಗಿ, ಮೊಗಲರ ದಾಳಿಗಳು ಇಮ್ಮಡಿಯಾಗಿ ದೇಶದಲ್ಲಿ ಹೆಚ್ಚಿದವು. ಔರಂಗಜೇಬನು ಸತ್ತ ತರುವಾಯ ಸಹ ದೇಶಕ್ಕೆ ಶಾಂತತೆಯು ಉತ್ಪನ್ನವಾಗಲಿಲ್ಲ. ಆಗ ಮೊಗಲರಿಗಿಂತಲೂ ದಾರುಣವಾದ ಮರಾಠರ ದಾಳಿಗಳು ಕರ್ನಾಟಕವನ್ನು ಕಂಗೆಡಿಸಹತ್ತಿದವು. ಈ ಸ್ಥಿತಿಯಲ್ಲಿ ಕರ್ನಾಟಕದ ಗತಿ ಏನಾಗಿರಬಹುದೆಂಬುದನ್ನು ವಾಚಕರು ಊಹಿಸಬಹುದು. ಕರ್ನಾಟಕದ ಅವನತಿಯ ಕಾಲವು ಅಂದಿನಿಂದಲೇ ಪ್ರಾರಂಭವಾಯಿತು ಎಂದು ಹೇಳಬಹುದು.

ಆದರೆ ಇದಕ್ಕೆ ಅಪವಾದಾತ್ಮಕವಾಗಿ ಮಂಗಳೂರ ಮತ್ತು ಕಾರವಾರ ಜಿಲ್ಲೆಗಳು ಮಾತ್ರ ಉಳಿದವು. ಆ ಕಾಲಕ್ಕೆ ಸ್ವಾದಿಯ ಮತ್ತು ಕೆಳದಿಯ ವೀರಶೈವ ರಾಜರು ಈ ಸೀಮೆಯಲ್ಲಿ ರಾಜ್ಯವಾಳಿ ಸುಖಶಾಂತಿಗಳನ್ನು ನೆಲೆಗೊಳಿಸಿದರು. ಆದ್ದರಿಂದ ಈ ಪ್ರದೇಶಗಳು ಅತ್ಯಂತ ಊರ್ಜಿತಾವಸ್ಥೆಗೆ ಬಂದವು. ಮತ್ತು ಇದರ ಪರಿಣಾಮವು ಈ ಭಾಗದಲ್ಲಷ್ಟೇ ಅಲ್ಲ, ಅವರ ರಾಜ್ಯಗಳಿಗೆ ಹೊರಗಿದ್ದ ಕರ್ನಾಟಕದ ಭಾಗಗಳ ಮೇಲೆಯೂ

ಸಹ ಒದಗಿ ಕರ್ನಾಟಕದ ಸಂಸ್ಕೃತಿ ಮತ್ತು ಸಂಪತ್ತು ಇವುಗಳು ಬಹಳ ಅಂಶದಿಂದ ಉಳಿಯಲಿಕ್ಕೆ ಕಾರಣವಾಯಿತು.

## ರಾಜಕೀಯ ಧೋರಣೆ

ಕೆಳದಿಯ ರಾಜರ ರಾಜಧಾನಿ ಶಹರಗಳು ಅನುಕ್ರಮವಾಗಿ ಇಕ್ಕೇರಿ, ಕೆಳದಿ, ಮತ್ತು ಬಿದನೂರ ಇವು ಇದ್ದವು. ಈ ಪಟ್ಟಣಗಳು ಗಟ್ಟದ ದುರ್ಗಮ ಪ್ರದೇಶಗಳಲ್ಲಿದ್ದು ಪರಚಕ್ರದಾಳಿಗಳಿಗೆ ದೂರಾಗಿದ್ದವು. ಕೆಲವು ಸಾರೆ ಮೊಗಲ ಮತ್ತು ಮರಾಠರ ದಾಳಿಗಳು ಈ ರಾಜ್ಯಗಳ ಮೇಲೆ ಬಂದೊದಗಿದವು. ಆದರೆ ಅವುಗಳಿಗೆ ಯಾವ ತರದ ಜಯವು ಬರಲಿಲ್ಲ. ದಕ್ಷಿಣಕ್ಕೆ ಮೈಸೂರ ಅರಸರು ಇದ್ದು ಅವರು ಕೆಳದಿಯ ರಾಜರನ್ನು ಗೆಲ್ಲುವಷ್ಟು ಪ್ರಬಲರು ಆಗಿರಲಿಲ್ಲ. ಮತ್ತೊಂದು ಕಡೆಗೆ ಶೂರರಾದ ಕೊಡಗಗಿದ್ದರು. ಅವರ ಮೇಲೆ ಕೆಳದಿಯ ಅರಸರ ಸಂಬಂಧಿಕರೇ ರಾಜ್ಯವಾಳುತ್ತಿದ್ದವರಿಂದ ಅವರಿಂದಲಾದರೂ ಇವರಿಗೆ ಹಾನಿಯು ತಟ್ಟಲಿಲ್ಲ. ಹೀಗೆ ಬಲಾಢ್ಯ ಪರಚಕ್ರಗಳ ದಾಳಿಯು ಇವರ ರಾಜ್ಯದಲ್ಲಿ ಸಂಘಟಿಸಲಿಲ್ಲ. ಆದರೆ ಸ್ವಾದಿಯ ಅರಸರ ಮೇಲೆ ಬಲಾಢ್ಯರಾದ ವಿಜಾಪೂರ ಬಾದಶಹ ಮತ್ತು ಮರಾಠರ ಮೇಲೆ ಮತ್ತು ಪೋರ್ತುಗೀಜರ ದಾಳಿಗಳು ಮೇಲಿಂದ ಮೇಲೆ ಬಂದು ಬೀಳುತ್ತಿದ್ದವು. ಆದರೆ ಆಗ ಸದಾಶಿವ ನಾಯಕನೂ, ಅವನ ಮಗನಾದ ಬಸವರಾಜನು ಅತ್ಯಂತ ಶೂರ ಪುರುಷರಾಗಿದ್ದರು. ಇವರಾರೂ ಇವರ ದಾಳಿಗಳಿಗೆ ಸಡ್ಡೆ ಮಾಡಲಿಲ್ಲ. ಕೆಳದಿಯ ಶಿವಪ್ಪನಾಯಕನ ಕಾಲಕ್ಕೆ ಆತನ ದಂಡು ೫೦,೦೦೦ ವರೆಗೆ ಇತ್ತೆಂದು ಲಿಯನೋರ್ಡೋರ್ ಡೀಜ ಎಂಬ ಪ್ರವಾಸಿಯು ಬರೆದಿದ್ದಾನೆ. ಮತ್ತು ಸ್ವಾದಿಯ ಅರಸನ ಹತ್ತಿರ ೩೦೦೦ ರಾವುತರೂ, ೧೨೦೦೦ ಕಾಲಾಳುಗಳೂ ಇದ್ದರೆಂದು ಫ್ರಾಯರ ಎಂಬ ಪ್ರವಾಸಿಯು ಬರೆದಿದ್ದಾನೆ. ಹೀಗೆ ಈ ಉಭಯ ರಾಜರು ಸ್ವಸಂರಕ್ಷಣೆ ಮಾಡಿಕೊಳ್ಳಲಿಕ್ಕೆ ಸಮರ್ಥರಾಗಿದ್ದರು. ಆ ಮೇರೆಗೆ ಇವರು ಆ ಬಿಕ್ಕಟ್ಟಿನ ಕಾಲದಲ್ಲಿ ಪರಚಕ್ರಗಳ ದಾಳಿಗಳನ್ನು ಎದುರಿಸಲು ಸಮರ್ಥರಾಗಿದ್ದರು. ಹೀಗೆ ಅವರು ಸಮರ್ಥರಾಗಿದ್ದರೂ ಅವರು ತಮ್ಮ ಹದ್ದಿಯನ್ನು ದಾಟಿ ಪರ

ರಾಜರನ್ನು ಕೆಣಕಲಿಕ್ಕೆಯತ್ನಿಸಲಿಲ್ಲ. ಅವರು ಪ್ರಜಾನುರಾಗಿಗಳಾಗಿ ಶಾಂತತೆಯಿಂದ ರಾಜ್ಯವನ್ನು ಆಳಿದರು.

ತಾಳಿಕೋಟೆಯ ಯುದ್ಧದಲ್ಲಿ ವಿಜಯನಗರವು ಹಾಳಾದ ಬಳಿಕ ಕೆಳದಿಯಲ್ಲಿ ರಾಮರಾಜನು (೧೫೭೦-೧೫೮೨) ಆಳುತ್ತಿದ್ದನು. ಅವನು ತನ್ನ ರಾಜ್ಯದ ಸುರಕ್ಷತೆಗೋಸ್ಕರ ಪ್ರಯತ್ನಿಸುವದು ಅವನ ಮೊದಲಿನ ಕಾರ್ಯವಾಯಿತು. ಅದ್ದರಿಂದ ಅವನು ತನ್ನ ರಾಜ್ಯದಲ್ಲಿ ಕೋಟೆಕೊತ್ತಲುಗಳನ್ನು ತಕ್ಕ ಸ್ಥಳಗಳಲ್ಲಿ ಕಟ್ಟಿಸಲು ಉದ್ಯುಕ್ತನಾದನು. ಅವನು ಬಗ್ಗವಾಡಿ, ಹೊಸಂಗಡಿ, ಮೊಸಕಾಡು, ಹೋಳಿಯ ಬೈಲೂರು ಈ ಸ್ಥಳಗಳಲ್ಲಿ ಕೋಟೆಗಳನ್ನು ಕಟ್ಟಿಸಿದ್ದಲ್ಲದೆ, ಮಂಗಳೂರಜಿಲ್ಲೆಯಲ್ಲಿಯ ಬಹುತರ ಹಳೆ ಕೋಟೆಗಳನ್ನು ಸುಧಾರಿಸಿದನು. ರಾಣಿ ಚೆನ್ನಮ್ಮಾಜಿಯು ತನ್ನ ಹೆಸರಿನಿಂದ ಚೆನ್ನಗಿರಿ ದುರ್ಗವೆಂಬ ಬಲವಾದ ಕೋಟೆಯನ್ನು ಕಟ್ಟಿಸಿದಳು. ಇದೇ ಮೇರೆಗೆ ಬೇರೆ ಬೇರೆ ರಾಜರೂ ರಾಜ್ಯದ ಸುರಕ್ಷತೆಗೋಸ್ಕರ ಅಲ್ಲಲ್ಲಿ ದುರ್ಗಗಳನ್ನು ಕಟ್ಟಿಸಿದರು. ಅವರು ಬಂದರ ಸ್ಥಳಗಳನ್ನು ವಿಶೇಷವಾಗಿ ಭದ್ರಗೊಳಿಸಿದರು. ಸ್ವಾದಿಯ ಅರಸನಾದ ಬಸವರಾಜನು ೧೭೧೫ರಲ್ಲಿ ಕಾರವಾರದ ಹತ್ತರವಿರುವ ಸದಾಶಿವ ಗಢವನ್ನು ಕಟ್ಟಿಸಿದನು. ಮತ್ತು ಇದರ ಸಮೀಪದಲ್ಲಿರುವ ಕೂರ್ಮಗಡವೂ ಅವನಿಂದ ಕಟ್ಟಿಸಲ್ಪಟ್ಟಿತು. ಈ ರಾಜರು ಈ ಕ್ರಮವನ್ನು ಅನುಸರಿಸಿದ್ದರಿಂದ ಬಲಾಢ್ಯರಾದ ಪರಚಕ್ರಗಳ ದಾಳಿಗಳು ಎಂದೂ ಇವರ ಮೇಲೆ ಸಫಲವೊಂದಲಿಲ್ಲ. ರಾಣಿ ಚೆನ್ನಮ್ಮಾಜಿಯು ರಾಜಾರಾಮನಿಗೆ ಆಶ್ರಯ ಕೊಟ್ಟ ತಪ್ಪಿಗಾಗಿ ಮೊಗಲರ ಸೈನ್ಯವು ಆಕೆಯ ಮೇಲೇರಿ ಬರಲು, ಅವರನ್ನು ಆಕೆಯು ಪರಾಭವ ಮಾಡುವಷ್ಟು ಸಮರ್ಥಳಾದಳು. ಸಂಭಾಜಿಯ ದಾಳಿಗಳು ೧೬೭೮ ರಿಂದ ೧೬೮೫ರವರೆಗೆ ಸ್ವಾದಿಯ ಅರಸರ ಮೇಲೆ ಎರಡು ಮೂರು ಸಾರೆ ಮಾಡಲ್ಪಟ್ಟವು. ಒಂದರಲ್ಲಿ ಸ್ವತಃ ಸಂಭಾಜಿಯೇ ತನ್ನ ಸೈನ್ಯವನ್ನು ತೆಗೆದುಕೊಂಡು ಅವರ ರಾಜ್ಯವನ್ನು ನುಗ್ಗಿದನು. ಆದರೆ ಅವುಗಳೆಲ್ಲ ಸಂಪೂರ್ಣವಾಗಿ ನಿಷ್ಫಲವಾದವೆಂದು ಆರ್ಮ ಎಂಬ ಇತಿಹಾಸಕಾರನು ಬರೆದಿದ್ದಾನೆ. ಈ ಮೇರೆಗೆ ಈ ವೀರಶೈವ ರಾಜರು ಯುದ್ಧಗಳಲ್ಲಿ ಜಯ ಹೊಂದಿದರೂ ಕಾರಣವಿ

ಲ್ಲದೆ ತಮ್ಮ ಪ್ರದೇಶವನ್ನು ಬಿಟ್ಟುಕೊಟ್ಟು ಪರನಾಡುಗಳ ಮೇಲೆ ಬಂದು ನೆಲೆಗೊಳ್ಳಲಿಕ್ಕೆ ಯತ್ನಿಸಿದ್ದು ಇತಿಹಾಸದಲ್ಲಿ ಕಂಡು ಬರುವದಿಲ್ಲ. ಹೀಗೆ ಇವರು ೧೬ನೇ ಶತಮಾನದ ಮಧ್ಯದಿಂದ ೧೮ನೇ ಶತಮಾನದ ಮಧ್ಯದವರೆಗೂ ಅಂದರೆ ಸುಮಾರು ಇನ್ನೂರು ವರ್ಷಗಳವರೆಗೆ ಕಾರವಾರ ಮತ್ತು ಮಂಗಳೂರು ಜಿಲ್ಲೆಗಳಲ್ಲಿ ಸ್ಥಿರವಾಗಿ ರಾಜ್ಯವಾಳಿದರು.

## ವ್ಯಾಪಾರದ ಅಭಿವೃದ್ಧಿ

ಹೀಗೆ ಈ ರಾಜ್ಯಗಳು ಶಾಂತತೆಯಿಂದ ರಾಜ್ಯವಾಳುವ ಧೋರಣವನ್ನು ಸ್ವೀಕರಿಸಿದ್ದರಿಂದ ಆಗ ಇಡೀ ಕರ್ನಾಟಕದ ವ್ಯಾಪಾರವು ಬೆಳೆಯಲು ಅನುಕೂಲವಾಯಿತು. ವಿಜಯನಗರದ ಅರಸರುಗಳ ಕಾಲದಲ್ಲಿ ಪರದೇಶದೊಡನೆ ವ್ಯಾಪಾರವು ಕರ್ನಾಟಕದ ಬಂದರಗಳೊಳಗಿಂದ ಬಹು ಭರದಿಂದ ಸಾಗುತ್ತಿತ್ತು. ಮುಂದೆ ಆ ಮಹತ್ವದ ರಾಜ್ಯವು ನಷ್ಟವಾದ ಬಳಿಕ ಸಹ ಈ ಮೇಲ್ಕೈದ ರಾಜರುಗಳು ಕರ್ನಾಟಕದ ವ್ಯಾಪಾರವು ಅವ್ಯಾಹತವಾಗಿ ನಡೆಯುವಂತೆ ವ್ಯವಸ್ಥೆ ಮಾಡಿದರು. ಆದ್ದರಿಂದ ಕರ್ನಾಟಕದ ಉಳಿದ ಭಾಗಗಳಲ್ಲಿ ಅವ್ಯವಸ್ಥೆಯು ಇದ್ದರೂ ಈ ಬಂದರಗಳೊಳಗಿಂದ ಯುರೋಪ ಖಂಡಕ್ಕೂ ಹಿಂದುಸ್ಥಾನದ ಬೇರೆ ಬೇರೆ ಭಾಗಗಳಿಗೂ ದೊಡ್ಡ ವ್ಯಾಪಾರವು ಸಾಗುತ್ತಿತ್ತು. ಕೆಳದಿ ರಾಜರ ವ್ಯಾಪಾರಿ ಬಂದರುಗಳು ಹೊನ್ನಾವರ, ಬಾರ್ಕೂರ, ಮಂಗಳೂರ, ಭಟಕಳ, ಕುಂದಾಪುರ, ಕಲ್ಯಾಣಪುರ ಮತ್ತು ಮಿರ್ಜಾನ ಇವು ಮುಖ್ಯವಾಗಿದ್ದವು. ಸೋಂದೆ ಅರಸರ ಬಂದರುಗಳು ಅಂಕೋಲಾ, ಕಾರವಾರ, ಕದರ, ಇವುಗಳು ಮುಖ್ಯವಾಗಿದ್ದವು. ವ್ಯಾಪಾರಕ್ಕೆ ತೊಂದರೆಯಾಗಬಾರದೆಂದು ಈ ರಾಜರು ತಮ್ಮ ರಾಜ್ಯದ ಕಾಡು ಪ್ರದೇಶಗಳೊಳಗಿಂದ ತಮ್ಮ ಬಂದರ ಸ್ಥಳಗಳವರೆಗೂ ದೊಡ್ಡ ದೊಡ್ಡ ರಸ್ತೆಗಳನ್ನು ಮಾಡಿಸಿದ್ದರು. ಫ್ರಾಯರ ಎಂಬ ಪ್ರವಾಸಿಯು ೧೬೭೩ರಲ್ಲಿ ಕೆಳದಿಯ ರಾಜ್ಯದಲ್ಲಿ ಬಂದಿದ್ದು, ಅವನು ಇಲ್ಲಿಯ ಜನರು ಇಕ್ಕಟ್ಟಾದ ದಾರಿಗಳಿಂದ ಪ್ರವಾಸ ಮಾಡದೆ ದೊಡ್ಡ ದೊಡ್ಡ ಮಾರ್ಗಗಳಿಂದ ದಾರಿ ತೋರಿಸುವವರ ಸಹಾಯವಿಲ್ಲದೆ ಪ್ರವಾಸ ಮಾಡಲು

ಅನುಕೂಲತೆಗಳಿವೆ" ಎಂದು ಬರೆದಿದ್ದಾನೆ. ೧೭೨೦ರಲ್ಲಿ ಹೆಮಿಲ್ಟನ್ ಎಂಬ ಪ್ರವಾಸಿಯಾದರೂ "ಈ ರಾಜ್ಯಗಳಲ್ಲಿ ಅತ್ಯುತ್ತಮವಾದ ವ್ಯಾಪಾರಕ್ಕೆ ಅನುಕೂಲವಾದ ದೊಡ್ಡ ಮಾರ್ಗಗಳು ಇವೆ" ಎಂದು ಬರೆದಿದ್ದಾನೆ. ಇದರಿಂದ ಕರ್ನಾಟಕದ ಫಲಪ್ರದವಾದ ಸೀಮೆಯಿಂದ ವ್ಯಾಪಾರವು ಈ ಉಭಯ ಕನ್ನಡ ಜಿಲ್ಲೆಗಳೊಳಗಿಂದ ಅವ್ಯಾಹತವಾಗಿ ನಡೆಯುತ್ತಿತ್ತು. ಕಬ್ಬಿಣ ಮತ್ತು ಅಕ್ಕಿ ಈ ಸರಕುಗಳು ಭಟಕಳ ಮತ್ತು ಮಿರ್ಜಾನ ಬಂದರಗಳೊಳಗಿಂದ ಹಾಯ್ದು ಹಿಂದುಸ್ಥಾನದ ಬೇರೆ ಬೇರೆ ಪ್ರದೇಶಗಳಿಗೆ ಹೋಗುತ್ತಿದ್ದವು. ಮತ್ತು ಸಕ್ಕರಿ ನಾನಾತರದ ಔಷಧೀ ಪದಾರ್ಥಗಳು ಲವಂಗ, ಸುಂಠಿ ಮುಂತಾದ ಮಸಾಲೆಯ ಸಾಮಾನುಗಳು ಯುರೋಪ ಖಂಡಕ್ಕೆ ಈ ರಾಜರ ಎಲ್ಲ ಬಂದರಗಳೊಳಗಿಂದ ಹೇರಳವಾಗಿ ಹೋಗುತ್ತಿದ್ದವು. ತಾಮ್ರ ಮತ್ತು ಪಾದರಸ ಇವುಗಳು ಯುರೋಪದಿಂದ ಹಿಂದುಸ್ಥಾನಕ್ಕೆ ಬರುತ್ತಿದ್ದವು ಮಲಬಾರದ ಬಂದರುಗಳಿಂದ ತೆಂಗಿನಕಾಯಿ ಎಣ್ಣೆ ಇಂಥ ಜಿನಸುಗಳು ಈ ಬಂದರಗಳೊಳಗೆ ಬರುತ್ತಿದ್ದವು. ಕೆಳದಿ ರಾಜರು ತಮ್ಮದೊಂದು ಸ್ವತಂತ್ರ ವ್ಯಾಪಾರಿ ಹಡಗುಪಡೆಯನ್ನು ಇಟ್ಟಿದ್ದರು. ಅವರ ಹಡಗುಗಳು ವ್ಯಾಪಾರಕ್ಕೋಸ್ಕರ ಹಿಂದುಸ್ಥಾನದ ಬೇರೆ ಬೇರೆ ಬಂದರಗಳಿಗಷ್ಟೇ ಅಲ್ಲ, ಪರ್ಶಿಯನ್ ಆಖಾತದವರೆಗೂ ಮುಖ್ಯವಾಗಿ ಕುದುರೆಗಳ ವ್ಯಾಪಾರಕ್ಕೆ ಹೋಗುತ್ತಿದ್ದವು. ಈ ಸಂಗತಿಯು ೧೭೧೪ರಲ್ಲಿ ಕೆಳದಿ ಬಸವಪ್ಪನಾಯಕ ಮತ್ತು ಪೋರ್ತುಗೀಜ ಇವರ ನಡುವೆ ಆದ ಒಪ್ಪಂದದಿಂದ ಗೊತ್ತಾಗುತ್ತದೆ. ಈ ಮೇರೆಗೆ ವೀರಶೈವ ರಾಜರು ವ್ಯಾಪಾರಕ್ಕೆ ಉತ್ತೇಜನ ಕೊಡುತ್ತಿದ್ದರಿಂದ ಅನೇಕ ಯುರೋಪಿಯನ ವ್ಯಾಪಾರಿಗಳು ಕರ್ನಾಟಕದ ಬಂದರಗಳಲ್ಲಿ ತಮ್ಮ ಅಂಗಡಿಗಳನ್ನು ಸ್ಥಾಪಿಸಿದರು. ಇಂಗ್ಲೀಷರೂ ಪೋರ್ತಗೀಜರೂ ಈ ರಾಜರೊಡನೆ ಮೇಲಿಂದ ಮೇಲೆ ವ್ಯಾಪಾರೀ ಒಪ್ಪಂದಗಳನ್ನು ಮಾಡಿಕೊಂಡು, ಈ ಬಂದರಗಳಲ್ಲಿ ತಮ್ಮ ಅಂಗಡಿಗಳನ್ನು ಇಟ್ಟಿದ್ದರು. ಇಂಗ್ಲೀಷರು ಕಾರವಾರದಲ್ಲಿ ತಮ್ಮದೊಂದು ದೊಡ್ಡ ಅಂಗಡಿಯನ್ನು ಸ್ಥಾಪಿಸಿದರು. ಇವರು ಹುಬ್ಬಳ್ಳಿ ಮೊದಲಾದ ಸ್ಥಳಗಳಲ್ಲಿ ಐವತ್ತುಸಾವಿರ ನೇಯಿಕಾರರ ಮಗ್ಗಗಳನ್ನು

ಹಿಡಿದು ಅಲ್ಲಿ ಆದ ಬಟ್ಟೆಗಳನ್ನು ಯುರೋಪಖಂಡಕ್ಕೆ ಸಾಗಿಸುತ್ತಿದ್ದರು. ಅವರು ಹಲ್ಯಾಳದಲ್ಲಿ ತಮ್ಮ ಅಂಗಡಿಯ ಶಾಖೆಯನ್ನು ಇಟ್ಟಿದ್ದರು. ಬ್ರೂಸಿಸ್ ಎಂಬ ಇತಿಹಾಸಕಾರನು ಕಾರವಾರ ಬಂದರದಿಂದ ಹೋಗುತ್ತಿದ್ದಷ್ಟು ಉತ್ತಮವಾದ ಅರಿವೆಯು ಯುರೋಪಖಂಡಕ್ಕೆ ಯಾವ ಬಂದರದಿಂದಲೂ ಹೋಗುತ್ತಿರಲಿಲ್ಲವೆಂದು ತನ್ನ ಗ್ರಂಥದಲ್ಲಿ ಬರೆದಿದ್ದಾನೆ. ಈ ಸಂಗತಿಗಳ ಮೇಲಿಂದ ಎಂಥ ಪ್ರಚಂಡವಾದ ವ್ಯಾಪಾರವು ಈ ವೀರಶೈವ ರಾಜರುಗಳ ಬಂದರುಗಳೊಳಗಿಂದ ಮೊದಲಿಗೆ ಸಾಗುತ್ತಿತ್ತು ಎಂಬುದನ್ನು ನಾವು ತರ್ಕಿಸಬಹುದು. ಆಗ ಇಲ್ಲಿ ಬಂದ ಯುರೋಪಿಯನ್ ಪ್ರವಾಸಿಗಳು ಹ್ಯಾಗೆ ಫ್ಲಾರೆನ್ಸದ ಅರಸರು ವ್ಯಾಪಾರೋದ್ಯೋಗಗಳಲ್ಲಿ ತೊಡಗಿರುವರೋ ಹಾಗೆಯೇ ಈ ಅರಸರಾದರೂ ತೊಡಗಿದ್ದಾರೆಂದು ಅವರನ್ನು ಬಣ್ಣಿಸಿ, ನುಡಿದಿರುವರು. ಆ ಕಾಲಕ್ಕೆ ಇವರ ರಾಜ್ಯದಲ್ಲಿ ಬ್ರಾಹ್ಮಣರು, ಮಠಸ್ಥರು ಸಹ ನೂರಾರು ಹೇರಿನ ಎತ್ತುಗಳನ್ನು ಇಟ್ಟುಕೊಂಡು ಘನತರವಾದ ವ್ಯಾಪಾರದಲ್ಲಿ ತೊಡಗಿರುತ್ತಿದ್ದರು. ಇದರಿಂದ ಸಹಜಿಕವಾಗಿಯೇ ದೇಶದಲ್ಲೆಲ್ಲ ಸಂಪತ್ತು ಮಿತಿಮೀರಿ ಬೆಳೆಯಿತು. ಇಕ್ಕೇರಿ ವರಹಗಳೆಂಬ ಬಂಗಾರದ ನಾಣ್ಯಗಳು ಇಡೀ ಕನ್ನಡ ಜಿಲ್ಹೆಗಳಲ್ಲಷ್ಟೇ ಅಲ್ಲ, ಮೈಸೂರು ಮತ್ತು ಧಾರವಾಡ ಸೀಮೆಗಳಲ್ಲಿ ಅಪಾರವಾಗಿ ನಡೆಯುತ್ತಿದ್ದವು. ಈ ರಾಜ್ಯಗಳ ಸಂಪತ್ತಿಯನ್ನು ನೋಡಿ ಮರಾಠರೂ, ಮುಸಲ್ಮಾನರೂ ಈ ಪ್ರಾಂತವನ್ನು ನುಗ್ಗಿ ಸೂರೆಮಾಡಲಿಕ್ಕೆ ಮೇಲಿಂದ ಮೇಲೆ ಪ್ರಯತ್ನಿಸುತ್ತಿದ್ದರು. ಇದರ ಮೇಲಿಂದ ಈ ಪ್ರದೇಶಗಳು ಆಗಿನ ಕಾಲಕ್ಕೆ ಪರರಾಜರ ಕಣ್ಣಿಗೆ ಎಷ್ಟು ಮಾತ್ಸರ್ಯಕ್ಕೆ ಕಾರಣವಾಗಿದ್ದವೆಂಬುದು ಗೊತ್ತಾಗುತ್ತದೆ. ಶಿವಾಜಿಯೂ ಸಂಭಾಜಿಯೂ ನಾಲ್ಕೈದು ಸಾರೆ ಮುತ್ತಿಗೆಯನ್ನೂ ಕರ್ನಾಟಕದ ಬಂದರುಗಳನ್ನೂ ಈ ಕಾಲಕ್ಕೆ ಸುಲಿಯಲಿಕ್ಕೆ ಯತ್ನಿಸಿದರು. ಆದರೆ ಅವೆಲ್ಲವುಗಳಿಂದ ಯಾವ ಮಹತ್ವದ ಅಹಿತ ಪರಿಣಾಮಗಳು ಈ ರಾಜ್ಯಗಳ ಮೇಲೆ ಒದಗಲಿಲ್ಲ. ಇದರ ಶ್ರೇಯಸ್ಸೆಲ್ಲ ಈ ವೀರಶೈವ ರಾಜರು ಕೈಕೊಂಡ ರಾಜ. ಪದ್ಧತಿಯ ಕಡೆಗೆ ಇರುತ್ತದೆಂದು ನಿರ್ವಿವಾದವಾಗಿ ನಾವು ಹೇಳಬಹುದು.

## ಒಕ್ಕಲುತನ ಸುಧಾರಣೆ

ಈ ರಾಜರ ಆಶ್ರಯದಿಂದ ಈ ಎರಡೂ ಜಿಲ್ಲೆಗಳಲ್ಲಿ ಒಕ್ಕಲುತನವಾದರೂ ಅತ್ಯಂತ ಊರ್ಜಿತಾವಸ್ಥೆಗೆ ಬಂದಿತು. ಈ ಭಾಗದಲ್ಲಿ ಶುಂಠಿ, ಮೆಣಸು ಅನೇಕ ತರದ ಮಸಾಲೆಯ ಜೀನಸುಗಳು, ಕಬ್ಬು, ಎಲೆ, ಅಡಿಕೆ ಇಂಥ ಕಿಮ್ಮತ್ತಿನ ಜೀನಸುಗಳು ಹೇರಳವಾಗಿ ಬೆಳೆಯುತ್ತಿದ್ದವು. ಇವುಗಳನ್ನು ಬೆಳೆಯತಕ್ಕ ತೋಟಗಳು ಈ ದೇಶದಲ್ಲಿ ಅಸಂಖ್ಯವಾಗಿದ್ದವು. ಗೆರಸೊಪ್ಪೆಯ ಸೀಮೆಯಲ್ಲಿ ಶುಂಠಿ ಬಹಳ ಬೆಳೆಯುತ್ತಿದ್ದು, ಅಲ್ಲಿ ಆಳುತ್ತಿದ್ದ ರಾಣಿಗೆ "ಶುಂಠಿಯ ರಾಣಿ" ಎಂಬ ಹೆಸರು ಯುರೋಪಖಂಡದಲ್ಲಿ ಉಂಟಾಗಿತ್ತು. ಅದರಂತೆಯೇ ಸ್ವಾದಿಯ ಪ್ರಾಂತದಲ್ಲಿಯೂ ಶುಂಠಿಯು ಹೆಚ್ಚಾಗಿ ಬೆಳೆಯುತ್ತಿತ್ತು. ಫ್ರಾಯರ ಎಂಬ ಪ್ರವಾಸಿಯು "ಸ್ವಾದಿಯ ಸುತ್ತಮುತ್ತಲೂ ಬೆಳೆಯುತ್ತಿರುವ ಶುಂಠಿಯಷ್ಟು ಉತ್ತಮವೂ ಕಿಮ್ಮತ್ತಿನದೂ ಪೃಥ್ವಿಯಲ್ಲಿ ಎಲ್ಲಿಯೂ ಇಲ್ಲ" ಎಂದು ೧೬೭೩ರಲ್ಲಿ ಬರೆದಿರುವನು. ಈ ಶುಂಠಿಯು ಬೆಳೆಯುತ್ತಿದ್ದ ಪ್ರದೇಶದಿಂದ ಅರಸನಿಗೆ ಮೂವತ್ತು ಲಕ್ಷ ಹೊನ್ನು ಉತ್ಪನ್ನವಾಗುತ್ತಿತ್ತು ಎಂದು ಇದೇ ಪ್ರವಾಸಿಯು ಬರೆದಿರುವನು. ಇದರ ಮೇಲಿಂದ ಅದನ್ನು ಬೆಳೆಸುವ ರೈತರಿಗೆ ಎಷ್ಟು ಲಾಭವು ಆಗುತ್ತಿರಬಹುದೆಂದೆಂಬುದನ್ನು ವಾಚಕರು ತಾವೇ ತರ್ಕಿಸಬಹುದು. ಪೆವಿಲ್ಲಿನ್ ಎಂಬ ಪ್ರವಾಸಿಯು ೧೬೬೦ರಲ್ಲಿ ಈ ಸ್ವಾದಿಯ ಪ್ರಾಂತದ ಬಗ್ಗೆ "ಇಲ್ಲಿಯ ಯಾವತ್ತೂ ಬಂದರಗಳು ನಾನಾಬಗೆಯ ಧಾನ್ಯಗಳಿಂದ ತುಂಬಿ ಹೋಗಿವೆ. ಮತ್ತು ಇಲ್ಲಿ ಬೆಳೆಯುತ್ತಿದ್ದ ಶುಂಠಿಯಷ್ಟು ಉತ್ತಮವಾದ ಶುಂಠಿಯು ಹಿಂದುಸ್ಥಾನದಲ್ಲಿ ಎಲ್ಲಿಯೂ ಬೆಳೆಯುವದಿಲ್ಲ" ಎಂದು ಬರೆದಿದ್ದಾನೆ. ಅದೇ ಮೇರೆಗೆ ೧೬೭೦ರಲ್ಲಿ ಬ್ಯಾಲ್ಡಿಯಸ್ ಎಂಬ ಪ್ರವಾಸಿಯು "ಕೆನರಾ ದೇಶವು ಅಕ್ಕಿ ಮತ್ತು ಬೇರೆ ಧಾನ್ಯಗಳಿಂದ ತುಂಬಿಕೊಂಡಿರುತ್ತದೆ. ಬೇಕಾದಂಥ ಕೆಲಸ ಮಾಡಲು ಸಮರ್ಥರಾದ ಆರೋಗ್ಯವುಳ್ಳ ದೃಢಕಾಯರಾದ ಜನರಿಂದ ಈ ಪ್ರದೇಶವು ತುಂಬಿರುತ್ತದೆ" ಎಂದು ಬರೆದಿದ್ದಾನೆ. ಈ ಸಂಗತಿಗಳ ಮೇಲಿಂದ ಈ ಪ್ರಾಂತದ ಆಗಿನ ಒಕ್ಕಲುತನದ ಸ್ಥಿತಿಯಾದರೂ ಎಷ್ಟು ಊರ್ಜಿತಾ

ವಸ್ಥೆಯಲ್ಲಿ ಇತ್ತು ಮತ್ತು ಒಕ್ಕಲಿಗರು ಎಷ್ಟು ಸುಖಿಯಾಗಿದ್ದರು ಎಂಬುದನ್ನು ವಾಚಕರು ತಾವಾಗಿಯೇ ಊಹಿಸಬಹುದು.

## ದೊಡ್ಡ ಪಟ್ಟಣಗಳ ಪ್ರಾದುರ್ಭಾವವು

ಈ ವೀರಶೈವರಾಜರ ಪೋಷಣೆಯಿಂದ ವ್ಯಾಪಾರ ಒಕ್ಕಲುತನವು ಬೆಳೆದದ್ದರಿಂದ ಸ್ವಾಭಾವಿಕವಾಗಿ ಈ ಪ್ರದೇಶಗಳಲ್ಲಿ ದೊಡ್ಡ ದೊಡ್ಡ ಪಟ್ಟಣಗಳು ಉದ್ಭವಿಸಿದವು. ಕಾರವಾರ ಮತ್ತು ಮಂಗಳೂರು ಜಿಲ್ಲೆಗಳಲ್ಲಿ ಸಾಂಪ್ರತ ಕಾಲಕ್ಕೆ ದೊಡ್ಡ ಪಟ್ಟಣಗಳೇ ಇಲ್ಲ. ಭಯಂಕರವಾದ ಅರಣ್ಯವು ಮಾತ್ರ ಗ್ರಾಮಗಳನ್ನು ಸುತ್ತಿಕೊಂಡು, ಘೋರ್ಗರೆಯುತ್ತದೆ. ಇಲ್ಲಿ ಯಾವ ತರದ ಕಲಾ ಕೌಶಲ್ಯಗಳು ಇರುವದಿಲ್ಲ. ಆದರೆ ಈ ಸ್ಥಿತಿಯು ಮೊದಲಿನ ಕಾಲದಲ್ಲಿ ಇರಲಿಲ್ಲ. ಸ್ವಾದಿಯ ರಾಜ್ಯದಲ್ಲಿ ಬಿಳ್ಗಿ, ಸಾಂಬ್ರಾಣಿ ಕಾರವಾರ, ಅಂಕೋಲಾ, ಮಿರ್ಜಾನ ಇವು ದೊಡ್ಡ ಪಟ್ಟಣಗಳಾಗಿದ್ದವು. ಇಟಲಿಯ ಪ್ರವಾಸಿಯಾದ ಗ್ಯಾಮೆಲಿಯು ೧೬೯೫ರಲ್ಲಿ ಸ್ವಾದಿರಾಜ್ಯದಲ್ಲಿ ಪ್ರವಾಸಮಾಡಿದ್ದು ಇವನು "ಅರಸನು ಈಗ ಸಾಮ್ರಾಜ್ಯದಲ್ಲಿ ವಾಸಿಸುತ್ತಾನೆ. ಇಲ್ಲಿ ದೊಡ್ಡ ವ್ಯಾಪಾರವು ಇದೆ, ಈ ಗ್ರಾಮದಿಂದ ಅವನಿಗೆ ಮೂರು ಲಕ್ಷ ರೂಪಾಯಿಗಳ ಉತ್ಪನ್ನವು ಆಗುತ್ತದೆ" ಎಂದು ಬರೆದಿದ್ದಾನೆ. ಇದರಿಂದ ಈ ಗ್ರಾಮವು ಮೊದಲಿಗೆ ಎಷ್ಟು ಊರ್ಜಿತಾವಸ್ಥೆಯಲ್ಲಿ ಇರಬಹುದೆಂಬುದನ್ನು ವಾಚಕರು ತರ್ಕಿಸಬಹುದು. ಇದೇ ಮೇರೆಗೆ ಕೆಳದಿಯ ರಾಜ್ಯದಲ್ಲಿ ಅನೇಕ ದೊಡ್ಡ ಶಹರಗಳು ಉತ್ಪನ್ನವಾಗಿದ್ದವು. ಅವುಗಳಲ್ಲಿ ಬಿದನೂರು ರಾಜಧಾನಿಯು ಅತ್ಯಂತ ಪ್ರಸಿದ್ಧವು. ಅದು ಬಹಳ ವಿಸ್ತೃತವಾದ ಪಟ್ಟಣವಾಗಿತ್ತು. ಅದರ ಸುತ್ತಳತೆಯು ೮ ಮೈಲು ಇದ್ದು ಅಲ್ಲಿ ಶ್ರೀಮಂತರ ಸುಂದರವಾದ ಭವನಗಳು ಅಸಂಖ್ಯಾತವಾಗಿದ್ದವು. ಇರಾಣದ ರಾಯಭಾರಿಯಾದ ಅಬ್ದುಲ್ ರಝಾಕ್ಕನು "ಬಿದನೂರು ರಾಜಮಂದಿರಗಳಂಥ ಮನೆಗಳಿಂದಲೂ, ದೇವಕನ್ನಿಕೆಯರಂಥ ಸ್ತ್ರೀಯರಿಂದಲೂ ತುಂಬಿಕೊಂಡಿದೆ" ಎಂದು ಬರೆದಿದ್ದಾನೆ. ಇದೇ ಮೇರೆಗೆ ಇಕ್ಕೇರಿಯಾದರೂ ದೊಡ್ಡ ಪಟ್ಟಣವಾಗಿತ್ತು, ಈ ಪಟ್ಟಣದ ಬಗ್ಗೆ

ಡಿಲಾವೆಲ್ ಎಂಬ ಪ್ರವಾಸಿಯು “ಇದಕ್ಕೆ ಮೂರುಸುತ್ತಿನ ಕೋಟೆಯು ಇದ್ದು, ಅದು ಒಂದು ಸುಂದರವಾದ ಮೈದಾನಿನಲ್ಲಿ ಇದೆ. ಪಟ್ಟಣವು ಬಹಳ ದೊಡ್ಡದಿದೆ. ಅದು ಅನೇಕ ಗಿಡಗಳಿಂದ ಆಚ್ಛಾದಿತವಾಗಿ ದೊಡ್ಡ ರಾಜಮಾರ್ಗಗಳಿಂದಲೂ ಸರೋವರಗಳಿಂದಲೂ, ಗಿಡಗಳ ತೋಪುಗಳಿಂದಲೂ ತುಂಬಿ ಹೋಗಿದೆ” ಎಂದು ಬರೆದಿದ್ದಾನೆ. ಅದೇ ಮೇರೆಗೆ ಭಟಕಳ, ಹೊನ್ನಾವರ, ಮಂಗಳೂರು ಮೊದಲಾದ ಅನೇಕ ಗ್ರಾಮಗಳು ಕೆಳದಿಯ ಅರಸರ ಕಾಲಕ್ಕೆ ಶ್ರೀಮಂತರಿಂದ ತುಂಬಿದ ದೊಡ್ಡ ಪಟ್ಟಣಗಳಾಗಿದ್ದವು. ಅವುಗಳ ವೈಭವವನ್ನು ಯುರೋಪಿಯನ್ ಪ್ರವಾಸಿಯು ತಮ್ಮ ಲೇಖನಗಳಲ್ಲಿ ಬರೆದಿದ್ದು, ಅವೆಲ್ಲವುಗಳನ್ನು ಇಲ್ಲಿ ಕೊಟ್ಟು ವಾಚಕರ ಮನಸ್ಸನ್ನು ನಾನು ಬೇಸರಗೊಳಿಸುವದಿಲ್ಲ. ಆ ಕಾಲಕ್ಕೆ ರಾಜ್ಯದಲ್ಲಿ ಒಕ್ಕಲುತನ ವ್ಯಾಪಾರಗಳು ಹೆಚ್ಚಾಗಿ ಬೆಳೆದದ್ದರಿಂದ ಪಟ್ಟಣಗಳ ಸ್ಥಿತಿಯಾದರೂ ಮೇಲ್ಮೆಯನ್ನು ಹೊಂದುವದು ಸಹಜಿಕವೇ ಸರಿ. ಆದರೆ ಮುಂದೆ ಹೈದರನು ಇವರವೂ ರಾಜ್ಯಗಳನ್ನು ಲಯಮಾಡಿದ ಬಳಿಕ ಈ ಯಾವತ್ತೂ ಪಟ್ಟಣಗಳು ಕುಗ್ಗಹತ್ತಿದವು. ಆ ಮೇಲೆ ಬ್ರಿಟಿಷ್ ರಾಜ್ಯವು ಸ್ಥಾಪಿಸಲ್ಪಟ್ಟ ಬಳಿಕ ಅವರು ರಾಜ್ಯಭಾರ ಮಾಡುವ ಧೋರಣವೇ ಬೇರೆಯಾದ್ದರಿಂದ ಈ ಪಟ್ಟಣಗಳು ಮತ್ತಿಷ್ಟು ಹಾಳಾಗುತ್ತ ಹೋಗಿ ಅವುಗಳ ಅವಶೇಷಗಳು ಮಾತ್ರ ನಮ್ಮ ಕಣ್ಣಿಗೆ ಈಗ ಗೋಚರವಾಗುತ್ತವೆ.

## ಯುರೋಪಿಯನ್ ವ್ಯಾಪಾರಿಗಳು

ರಾಜ್ಯಕಾರಭಾರದಲ್ಲಿ ಕೆಳದಿ ಮತ್ತು ಸ್ವಾದಿ ಅರಸರು ಸ್ವೀಕರಿಸಿದ ಧೋರಣದಿಂದ ದೇಶದಲ್ಲಿ ವ್ಯಾಪಾರೋದ್ಯೋಗಗಳು ಬೆಳೆದುದಲ್ಲದೆ ಯುರೋಪಿಯನ್ ರಾಷ್ಟ್ರಗಳು ಈ ವೀರಶೈವ ರಾಜರ ಸಖ್ಯತ್ವವನ್ನು ಬೆಳೆಸಬೇಕೆಂದು ಕೋರಿ ಅವರೊಡನೆ ಒಪ್ಪಂದವನ್ನು ಮಾಡಿಕೊಂಡು ಅವರ ರಾಜ್ಯದಲ್ಲಿ ವ್ಯಾಪಾರ ಮಾಡಲು ಇಚ್ಛಿಸುತ್ತಿದ್ದರು. ಅವರೊಡನೆ ಒಪ್ಪಂದವನ್ನು ಮಾಡಿಕೊಂಡು ಅವರ ರಾಜ್ಯದಲ್ಲಿ ವ್ಯಾಪಾರ ಮಾಡಲು ಇಚ್ಛಿಸುತ್ತಿದ್ದರು. ಅವರೊಡನೆ ಈ ವೀರಶೈವ ರಾಜರು ಯಾವ ಧೋರ

ಣದಿಂದ ವರ್ತಿಸುತ್ತಿದ್ದರೆಂಬುದನ್ನು ತಿಳಿಯುವದು ಬಹಳ ಮಹತ್ವದ್ದದೆ. ಆದ್ದರಿಂದ ಈ ವಿಷಯವನ್ನು ಕುರಿತು ಸ್ವಲ್ಪದರಲ್ಲಿ ವಿವರಿಸುತ್ತೇನೆ.

ಈ ಕಾಲಕ್ಕೆ ಯುರೋಪಿಯನ್ ವ್ಯಾಪಾರಸ್ಥರಲ್ಲಿ ಪೋರ್ತುಗೀಜರೇ ಮುಖ್ಯರಾಗಿದ್ದರು. ಇವರು ವಿಜಯನಗರದ ಅರಸರುಗಳ ಕಾಲಕ್ಕೆ ಅನೇಕ ವ್ಯಾಪಾರೀ ಹಕ್ಕುಗಳನ್ನು ಪಡೆದುಕೊಂಡು ಗೋವೆಯ ಸುತ್ತಮುತ್ತಲಿನ ಪ್ರದೇಶವನ್ನು ತಮ್ಮ ಅಧೀನ ಮಾಡಿಕೊಂಡು ಆ ಭಾಗದಲ್ಲಿ ಅರಸರಂತೆ ಆಳುತ್ತಿದ್ದರು. ವಿಜಯನಗರದ ರಾಜ್ಯವು ನಷ್ಟವಾದಬಳಿಕ ಇಂಗ್ಲೀಷ್ ಮತ್ತು ಡಚ್ಚ ವ್ಯಾಪಾರಸ್ಥರೂ ಕೆಳದಿ ಮತ್ತು ಸ್ವಾದೀ ಅರಸರೊಡನೆ ವ್ಯಾಪಾರೀ ಒಪ್ಪಂದಗಳನ್ನು ಮಾಡಿಕೊಂಡು, ಅವರ ಬಂದರಗಳಲ್ಲಿ ತಮ್ಮ ಅಂಗಡಿಗಳನ್ನು ಹಾಕಲಿಕ್ಕೆ ಯತ್ನಿಸುತ್ತಿದರು. ಆದರೆ ಈ ರಾಜರು ಈ ಯುರೋಪಿಯನ್ ವ್ಯಾಪಾರಸ್ಥರೊಡನೆ ಎಂದೂ ವಿಶ್ವಾಸವಿಟ್ಟು ನಡೆಯುತ್ತ ಬಂದಹಾಗೆ ತೋರಲಿಲ್ಲ. ಅವರ ರಾಜ್ಯದಲ್ಲಿ ಅರಬರೂ ಮುಸಲ್ಮಾನರೂ ನಿರಾತಂಕವಾಗಿ ವ್ಯಾಪಾರಮಾಡಲು ಅನುಕೂಲತೆಗಳಿರುತ್ತಿದ್ದವು. ಆದರೆ ಈ ಯುರೋಪಿಯನ್ ವ್ಯಾಪಾರಸ್ಥರು ಕೂಡ ಯುದ್ಧದ ಹಡಗಗಳೂ ಶಸ್ತ್ರಾಸ್ತ್ರ ಸಮೇತರಾದ ದಂಡಾಳುಗಳೂ ಇರುತ್ತಿದ್ದರಿಂದ ಅವರೊಡನೆ ಈ ರಾಜರು ತಕ್ಕ ಒಪ್ಪಂದಗಳನ್ನು ಮಾಡಿಕೊಂಡು ಅವರಿಗೆ ತಮ್ಮ ರಾಜ್ಯದಲ್ಲಿ ಕಾಲಿಡಲು ಅಪ್ಪಣೆ ಕೊಡುತ್ತಿದ್ದರು. ಮತ್ತು ಅವರು ಒಂದುವೇಳೆ ವಿರೋಧವಾಗಿ ವರ್ತಿಸಿದರೆ ಅವರಿಗೆ ತಕ್ಕಶಾಸನಮಾಡಲೂ ಹಿಂದೆಗೆಯುತ್ತಿದ್ದಿಲ್ಲ. ಇದರಿಂದ ಆ ಕಾಲಕ್ಕೆ ಈ ವ್ಯಾಪಾರಿಗಳೊಡನೆ ಒಮ್ಮೊಮ್ಮೆ ಯುದ್ಧಮಾಡುವ ಪ್ರಸಂಗಗಳೂ ಬರುತ್ತಿದ್ದವು.

ವಿಜಯನಗರದ ಅಂತ್ಯಕಾಲದಲ್ಲಿ ಪೋರ್ತುಗೀಜರು ಅತ್ಯಂತ ಬಲಾಢ್ಯರಾಗಿದ್ದರು. ಆಗ ಅವರು ಕೆಳದಿಯ ರಾಜ್ಯದಲ್ಲಿದ್ದ ಹೊನ್ನಾವರದಲ್ಲಿ ತಮ್ಮ ಅಂಗಡಿಯನ್ನು ಇಟ್ಟಿದ್ದರು. ಮತ್ತು ಆ ಕೋಟೆಯೂ ಇವರ ದಂಡಾಳುಗಳ ಕೈಯಲ್ಲಿ ಇತ್ತು. ಆ ಕಾಲಕ್ಕೆ ಕೆಳದಿಯಲ್ಲಿ ವೆಂಕಟಪ್ಪನಾಯಕನು ಆಳುತ್ತಿದ್ದನು. ಅವನಿಗೆ ವಿರೋಧವಾಗಿ ಈ ಪೋರ್ತುಗೀಜರು

ವಶೀಕರಿಸಿದ್ದರಿಂದ ಅವರಮೇಲೆ ದಂಡೆತ್ತಿಹೋಗಿ ವೆಂಕಟಪ್ಪನಾಯಕನು ಯುದ್ಧದಲ್ಲಿ ಸೋಲಿಸಿದನು. ಈ ರಾಜನು ಸ್ವತಂತ್ರನಾಗಿ ಸುತ್ತಲೂ ತನ್ನ ರಾಜ್ಯವನ್ನು ಬೆಳಸಿದ್ದನು. ಇದರಿಂದ ಅವನೊಡನೆ ಪೋರ್ತುಗೀಜರು ಒಂದು ವ್ಯಾಪಾರೀ ಒಪ್ಪಂದವನ್ನು ಮಾಡಲೆಣಿಸಿ, ೧೬೨೩ರಲ್ಲಿ ತಮ್ಮದೊಂದು ರಾಯಭಾರವನ್ನು ಅವನ ಕಡೆಗೆ ಕಳಿಸಿದರು. ಇವರು ಆಗ ಆತನಿದ್ದ ಸ್ಥಳವಾದ ಇಕ್ಕೇರಿಗೆ ಹೋಗಲಾಗಿ, ತಮ್ಮೊಡನೆ ಸರಕುಗಳನ್ನು ಒಯ್ಯಲು ಹಡಗುಗಳನ್ನು ತಾರದೆ ಇದ್ದದರಿಂದ ಅವರನ್ನು ಕಾಣಲಿಕ್ಕೆ ಅರಸನು ಅಲ್ಲಗಳೆದನು. ಆದ್ದರಿಂದ ಪೋರ್ತುಗೀಜರು ಹಾಗೆಯೇ ಹಿಂದಿರುಗಿ ಬರಬೇಕಾಯಿತು. ಆದರೆ ೧೬೩೧ರಲ್ಲಿ ವೀರಭದ್ರನಾಯಕನ ಕಾಲಕ್ಕೆ ಅವನ ಕಡೆಯಿಂದ ಪೋರ್ತುಗೀಜರು ವ್ಯಾಪಾರೀ ಹಕ್ಕುಗಳನ್ನು ಪಡೆದುಕೊಂಡು ಹೊನ್ನಾವರದಲ್ಲಿ ನಿಂತುಕೊಂಡು ವ್ಯಾಪಾರಮಾಡತೊಡಗಿದರು. ಈ ಪ್ರಕಾರ ಅವರು ಕೆಳದಿಯ ರಾಜ್ಯದಲ್ಲಿ ೧೬೫೩ರವರೆಗೆ ತಮ್ಮ ವ್ಯವಹಾರ ಸಾಗಿಸಿದರು. ಆದರೆ ಈ ಕಾಲಕ್ಕೆ ಅವರು ಕೆಳದಿಯ ರಾಜ್ಯದ ವ್ಯಾಪಾರವನ್ನು ಗೋವೆಗೆ ತಿರುಗಿಸುವ ಪ್ರಯತ್ನ ನಡೆಸಿದ್ದರಿಂದಲೂ ಅವರ ರಾಜ್ಯದಲ್ಲಿ ಜನರನ್ನು ಕ್ರಿಸ್ತೀಧರ್ಮಕ್ಕೆ ಮತಾಂತರ ಮಾಡುವ ಕಾರ್ಯವನ್ನು ಕೈಕೊಂಡಿದ್ದರಿಂದಲೂ ಆಗಿನ ಕೆಳದಿಯ ರಾಜನಾದ ಶಿವಪ್ಪನಾಯಕನು ಪೋರ್ತುಗೀಜರ ಠಾಣ್ಯಗಳನ್ನು ಕಿತ್ತು ಹಾಕಿ ಅವರನ್ನು ತನ್ನ ರಾಜ್ಯವನ್ನು ಬಿಟ್ಟು ಹೊರಗೆ ಹಾಕಿದನು.

ಇದೇ ಕಾಲಕ್ಕೆ ಇಂಗ್ಲೀಷರೂ ಕರ್ನಾಟಕದ ಬಂದರಗಳಲ್ಲಿ ಕಾಲೂರಿ ನಿಲ್ಲಲಿಕ್ಕೆ ಯತ್ನಿಸುತ್ತಿದ್ದರು. ಅವರು ೧೬೩೮ರಲ್ಲಿ ಆಗ ಸ್ವಾದಿಯ ರಾಜ್ಯದಲ್ಲಿದ್ದ ಕಾರವಾರದಲ್ಲಿಯೂ ಕೆಳದಿಯ ರಾಜ್ಯದಲ್ಲಿದ್ದ ಭಟಕಳದಲ್ಲಿಯೂ ತಮ್ಮ ಅಂಗಡಿಗಳನ್ನು ಸ್ಥಾಪಿಸಿದರು. ಈ ಅಂಗಡಿಗಳು ೧೬೬೫ರವರೆಗೆ ವ್ಯಾಪಾರ ಮಾಡುತ್ತ ಊರ್ಜಿತಸ್ಥಿತಿಗೆ ಬಂದವು. ಆದರೆ ಆ ವರುಷ ಶಿವಾಜಿಯ ದೌಡುಗಳು ಈ ಭಾಗದಲ್ಲಿ ಆದದ್ದರಿಂದ ಇವರ ಅಂಗಡಿಗಳು ಅವರ ದಂಡಾಳುಗಳಿಂದ ಸುಲಿಯಲ್ಪಟ್ಟವು. ಇದರಿಂದ ಅವರಿಗೆ ಹಾನಿಯುಂಟಾಯಿತು. ಅವರೂ ಮುಂದೆ ಈ ಅಂಗಡಿಗಳು ಪುನಃ ಭರಭರಾ

ಟಿಯ ಸ್ಥಿತಿಗೆ ಬಂದವು. ಆದರೆ ೧೬೭೦ರಲ್ಲಿ ಭಟಕಳದಲ್ಲಿದ್ದ ಅವರ ಅಂಗಡಿಯಲ್ಲಿ ಅವರದೊಂದು ನಾಯಿಯು ಒಂದು ಆಕಳವನ್ನು ಕೊಲ್ಲಲು ಜನರು ಸಿಟ್ಟಿಗೆದ್ದು, ಇಂಗ್ಲೀಷರ ವಖಾರದ ಮೇಲೆ ಹಲ್ಲೆಯನ್ನು ಮಾಡಿ ಅಲ್ಲಿದ್ದವರನ್ನೆಲ್ಲ ಕೊಂದು; ಅವರ ಅಂಗಡಿಯನ್ನೇ ಆ ಬಂದರದಿಂದ ಕಿತ್ತುಹಾಕಿದರು. ಇದರಿಂದ ಇಂಗ್ಲೀಷರಿಗೆ ಕೆಳದಿಯ ರಾಜ್ಯಕ್ಕೆ ಶರಣು ಹೊಡೆಯಬೇಕಾಯಿತು. ಈ ಸಂಧಿಯನ್ನು ಸಾಧಿಸಿ ಪೋರ್ತುಗೀಜರು ಮರುವರುಷ ಕೆಳದಿಯ ರಾಜರೊಡನೆ ಮತ್ತೊಂದು ವ್ಯಾಪಾರೀ ತಹನಾಮೆಯನ್ನು ಮಾಡಿಕೊಂಡರು. ಇದರಿಂದ ಅವರು ಬಾರ್ಕಲೂರ, ಹೊನ್ನಾವರ ಮತ್ತು ಮಂಗಳೂರು ಈ ಸ್ಥಳಗಳಲ್ಲಿ ತಮ್ಮ ಅಂಗಡಿಗಳನ್ನು ಸ್ಥಾಪಿಸುವ ಹಕ್ಕನ್ನು ಪಡೆದರು. ಮತ್ತು ಅವರು ಅಲ್ಲಿಯೇ ವ್ಯಾಪಾರ ಮಾಡುತ್ತ ಬಂದರು. ಮುಂದೆ ೧೭೦೨ರಲ್ಲಿ ಬೇರೆ ಕೆಲವು ಸ್ಥಳಗಳಲ್ಲಿ ಅಂದರೆ ಮಿರ್ಜಾನ, ಚಂದಾವರ, ಭಟಕಳ ಈ ಸ್ಥಳಗಳಲ್ಲಿಯೂ ಕೂಡ ತಮ್ಮ ಅಂಗಡಿಗಳನ್ನು ಸ್ಥಾಪಿಸಲು ಕೆಳದಿಯ ರಾಜರಿಂದ ಸಮ್ಮತಿಯನ್ನು ಪಡೆದರು.

ಇಂಗ್ಲೀಷರು ಕೆಳದಿಯ ರಾಜ್ಯದಿಂದ ಹೊರಗೆ ಹಾಕಲ್ಪಟ್ಟ ಬಳಿಕ ಸ್ವಾದಿಯ ರಾಜ್ಯದಲ್ಲಿಯೇ ಹೆಚ್ಚಾಗಿ ತಮ್ಮ ವ್ಯಾಪಾರವನ್ನು ಸಾಗಿಸಿದರು. ಒಳಗಿನ ಕರ್ನಾಟಕ ಭಾಗದೊಡನೆ ಅವರು ಆಗ ಮಾಡುತ್ತಿದ್ದ ವ್ಯಾಪಾರವು ಬಹು ದೊಡ್ಡದಾಗಿತ್ತು. ಆದರೆ ೧೭೦೮ರಲ್ಲಿ ಅವರಿಗೂ ಸ್ವಾದಿಯ ರಾಜನಾದ ಬಸವಲಿಂಗ ರಾಜನಿಗೂ ಮನಸ್ತಾಪವು ಉಂಟಾಯಿತು. ಅವರಿಂದ ಇಂಗ್ಲೀಷರು ಕಾರವಾರದಿಂದ ತಮ್ಮ ಅಂಗಡಿಯನ್ನೇ ಕೀಳುವ ಪ್ರಸಂಗವು ಬಂದಿತು. ಇಂಗ್ಲೀಷರು ಒಡೆದು ಬಂದ ಒಂದು ಹಡಗವನ್ನು ತಮ್ಮ ವಶಪಡಿಸಿಕೊಂಡಿದ್ದರು. ಇದಕ್ಕೆ ಬಸವಲಿಂಗರಾಜನು ಸಮ್ಮತಿಸದೆ ಆ ಹಡಗವನ್ನು ತನ್ನ ವಶಕ್ಕೆ ಕೊಡಲು ಇಂಗ್ಲೀಷರಿಗೆ ಕೇಳಿದನು. ಅದಕ್ಕೆ ಅವರು ಒಪ್ಪಲಿಲ್ಲ. ಇದರಿಂದ ಬಸವರಾಜನು ಅವರ ವಖಾರವನ್ನು ಮುತ್ತಿದನು. ಆಗಿನ ಇವರ ವಖಾರಗಳೆಂದರೆ ಕೋಟೆಗಳಂತೆ ಇರುತ್ತಿದ್ದವು. ಮುತ್ತಿಗೆಯು ಸಾಗಿರಲಾಗಿ ಒಬ್ಬ ಮುಸಲ್ಮಾನನ ಮಧ್ಯಸ್ಥಿಕೆಯಿಂದ ಬಸವರಾಜನು ಮುತ್ತಿಗೆಯನ್ನು ಎಬ್ಬಿಸಿದನು. ಆದರೆ ಬಸವರಾಜನು ಇಂಗ್ಲೀಷರೊಡನೆ

ವೈರಾಭಾವದಿಂದಲೇ ವರ್ತಿಸುತ್ತಿದನು. ಇದರಿಂದ ಇಂಗ್ಲೀಷರು ಕಾರವಾರದ ತಮ್ಮ ಅಂಗಡಿಯನ್ನೇ ಕಿತ್ತುಕೊಂಡುಹೋಗಬೇಕಾಯಿತು.

ಇತ್ತ ಪೋರ್ತುಗೀಜರು ಕೆಳದಿಯ ರಾಜರೊಡನೆ ೧೭೦೭ರಲ್ಲಿ ಒಡಂಬಡಿಕೆ ಮಾಡಿಕೊಂಡಿದ್ದರೂ ೧೭೧೩ರಲ್ಲಿ ಬಸವಪ್ಪನಾಯಕನೊಡನೆ ಅವರು ಜಗಳ ತೆಗೆದರು. ಕೆಳದಿಯ ಹಡಗುಪಡೆಯವರು ತಮ್ಮ ಪಾಸು ಇಲ್ಲದೆ ಪರದೇಶಗಳಲ್ಲಿ ವ್ಯಾಪಾರ ಮಾಡಕೂಡದೆಂಬ ಒಂದು ನೆವತೆಗೆದು ಪೋರ್ತುಗೀಜರು ಅಕಸ್ಮಾತ್ತಾಗಿ ತಮ್ಮ ಯುದ್ಧದ ಹಡಗಗಳನ್ನು ತೆಗೆದು ಕೊಂಡು ಬಂದು ಕೆಳದಿ ರಾಜರ ಬಂದರಗಳಲ್ಲಿಯ ಅವರ ಹಡಗುಗಳನ್ನು ನಾಶಮಾಡುತ್ತ ಹೊರಟರು. ಅವರು ಕುಮಟೆಯಲ್ಲಿಯ ಅವರ ೧೧ ಹಡಗಗಳನ್ನು ಸುಟ್ಟರು. ಮತ್ತು ಬಾರ್ಕಲೂರಲ್ಲಿಯ ೧೦ ಹಡಗಗಳನ್ನು ಸುಟ್ಟರು. ಮತ್ತು ಆ ಕೋಟೆಯನ್ನು ಹಿಡಿದುಕೊಂಡರು. ಆದರೆ ಬಸವಪ್ಪನಾಯಕನು ಪ್ರತೀಕಾರವಾಗಿ ಏನು ಮಾಡಿದನೆಂಬುದರ ವಿವರವು ನಮಗೆ ತಿಳಿದಿಲ್ಲ. ಆದರೆ ಕಡೆಗೆ ಉಭಯ ಪಕ್ಷಗಳಲ್ಲಿ ಒಪ್ಪಂದವಾಗಿ, ಇದರಿಂದ ಕೆಳದಿಯ ಹಡಗುಗಳಲ್ಲಿ ಎರಡು ಹಡಗುಗಳು ಇರಾಣ ಅಖಾತಕ್ಕೆ ಹೋಗಬಹುದೆಂತಲೂ ಮಂಗಳೂರಲ್ಲಿ ಮಾತ್ರ ಪೋರ್ತುಗೀಜರು ಅಂಗಡಿಯನ್ನು ಇಡಬೇಕೆಂತಲೂ, ಕ್ರಿಶ್ಚನ್ನರಿಲ್ಲದ ಸ್ಥಳಗಳಲ್ಲಿ ಪೋರ್ತುಗೀಜರು ತಮ್ಮ ಚರ್ಚುಗಳನ್ನು ಎಂದೂ ಕಟ್ಟಕೂಡದೆಂತಲೂ, ಅವರು ಯಾರನ್ನೂ ಬಲಾತ್ಕಾರದಿಂದ ಕ್ರಿಸ್ತರನ್ನು ಮಾಡಕೂಡದೆಂತಲೂ ಕೆಳದಿಯ ರಾಜರು ಪೋರ್ತುಗೀಜರ ಮುಖಾಂತರವಾಗಿಯೇ ತಮ್ಮ ವ್ಯಾಪಾರೀ ಜೀನಸುಗಳನ್ನು ಕಳಿಸಬೇಕೆಂತಲೂ, ಕೆಳದಿಯ ರಾಜರು ಮಿಶನರಿಗಳಿಗೆ ಉಪದ್ರವ ಕೊಡಬಾರದೆಂತಲೂ ಉಭಯ ಪಕ್ಷಗಳ ನಡುವೆ ಶರ್ತುಗಳು ಆದವೆಂದುಪೋರ್ತುಗೀಜ ಗ್ರಂಥಕಾರರಿಂದ ತಿಳಿದು ಬರುತ್ತದೆ.

ಇಂಗ್ಲೀಷರು ಸ್ವಾದಿಯ ಬಸವರಾಜನು ಇರುವವರೆಗೂ ಕಾರವಾರದಲ್ಲಿ ತಮ್ಮ ಅಂಗಡಿಯನ್ನು ಇಡಲು ಶಕ್ಯವಾಗಲಿಲ್ಲ. ಆದರೆ ಅವನ ತರುವಾಯ ಅವರೂ ಪೋರ್ತುಗೀಜರೂ ಸ್ವಾದಿಯ ರಾಜ್ಯದ ಬಂದರುಗಳಲ್ಲಿ ಪುನಃ ತಮ್ಮ ಅಂಗಡಿಗಳನ್ನು ಸ್ಥಾಪಿಸಿದರು. ಆ ಕಾಲಕ್ಕೆ ಮರಾಠರ ದಾಳಿಗಳು ಸ್ವಾದಿಯ ರಾಜ್ಯದ ಮೇಲೆ ಆಗಿಂದಾಗ್ಗೆ ಬಂದು ಬೀಳುತ್ತಿದ್ದವು. ಅವುಗಳೊಂದರಲ್ಲಿ ಸ್ವಾದಿಯ ರಾಜರು ಪೋರ್ತುಗೀಜರ ಸಹಾಯವನ್ನು ಹೊಂದಿದರು. ಪೋರ್ತುಗೀಜ ಮತ್ತು ಇಂಗ್ಲೀಷ್ ಇವರ

ನಡುವೆ ಯಾವಾಗಲೂ ವ್ಯಾಪಾರೀ ಪೈಪೋಟಿಗಳು ನಡೆಯುತ್ತಿದ್ದವು. ಆದರೆ ಸ್ವಾದಿ ಮತ್ತು ಕೆಳದಿಯ ರಾಜ್ಯಗಳು ಹಾಳಾಗುವವರೆಗೂ ಅಂದರೆ ೧೭೬೦ರ ವರೆಗೆ ಅವರಿಗೂ ಈ ಯುರೋಪಿಯನ್ ವ್ಯಾಪಾರಸ್ಥರಿಗೂ ವಿಶೇಷ ತೊಂದರೆಯ ಸಂಗತಿಗಳು ಸಂಭವಿಸಿದ ಹಾಗೆ ತೋರಿಬರುವದಿಲ್ಲ. ಉಭಯ ಪಕ್ಷದವರೂ ಸಮಾಧಾನ ರೀತಿಯಿಂದ ತಮ್ಮ ಉದ್ಯೋಗಗಳನ್ನು ಮಾಡುತ್ತ ಬಂದ ಹಾಗೆ ತೋರುತ್ತದೆ

ಮೇಲ್ಕಂಡ ಸಂಗತಿಗಳ ಮೇಲಿಂದ ಈ ಯುರೋಪಿಯನ್ ವ್ಯಾಪಾರಸ್ಥರು ಮೊಟ್ಟ ಮೊದಲು ಹಿಂದುಸ್ಥಾನಕ್ಕೆ ಬಂದ ಕಾಲಕ್ಕೆ ಹ್ಯಾಗೆ ವರ್ತಿಸುತ್ತಿದ್ದರೆಂಬುದನ್ನು ಕಂಡುಹಿಡಿಯುವದು ಬಹು ಬೋಧಪ್ರದವಾಗಿರುತ್ತದೆ. ಇವರ ಮೂಲ ಉದ್ದೇಶವು ತಮ್ಮ ವ್ಯಾಪಾರ ಬೆಳೆಸುವದಿದ್ದರೂ ಅವರು ಈ ದೇಶದ ಅರಸರ ರಾಜಕೀಯ ಕಾರಭಾರಗಳಲ್ಲಿ ಅನುಮಾನವಿಲ್ಲದೆ ಕೈಹಾಕುತ್ತಿದ್ದರು ಅವರ ಹತ್ತಿರ ಯಾವಾಗಲೂ ಯುದ್ಧದಲ್ಲಿ ನುರಿತ ದಂಡಾಳುಗಳೂ ಯುದ್ಧದ ಹಡಗುಪಡೆಗಳೂ ಇರುತ್ತಿದ್ದವು. ಪ್ರಸಂಗಬಂದರೆ ಯುದ್ಧ ಮಾಡಲು ಅವರು ಸಿದ್ಧರಿರುತ್ತಿದ್ದರು. ಮತ್ತು ಹಿಂದೂ ರಾಜರೊಡನೆ ಒಪ್ಪಂದ ಮಾಡಿಕೊಂಡು ಕೋಟೆಕೊತ್ತಲಗಳನ್ನು ಕಟ್ಟಿಕೊಂಡು ಪ್ರದೇಶಗಳನ್ನು ಸಹ ಆಕ್ರಮಿಸಲಿಕ್ಕೆ ಮುಂದಾಗುತ್ತಿದ್ದರು. ಇವರಲ್ಲಿ ಪೋರ್ತುಗೀಜರು ಧರ್ಮಾಂಧರಾಗಿ ಜನರನ್ನು ಕ್ರಿಸ್ತೀ ಧರ್ಮಕ್ಕೆ ಬಲಾತ್ಕಾರದಿಂದ ಸಹ ಧರ್ಮಾಂತರಮಾಡಲಿಕ್ಕೆ ಹಿಂದುಮುಂದೆ ನೋಡುತ್ತಿದ್ದಿಲ್ಲ. ಈ ಮೇರೆಗೆ ಈ ಯುರೋಪಿಯನ್ ವ್ಯಾಪಾರಸ್ಥರ ಪದ್ಧತಿಯಾಗಿತ್ತು. ಈ ಯುರೋಪಿಯನ್ ವ್ಯಾಪಾರಿಗಳು ಕರ್ನಾಟಕದ ಬಂದರಗಳಂತೆಯೇ ಸುರತ, ಮದ್ರಾಸ, ಮತ್ತು ಕಲಕತ್ತೆಯಲ್ಲಿಯೂ ತಮ್ಮ ಅಂಗಡಿಗಳನ್ನು ಆಗ ಸ್ಥಾಪಿಸಿದರು. ಮದ್ರಾಸ ಮತ್ತು ಕಲಕತ್ತೆಯ ಅಂಗಡಿಯವರು ತಮ್ಮ ಸಮೀಪವಿದ್ದ ಆಗಿನ ಹಿಂದೀ ರಾಜರ ರಾಜ್ಯ ಕಾರಭಾರದಲ್ಲಿ ಕೈಹಾಕಿ ಹ್ಯಾಗೆ ಅವರ ರಾಜ್ಯಗಳನ್ನು ಸೆಳೆದುಕೊಂಡರೆಂಬುದನ್ನು ಹಿಂದುಸ್ಥಾನ ದೇಶದ ಇತಿಹಾಸವನ್ನು ಕಲಿತ ಪ್ರತಿಯೊಬ್ಬ ವಿದ್ಯಾರ್ಥಿಗೂ ಗೊತ್ತು ಇದೆ. ಇದೇ ಕಾರ್ಯಕವನ್ನು ಈ ಯುರೋ

ಪಿಯನ್ ವ್ಯಾಪಾರಸ್ಥರು ಕೆಳದೀ ಮತ್ತು ಸ್ವಾದಿಯ ರಾಜರ ಕೂಡ ಪ್ರಾರಂಭಿಸಿದ್ದರು. ಆದರೆ ಈ ರಾಜರು ಬಲಾಢ್ಯರೂ ಬಹಳ ಜಾಣರೂ ಆಗಿದ್ದರು. ಆದ್ದರಿಂದ ಇವರು ಈ ಯುರೋಪಿಯನ್ ವ್ಯಾಪಾರಸ್ಥರ ಜಾಲಕ್ಕೆ ಒಳಗಾಗಲಿಲ್ಲ. ಮತ್ತು ಅವರು ಅವರ ಮಹತ್ವಾಕಾಂಕ್ಷೆಗಳಿಗೆ ಏನೂ ಸಂಧಿಯನ್ನು ತಮ್ಮ ರಾಜ್ಯದಲ್ಲಿ ಕೊಡಲಿಲ್ಲ. ಇಷ್ಟೇ ಅಲ್ಲ, ತಮ್ಮ ಸಾಮರ್ಥ್ಯದಿಂದ ಅವರನ್ನು ಚನ್ನಾಗಿ ತಮ್ಮ ಅಧೀನದಲ್ಲಿ ಇಟ್ಟುಕೊಂಡಿದ್ದರು. ಆದರೆ ಈ ವ್ಯಾಪಾರಿಗಳ ಕಡೆಯಿಂದ ತಾವು ಮಾತ್ರ ಸಂಪೂರ್ಣವಾಗಿ ವ್ಯಾಪಾರದ ಲಾಭವನ್ನು ಪಡೆದುಕೊಂಡು ತಮ್ಮ ದೇಶದ ವ್ಯಾಪಾರೋದ್ಯೋಗಗಳನ್ನು ಅತ್ಯಂತ ಅಭಿವೃದ್ಧಿಯ ಸ್ಥಿತಿಗೆ ತಂದುಕೊಂಡರು. ಒಂದು ವೇಳೆ ಈ ರಾಜರು ಅರ್ಕಾಟದ ಮಹಮ್ಮದಅಲ್ಲಿ ಅಥವಾ ಮೀರ್ಜಾಫರನಂಥ ಅದೂರದರ್ಶಿ ಮತ್ತು ಹೇಡಿಗಳಾದ ರಾಜರು ಆಗಿದ್ದರೆ, ಕರ್ನಾಟಕವು ಎಂದೋ ಈ ಪಾಶ್ಚಿಮಾತ್ಯ ರಾಷ್ಟ್ರದವರ ಅಂಕಿತವಾಗುವ ಪ್ರಸಂಗವು ಒದಗುತ್ತಿತ್ತು. ಆದರೆ ಸ್ವಾದಿಯ ಮತ್ತು ಕೆಳದಿಯ ರಾಜರು ತಮ್ಮ ಜಾಣತನದ ರಾಜ್ಯಕಾರಭಾರದಿಂದ ಈ ಯುರೋಪಿಯನ್ ವ್ಯಾಪಾರಸ್ಥರ ಬೇಳೆಯನ್ನು ತಮ್ಮ ರಾಜ್ಯದಲ್ಲಿ ಏನೂ ಬೇಯುಗೊಡಲಿಲ್ಲ. ಈ ಸಂಗತಿಯನ್ನು ಪ್ರತಿಯೊಬ್ಬ ಕರ್ನಾಟಕಸ್ಥನು ಲಕ್ಷಿಸತಕ್ಕದ್ದಾಗಿದೆ.

ಈ ಮೇರೆಗೆ ನಾನು ಈ ವೀರಶೈವ ರಾಜರು ಯಾವ ತರದ ರಾಜಕೀಯ ಧೋರಣವುಳ್ಳವರಾಗಿದ್ದರು, ಅವರು ವ್ಯಾಪಾರ, ಒಕ್ಕಲುತನಗಳಿಗೆ ಹ್ಯಾಗೆ ಸಹಾಯಮಾಡಿದರು ಮತ್ತು ಇದರಿಂದ ಕರ್ನಾಟಕವು ಹ್ಯಾಗೆ ಸಂಪತ್ತಿನಲ್ಲಿ ಅಭಿವೃದ್ಧಿಯನ್ನು ಹೊಂದಿತು ಈ ವಿಷಯವಾಗಿ ಈ ಲೇಖದಲ್ಲಿ ವಿವೇಚಿಸಿದ್ದೇನೆ. ಇದರಂತೆಯೇ ಈ ರಾಜರು ವಾಙ್ಮಯ ಮತ್ತು ಅಂತಸ್ಥ ರಾಜ್ಯಕಾರಭಾರ ಇವುಗಳಲ್ಲಿ ಅತ್ಯಂತ ಸುಧಾರಣೆಯನ್ನು ಮಾಡಿದ್ದಾರೆ. ಇದರ ವಿವರಣೆಯನ್ನು ನಾನು ಶಿವಾನುಭವದ ಮುಂದಿನ ಸಂಚಿಕೆಯಲ್ಲಿ ಮಾಡುವೆನು.

( ಶಿವಾನುಭವ ಸಂಪುಟ ೧ ಸಂಚಿಕೆ ೪ ರಿಂದ )

# ಕರ್ನಾಟಕದ ಮೊದಲನೆಯ ರಾಣಿ
## (ಚೆನ್ನಮ್ಮಾಜಿ)

ಕರ್ನಾಟಕದ ರಾಜ್ಯಗಳಲ್ಲಿ ಚಾಲುಕ್ಯ ವಿಕ್ರಮಾದಿತ್ಯನ ಸಹೋದರಿಯಾದ ಅಕ್ಕಾದೇವಿಯನ್ನು ಹಿಡಿದು ಈವರೆಗೂ ಅನೇಕ ಶೂರ ಸ್ತ್ರೀಯರು ಆಗಿಹೋಗಿರುವರು. ಆದರೆ ವಿಧಿಯುಕ್ತ ಪಟ್ಟಾಭಿಷೇಕವನ್ನು ಹೊಂದಿ ರಾಜ್ಯವಾಳಿದ ಮೊದಲನೇ ರಾಣಿ ಎಂದರೆ ಬಿದನೂರಿನ ಚೆನ್ನಮ್ಮಾಜಿಯೇ ಎಂದು ಹೇಳಬಹುದು. ಈಕೆಯು ಬಿದನೂರು ರಾಜ್ಯವನ್ನು ೧೬೭೨ರಿಂದ ೧೬೯೭ರವರೆಗೆ ೨೫ ವರ್ಷ ಆಳಿದಳು. ಈ ರಾಣಿಯ ಸಂಕ್ಷಿಪ್ತ ವೃತ್ತಾಂತವನ್ನು ಈ ಲೇಖದಲ್ಲಿ ಕೊಡಲೆಣಿಸಿರುವೆವು.

ವೀರಶೈವ ಧರ್ಮದ ಪ್ರಕಾರ ಸ್ತ್ರೀ ಪುರುಷರು ಸಮಾನ ಹಕ್ಕುಳ್ಳವರು. ಸ್ತ್ರೀಯಳು ಮೋಕ್ಷ ಹೊಂದಬೇಕಾದರೆ, ಆಕೆಯು ತನ್ನ ಪತಿಯ ಆಚರಣೆಯ ಮೇಲೆ ಅವಲಂಬಿಸದೆ ತನ್ನ ಸ್ವಂತ ಆಚರಣೆಗಳಿಂದಲೇ ಅದನ್ನು ಪಡೆಯತಕ್ಕದ್ದು. ಬೇರೆ ಹಿಂದೂ ಮತಗಳ ಪ್ರಕಾರ ಸ್ತ್ರೀಯಳು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ. ಆಕೆಯು ತನ್ನ ಮನೆತನದ ಆಸ್ತಿಗೆ ಸಹ ಸ್ವತಂತ್ರ ಹಕ್ಕುದಾರಳಲ್ಲ. ಆದರೆ ವೀರಶೈವ ಧರ್ಮದ ಪ್ರಕಾರ ಈ ಸ್ಥಿತಿಯು ಇರುವದಿಲ್ಲ. ಆಕೆಯು ಈ ಎಲ್ಲ ಸಂಗತಿಗಳಲ್ಲಿ ಸ್ವತಂತ್ರ ಹಕ್ಕುದಾರಳು ಇರುತ್ತಾಳೆ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಅನೇಕ ಸ್ತ್ರೀಯರು ಅವಿಹಿತರಾಗಿ ಉಳಿದು, ಧರ್ಮತತ್ವ ಪ್ರಸಾರದಲ್ಲಿ ಮುಂದಾಗಿದ್ದರು. ಆದ್ದರಿಂದ ಒಬ್ಬ ವೀರಶೈವ ಸ್ತ್ರೀಯಳು ಒಂದು ರಾಜ್ಯದ ಪಟ್ಟಾಭಿಷೇಕವನ್ನು ಹೊಂದಿ ರಾಜ್ಯವಾಳಿದ್ದರಲ್ಲಿ 'ಏನೂ ಆಶ್ಚರ್ಯವಲ್ಲ' ಈ ದೃಷ್ಟಿಯಿಂದ ಚೆನ್ನಮ್ಮಾಜಿಯು ಬರೆ ಕರ್ನಾಟಕದಲ್ಲಷ್ಟೇ ಅಲ್ಲ, ಇಡೀ ಹಿಂದುಸ್ತಾನದಲ್ಲಿ ಸಹ ಹಿಂದೂ ಜನಾಂಗದ ಮೊದಲನೇ ರಾಣಿಯೆಂದು ಸಹ ಹೇಳಬಹುದು.

ಚೆನ್ನಮ್ಮಾಜಿಯು ಪಟ್ಟವೇರಿದ ಕಾಲವು ಬಹಳ ಅವ್ಯವಸ್ಥೆಯುಳ್ಳದ್ದಿತ್ತು. ಆಕೆಯ ಗಂಡನಾದ ಸೋಮಶೇಖರ ನಾಯಿಕನ ಅಂತ್ಯ ಕಾಲಕ್ಕೆ ರಾಜ್ಯದಲ್ಲೆಲ್ಲ ಅಂತಸ್ಥ ಕಲಹಗಳೇ ಹೆಚ್ಚಾಗಿದ್ದವು. ಆಕೆಯ ಗಂಡನು ಈ ಕಲಹಗಳ ಮೂಲಕ ತನ್ನ ಬಿದನೂರು ರಾಜಧಾನಿಯನ್ನು ಬಿಟ್ಟುಕೊಟ್ಟು, ಭುವನದುರ್ಗವೆಂಬ ಒಂದು ಸಂದುಕಟ್ಟಿನ ಕೋಟೆಗೆ ಹೋಗಿ ಆಶ್ರಯಿಸಿರಬೇಕಾಯಿತು. ಆದರೆ ಈ ಕಾಲಕ್ಕೆ ಚೆನ್ನಮ್ಮಾಜಿಯು ಬಹು ಜಾಣತನದಿಂದ ತನ್ನ ವಿರುದ್ಧ ನಿಂತಿದ್ದ ಕಾಸರಗೋಡದ ತಿಮ್ಮಣ್ಣ ಮತ್ತು ಸಬ್ಬನೀಸ ಕೃಷ್ಣಪ್ಪ ಎಂಬವರನ್ನು ತನ್ನಾಧೀನ ಮಾಡಿಕೊಂಡು ತನಗೆ ಎದುರಾಳಿಯಾಗಿದ್ದ ಕುತ್ಸಿತ ಶಿವಪ್ಪನಾಯಕನನ್ನು ತಗ್ಗಿಸಿದಳು. ಮತ್ತು ಪುನಃ ಬಿದನೂರಿಗೆ ಬಂದು ರಾಜ್ಯವಾಳತೊಡಗಿದಳು.

ಈ ಅವ್ಯವಸ್ಥೆಯ ಸಮಯವನ್ನು ಸಾಧಿಸಿ ಆಕೆಯ ಕೈಕೆಳಗಿನ ಪಾಳೆಯಗಾರರು ರಾಜ್ಯದಲ್ಲೆಲ್ಲ ದಂಗೆ ಎಬ್ಬಿಸಿದರು. ಇದರಲ್ಲಿ ಘಟ್ಟದ ಕೆಳಗಿನ ತುಳುವರೂ ಜಾಟರೂ ಬಂಗಾಜಲರೂ ಮುಖ್ಯರಾಗಿದ್ದರು. ಇದರಿಂದ ಪಶ್ಚಿಮ ಸಮುದ್ರದ ಬಂದರದೊಳಗಿಂದ ಹಾಯ್ದು ಹೋಗುತ್ತಿದ್ದ ದೇಶದ ವ್ಯಾಪಾರವು ಕಟ್ಟಾಗಿ ಹೋಗಿತ್ತು. ಈ ಆತಂಕವನ್ನು ದೂರ ಮಾಡುವದು ಚೆನ್ನಮ್ಮಾಜಿಯ ಮೊದಲನೇ ಕರ್ತವ್ಯವಾಯಿತು. ಆಗ ಆಕೆಯು ಒಂದು ಸೈನ್ಯವನ್ನು ತೆಗೆದುಕೊಂಡು ಹೋಗಿ, ಕಾರ್ಕಳ, ಮಲ್ಲಿಕಾರ್ಜುನಗಿರಿ ಮೊದಲಾದ ಕೋಟೆಗಳಿಗೆ ಮುತ್ತಿಗೆ ಹಾಕಿ, ಅವುಗಳನ್ನು ಸ್ವಾಧೀನಪಡಿಸಿಕೊಂಡಳು. ಹೀಗೆ ಚೆನ್ನಮ್ಮಾಜಿಯು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ವಾಸ್ಥತೆಯನ್ನುಂಟು ಮಾಡಿದಳು.

ಬಿದನೂರು ರಾಜ್ಯದ ಉತ್ತರದ ಕಡೆಗೆ ಸ್ವಾದಿಯ ಅರಸರು ರಾಜ್ಯವಾಳುತ್ತಿದ್ದರು. ಆ ಕಾಲಕ್ಕೆ ರಾಮಚಂದ್ರನಾಯಕನು ಸ್ವಾದಿಯ ಅರಸನಾಗಿದ್ದನು. ಇವನೂ ಬಿದನೂರು ರಾಜ್ಯವನ್ನು ಒಳಹೊಕ್ಕು ದಂಗೆ ಎಬ್ಬಿಸಿದ್ದರಿಂದ, ಚೆನ್ನಮ್ಮಾಜಿಗೆ ಅವನ ಕೂಡ ಯುದ್ಧ ಹೂಡುವ ಪ್ರಸಂಗವು ಬಂದಿತು. ಈ ಕಾಲಕ್ಕೆ ರಾಮಚಂದ್ರನಾಯಕನು ಆಕೆಯ ಹಿಡಿಜೆಯ

ಕೋಟೆಯನ್ನು ತೆಗೆದುಕೊಂಡಿದ್ದನು. ಆ ಕೋಟೆಯನ್ನು ಚೆನ್ನಮ್ಮಾಜಿಯು ಪುನಃ ಅವನ ಕಡೆಯಿಂದ ತಿರುಗಿ ತೆಗೆದುಕೊಂಡಳು. ಮತ್ತು ಸ್ವಾದಿಯ ರಾಜ್ಯವನ್ನು ಒಳನುಗ್ಗಿದಳು. ಆಕೆಯು ಶಿರಸಿಯನ್ನು ತೆಗೆದುಕೊಂಡಳು. ಸ್ವಾದಿಯ ರಾಜಧಾನಿಯನ್ನು ಸಹ ಮುತ್ತಿಗೆ ಹಾಕಿ, ಅದನ್ನು ಹಿಡಿದುಕೊಂಡಳು. ಆಗ ರಾಮಚಂದ್ರನಾಯಕನು ಓಡಿಹೋಗಬೇಕಾಯಿತು. ಆಗ ಚೆನ್ನಮ್ಮಾಜಿಯು ಬನವಸೆ, ಬದನಗೋಡು, ಕರಪ್ಪೂರು ಮುಂತಾದ ಸೀಮೆಗಳನ್ನು ಸ್ವಾಧೀನಪಡಿಸಿಕೊಂಡಳು. ಸ್ವಾದಿಯ ಅರಸನ ಬಿಳುಪಾದ ನೀಲಛತ್ರವನ್ನು ಸಹ ಹಿಡಿದುಕೊಂಡಳು. ಮತ್ತು ಆಕೆಯು ಅದನ್ನು ಕೆಳದಿಯ ವೀರಭದ್ರದೇವರಿಗೆ ಕಾಣಿಕೆಯಾಗಿ ಕಳುಹಿಸಿಕೊಟ್ಟಳು. ಆಗ ರಾಮಚಂದ್ರನಾಯಕನು ಚೆನ್ನಮ್ಮಾಜಿಯ ಕೂಡ ಸಂಧಿಯನ್ನು ಮಾಡಿಕೊಂಡನು. ಚೆನ್ನಮ್ಮಾಜಿಗೆ ಬನವಸೆ ಮುಂತಾದ ಸೀಮೆಗಳನ್ನು ಬಿಟ್ಟುಕೊಡಬೇಕಾಯಿತು.

ಈ ಕಾಲಕ್ಕೆ ದಕ್ಷಿಣದ ಕಡೆಗೆ ಮೈಸೂರು ರಾಜ್ಯಕ್ಕೆ ಒಡೆಯನಾದ ಚಿಕ್ಕದೇವರಾಜನು (೧೬೭೨–೧೭೦೪) ಆಳುತ್ತಿದ್ದನು. ಈತನು ಮೈಸೂರ ಅರಸರಲ್ಲಿ ಬಹು ಪ್ರತಾಪಶಾಲಿಯಾದ ಅರಸನು. ಈ ಕಾಲಕ್ಕೆ ಚಿಕ್ಕ ಚಿಕ್ಕ ಪಾಳೆಯಗಾರರೇ ತುಂಬಿಕೊಂಡಿದ್ದರು. ಇವರನ್ನು ದಕ್ಷಿಣದ ಕಡೆಗೆ ಮೈಸೂರ ರಾಜರೂ ಉತ್ತರ ಮೂಲೆಯಲ್ಲಿ ಚೆನ್ನಮ್ಮಾಜಿಯೂ ಆಕ್ರಮಿಸಿಕೊಂಡು, ತಮ್ಮ ತಮ್ಮ ರಾಜ್ಯಗಳನ್ನು ಪಸರಿಸುವವರಾಗಿದ್ದರು. ಆ ಪ್ರಕಾರ ಚೆನ್ನಮ್ಮಾಜಿಯು ಬಸವಾಪಟ್ಟಣ, ಕಡೂರ, ಹಾಸನ, ಬೇಲೂರದವರೆಗೂ ತನ್ನ ರಾಜ್ಯವನ್ನು ಹಬ್ಬಿಸಿದಳು. ಇತ್ತ ಕಡೆಗೆ ಚಿಕ್ಕದೇವರಾಯನೂ ಕೊಯಮತ್ತೂರು ಜಿಲ್ಲೆಯ ಪ್ರದೇಶ, ಬೆಂಗಳೂರು ಸೀಮೆಯನ್ನು ತೆಗೆದುಕೊಂಡು, ಉತ್ತರಕ್ಕೆ ಚೆನ್ನಮ್ಮಾಜಿಯ ರಾಜ್ಯದವರೆಗೂ ತನ್ನ ರಾಜ್ಯವನ್ನು ಹಬ್ಬಿಸಿದನು. ಇದರಿಂದ ಉಭಯರಾಜರ ನಡುವೆ ಯುದ್ಧ ಪ್ರಸಂಗಗಳು ಒದಗಿಬಂದವು. ಆಗ ಚೆನ್ನಮ್ಮಾಜಿಯ ಸೇನಾನಾಯಕನಾದ ಕೋಟೆನಾಡದ ಹೊನ್ನಪ್ಪನೂ ಮತ್ತು ದೇವರಾಜನ ಸೇನಾನಾಯಕ ತಿಮ್ಮಪ್ಪ, ಇವರೊಳಗೆ ಯುದ್ಧಗಳು ನಡೆದವೆಂತಲೂ, ಅದರಲ್ಲಿ ತಿಮ್ಮಪ್ಪನು ಸೋತನು, ಅವನ ಮಗನು ಕೈಸೆರೆಯಾದನೆಂತಲೂ ಕೆಳದಿ ನೃಪವಿಜಯದಲ್ಲಿ ಬರೆದಿದೆ. ಆದರೆ

ಕಡೆಗೆ ಉಭಯ ರಾಜರಲ್ಲಿ ಒಪ್ಪಂದವಾದಂತೆ ವಿಲ್ಕ ಸಾಹೇಬರು ತಮ್ಮ ಇತಿಹಾಸದಲ್ಲಿ ಉಲ್ಲೇಖಿಸಿದ್ದಾರೆ. ಇದರಿಂದ ಚೆನ್ನಮ್ಮಾಜಿಯು ಅವರೆಗೆ ಕೈವಶ ಮಾಡಿಕೊಂಡಿದ್ದ ಪರಗಣಗಳಲ್ಲಿ ಐಗೂರು ಮತ್ತು ವಸ್ತಾರ ಈ ಎರಡು ಪರಗಣೆಗಳನ್ನು ಬಿಟ್ಟು ಉಳಿದವುಗಳನ್ನು ಚಿಕ್ಕದೇವರಾಜನಿಗೆ ಆಕೆಯು ಒಪ್ಪಿಸಿಬಿಟ್ಟಂತೆ ತಿಳಿದುಬರುತ್ತದೆ.

ಈ ಮೇರೆಗೆ ಚೆನ್ನಮ್ಮಾಜಿಯು ತನ್ನ ರಾಜ್ಯವನ್ನು ಭದ್ರಪಡಿಸಿಕೊಂಡು, ತನ್ನ ಮನೆತನದ ಅರಸುಗಳಿಗೆ ವಾಡಿಕೆಯಾದ ಧರ್ಮಕೃತ್ಯಗಳನ್ನು ಮಾಡುವುದರಲ್ಲಿ ನಿರತಳಾದಳು. ಆಕೆಯು ಗೋಕರ್ಣ ಮತ್ತು ಸುಬ್ರಹ್ಮಣ್ಯ ಈ ಕಡೆಗೆ ಯಾತ್ರೆಗಳನ್ನು ಮಾಡಿ ಅನೇಕ ದಾನಧರ್ಮಗಳನ್ನು ಮಾಡಿದಳು. ಮತ್ತು ತುಂಗಭದ್ರಾ ತೀರದಲ್ಲಿ ತನ್ನ ಗಂಡನ ಜ್ಞಾಪಕಾರ್ಥವಾಗಿ ಸೋಮಶೇಖರಪುರ ಎಂಬ ಹೆಸರಿನ ಅಗ್ರಹಾರವನ್ನು ಸ್ಥಾಪಿಸಿ ಅಲ್ಲಿ ಅನೇಕ ಬ್ರಾಹ್ಮಣ ವಿದ್ವಾಂಸರಿಗೆ ಆಶ್ರಯ ಕೊಟ್ಟಳು. ಮತ್ತು ಹೂಲಿಕೆರೆಯ ಕೋಟೆಯನ್ನು ಭದ್ರಪಡಿಸಿ, ಅದಕ್ಕೆ ಚೆನ್ನಗಿರಿ ಎಂಬ ಹೆಸರನ್ನು ತನ್ನ ಜ್ಞಾಪಕಾರ್ಥವಾಗಿ ಇಟ್ಟಳು.

ಈ ಕಾಲಕ್ಕೆ ಔರಂಗಜೇಬ ಬಾದಶಹನು ವಿಜಾಪುರ ರಾಜ್ಯವನ್ನು ನಾಶಗೊಳಿಸಿ, ಮರಾಟರಗೂಡ ಯುದ್ಧ ನಡಿಸಿದ್ದನು. ಮರಾಟರಿಗೆ ಅವನೊಡನೆ ಬಹಿರಂಗವಾಗಿ ಯುದ್ಧ ಮಾಡುವುದು ಅಶಕ್ಯವಾದ್ದರಿಂದ ಪರ್ವತ ಪ್ರದೇಶಗಳಲ್ಲಿ ನಿಂತು ಕಾದಾಡುತ್ತಿದ್ದರು. ಈ ಕಾಲಕ್ಕೆ ಔರಂಗಜೇಬನು ಕೃಷ್ಣಾ ತಟಾಕದಲ್ಲಿರುವ ಗಲಗಲಿಯಲ್ಲಿ ತಳವೂರಿದ್ದನು. ಈ ಸ್ಥಿತಿಯಿಂದ ದಕ್ಷಿಣ ದೇಶದಲ್ಲಿ ಔರಂಗಜೇಬನ ಹಾವಳಿಯು ಹೆಚ್ಚಾಯಿತು. ಮೈಸೂರಿನ ಅರಸನಾದ ಚಿಕ್ಕದೇವರಾಜನು ಔರಂಗಜೇಬನನ್ನು ರೇಗಿಸದೆ ಉಪಾಯವಾಗಿದ್ದುಕೊಂಡನು. ಇತ್ತ ಚೆನ್ನಮ್ಮಾಜಿಯೂ ಗಿರಿದುರ್ಗಗಳಿಂದ ತುಂಬಿಕೊಂಡಿದ್ದ ತನ್ನ ಬಿಕ್ಕಟ್ಟಿನ ಪ್ರದೇಶದಲ್ಲಿ ಸಜ್ಜಾಗಿ ಕಾದುಕೊಂಡಿದ್ದಳು. ಈ ಕಾಲಕ್ಕೆ ರಾಜಾರಾಮನು ಮರಾಟರ ಅರಸನಾಗಿದ್ದನು. ಆತನು ಮೊಗಲರ ದಂಡಾಳುಗಳ ಉಪಟಳವನ್ನು ಸಹಿಸಲಾರದೆ, ದ್ರಾವಿಡ

ದೇಶದಲ್ಲಿದ್ದ ಜಿಂಜೀಕೋಟೆಗೆ ಹೊರಟನು. ಅವನು ಕೆಲ ಬೆಂಗಾವಲರನ್ನು ಕೂಡಿಕೊಂಡು, ಮೊದಲು ಚೆನ್ನಮ್ಮಾಜಿಯ ರಾಜ್ಯವನ್ನು ಪ್ರವೇಶಿಸಿ, ಆಕೆಯ ಆಶ್ರಯವನ್ನು ಕೋರಿದನು. ಚೆನ್ನಮ್ಮಾಜಿಯು ಅವರು ಬಂದುದನ್ನು ತಿಳಿದು, ಅವರಿಗೆ ಆಶ್ರಯ ಕೊಡುವುದೇ ತನ್ನ ಧರ್ಮವೆಂದು ತಿಳಿದು ಅವರನ್ನು ಮೊದಲಿಗೆ ಶಿವಮೊಗ್ಗೆಗೆ ಕರೆದುಕೊಂಡು ಹೋಗಿ, ಅಲ್ಲಿಂದ ಗಾಜನೂರ ಹೊಳೆಯನ್ನು ದಾಟಿಸಿ, ತನ್ನ ರಾಜ್ಯದೊಳಗಿಂದ ಅವರನ್ನು ಸುರಕ್ಷಿತವಾಗಿ ಕಳುಹಿಸಿಕೊಟ್ಟಳು. ಮುಂದೆ ಅವರು ಬೆಂಗಳೂರಿನ ಮೇಲಿಂದ ಜಿಂಜಿಗೆ ಹೊರಟು ಹೋದರು. ರಾಜಾರಾಮನ ಬೆನ್ನುಹತ್ತಿ ಬಂದ ಮೊಗಲ ಸೈನಿಕರಿಗೆ ಚೆನ್ನಮ್ಮಾಜಿಯು ಮಾಡಿದ ಈ ಸಹಾಯವು ತಿಳಿದುಬಂದಿತು. ಆಗ ಔರಂಗಜೇಬನು ಆಕೆಯ ರಾಜ್ಯವನ್ನು ಒಳನುಗ್ಗಲಿಕ್ಕೆ ಅಪ್ಪಣೆ ಕೊಟ್ಟನು. ಆಗ ಮೊಗಲರ ಸೈನ್ಯವು ಮುದಗ ಮಾಸೂರಿನ ಕೆರೆಯ ಬಳಿಯಿಂದ ಹಾಯ್ದು, ತಮ್ಮಾಯಿ ಕಣಿವೆಯೊಳಗಿಂದ ಮಹಾದೇವಪುರದ ಕೋಟೆಗೆ ಬಂದು, ಅದಕ್ಕೆ ಮುತ್ತಿಗೆ ಹಾಕಿ ಅದನ್ನು ತೆಗೆದುಕೊಂಡರು. ಮತ್ತು ಅವರು ಬಿದನೂರನ್ನು ಸಹ ಮುತ್ತಿದರು. ಆಗ ಚೆನ್ನಮ್ಮಾಜಿಯು ತನ್ನ ರಾಜಧಾನಿಯನ್ನು ಬಿಟ್ಟುಕೊಟ್ಟು, ತನ್ನ ಭದ್ರಸ್ಥಾನವಾದ ಭುವನಗಿರಿಯನ್ನು ಸೇರಬೇಕಾಯಿತು. ಆಗ ಆಕೆಗೆ ತನ್ನ ರಾಜ್ಯಕ್ಕೆ ಈ ತರದ ಬಿಕ್ಕಟ್ಟಿನ ಪ್ರಸಂಗವು ಬಂದರೂ ಆಕೆಯು ಹೆದರಲಿಲ್ಲ. ಮೊಗಲರ ಸೈನಿಕರ ಕೂಡ ಧೈರ್ಯದಿಂದ ಯುದ್ಧವನ್ನು ಮಾಡಿದಳು. ಆಕೆಯು ಅನೇಕ ದಂಡಾಳುಗಳನ್ನು ಕೂಡಿಸಿ, ತನ್ನ ರಾಜ್ಯದಲ್ಲಿರುವ ಯಾವತ್ತು ಕಣಿವೆಯ ದಾರಿಗಳನ್ನು ಹಿಡಿದು, ಮೊಗಲರ ಸೇನೆಗೆ ಯಾವ ತರದ ಆಹಾರ ವಸ್ತುಗಳು ಸಿಗದಂತೆ ಮಾಡಿದಳು. ಆಗ ಮೊಗಲರ ದಂಡಾಳುಗಳು ಅನೇಕ ತರದಿಂದ ಕಷ್ಟಪಡಹತ್ತಿದರು, ಅವರು ಬಿದನೂರ ಮುತ್ತಿಗೆಯನ್ನು ಬಿಟ್ಟು ಹೊರಟು ಹೋಗಬೇಕಾಯಿತು. ಹೀಗೆ ಚೆನ್ನಮ್ಮಾಜಿಯು ತನ್ನ ರಾಜ್ಯಕ್ಕೆ ಬಂದ ಈ ಸಂಕಟವನ್ನು ದೂರಮಾಡಿಕೊಂಡಳು. ಈ ಸಂಗತಿಗಳು ೧೬೯೦ನೇ ಇಸ್ವಿಯ ಸುಮಾರಕ್ಕೆ ಒದಗಿದವು.

ಈ ಸಂಗತಿಗಳು ಒದಗಿದ ಬಳಿಕ, ಚೆನ್ನಮ್ಮಾಜಿಯು ಶಾಂತತೆಯಿಂದ ರಾಜ್ಯವಾಳಹತ್ತಿದಳು. ಈ ಕಾಲಕ್ಕೆ ಆಕೆಯು ಅನೇಕ ಧರ್ಮಕಾರ್ಯಗಳನ್ನು ಮಾಡಿದಳು. ಆಕೆಯು ಬಿದನೂರಲ್ಲಿ ಇರುವ ನೀಲಕಂಠೇಶ್ವರ ದೇವರ ರಥೋತ್ಸವವು ಯಾವಾಗಲೂ ನಡೆಯುವಂತೆ ವ್ಯವಸ್ಥೆ ಮಾಡಿದಳು. ಇದರಂತೆ ಕೆಳದಿ ರಾಮೇಶ್ವರ ದೇವರು ಮತ್ತು ವೀರಭದ್ರೇಶ್ವರ ದೇವರು ಮತ್ತು ಕೊಲ್ಲೂರ ಮೂಕಾಂಬಿಕೆಯ ದೇವಸ್ಥಾನವು ಇವುಗಳಿಗೆ ಬೇರೆ ಭೂಸ್ವಾಸ್ಥೆಯನ್ನು ಕೊಟ್ಟಳು. ಕೆಳದಿಯ ವೀರಭದ್ರ ದೇವಸ್ಥಾನದ ಶಿಲಾಮಯ ಶಿಖರವನ್ನೂ ರಂಗಮಂಟಪವನ್ನೂ ಕಟ್ಟಿಸಿದಳು. ಇದಲ್ಲದೆ ಕಾಶೀ, ರಾಮೇಶ್ವರ, ಶ್ರೀಶೈಲ, ತಿರುಪತಿ ಮುಂತಾದ ಪುಣ್ಯ ಕ್ಷೇತ್ರಗಳಲ್ಲಿ ಸ್ಥಿರವಾಗಿ ನಡೆಯುವಾಗೆ ವರ್ಷಾಶನಗಳನ್ನು ಮಾಡಿಕೊಟ್ಟಳು. ಅಲ್ಲದೆ ಬೇರೆ ಬೇರೆ ಸ್ಥಲಗಳಲ್ಲಿ ಮಠಗಳನ್ನು ಕಟ್ಟಿಸಿ, ಶಿವ ಜಂಗಮಾರ್ಥವಾಗಿ ಸ್ಥಿರ ಶಾಸನಗಳನ್ನು ಏರ್ಪಡಿಸಿದಳು. ಹೀಗೆಯೇ ಶೃಂಗೇರೀ ಸಂಸ್ಥಾನದ ಧರ್ಮವು ಸಾಂಗವಾಗಿ ನಡೆಯುವಂತೆ ಏರ್ಪಾಡು ಮಾಡಿದಳು. ಈ ಮೇರೆಗೆ ಚೆನ್ನಮ್ಮಾಜಿಯು ಧರ್ಮಾನುಸಾರವಾಗಿ ವರ್ತಿಸುತ್ತ, ೧೬೯೭ರ ವರೆಗೂ ರಾಜ್ಯ ಪರಿಪಾಲನೆ ಮಾಡಿದಳು. ಈಕೆಗೆ ಮಕ್ಕಳಿರಲಿಲ್ಲ. ಆದ್ದರಿಂದ ಹಿರಿಯ ಬಸವಪ್ಪನೆಂಬವನನ್ನು ಚಿಕ್ಕಂದಿನಲ್ಲಿಯೇ ದತ್ತಕ ತೆಗೆದುಕೊಂಡಿದ್ದಳು. ಈ ಬಸವಪ್ಪನಾಯಕರೇ ಮುಂದೆ ಶಿವತತ್ವರತ್ನಾಕರವನ್ನು ಬರೆದು, ತಮ್ಮ ಆಸ್ಥಾನದಲ್ಲಿ ಅನೇಕ ವಿದ್ವಾಂಸರನ್ನು ಪೋಷಿಸಿ, ಕರ್ನಾಟಕದ ಅರಸರುಗಳಲ್ಲಿ ಬಹಳ ಪ್ರಸಿದ್ಧಿಯನ್ನು ಹೊಂದಿದರು. ಬಸವಪ್ಪನಾಯಕರು ಈ ಸ್ಥಿತಿಯನ್ನು ಹೊಂದಲು ಚೆನ್ನಮ್ಮಾಜಿಯವರೇ ಕಾರಣರೆಂದು ಹೇಳಬಹುದು. ಚೆನ್ನಮ್ಮಾಜಿಯವರ ಸಮಾಧಿಯು ಬಿದನೂರು ಕೊಪ್ಪಲು ಮಠದಲ್ಲಿರುತ್ತದೆ.

ಮೇಲಿನ ವೃತ್ತಾಂತದಿಂದ ಚೆನ್ನಮ್ಮಾಜಿಯು ಬಹಳ ಚಾಣಾಕ್ಷಳಾದ ರಾಣಿಯಾಗಿದ್ದಳೆಂದು ತಿಳಿಯಬರುತ್ತದೆ. ತನ್ನ ಸುತ್ತಲೂ ಬಲಾಢ್ಯ ವ್ಯಕ್ತಿಗಳಿದ್ದುದರಿಂದ, ಅವರೊಡನೆ ಬಹಳ ಎಚ್ಚರಿಕೆಯಿಂದ ವರ್ತಿಸಿ ತನ್ನ ರಾಜ್ಯವನ್ನು ಕಾಯ್ದುಕೊಂಡಳು. ತನ್ನ ರಾಜ್ಯದಲ್ಲಿ ಸುವ್ಯವಸ್ಥೆಯನ್ನು ಇಟ್ಟು,

ಪ್ರಜೆಗಳನ್ನು ಸರಿಯಾಗಿ ನಡಿಸಿಕೊಂಡಳು. ಆಕೆಯು ಬಹಳ ಧರ್ಮಿಷ್ಠಳಾಗಿದ್ದಳು. ತನ್ನ ವೇಳೆಯನ್ನು ದಾನ ಧರ್ಮ ಮಾಡುವದರಲ್ಲಿಯೂ ಧರ್ಮ ಕಾರ್ಯಗಳಲ್ಲಿಯೂ ತೊಡಗಿಸುತ್ತಿದ್ದಳು. ತಾನು ವೀರಶೈವ ಮತಸ್ಥಳಾದರೂ, ತಮ್ಮ ರಾಜಧರ್ಮಕ್ಕೆ ಸರಿಯಾಗಿ ಎಲ್ಲ ಮತಸ್ಥರನ್ನು ಸರಿಯಾಗಿ ನಡಸಿಕೊಂಡಳು. ಹೀಗೆ ಚೆನ್ನಮ್ಮಾಜಿಯು ೨೬ ವರ್ಷ ರಾಜ್ಯಭಾರ ವಹಿಸಿ ಕರ್ನಾಟಕದ ಪ್ರಸಿದ್ಧ ಹೆಂಗಳೆಯಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿದ್ದಾಳೆ.

( ಶಿವಾನುಭವ ಸಂಪುಟ ೧ ಸಂಚಿಕೆ ೧ ರಿಂದ )

# ಕೆಳದಿ ಮತ್ತು ಸ್ವಾದಿ ರಾಜ್ಯಗಳ ಬಗ್ಗೆ ಯುರೋಪಿಯನ್ನ ಪ್ರವಾಸಿಗಳ ಅಭಿಪ್ರಾಯಗಳು

ಕರ್ನಾಟಕ ದೇಶದಲ್ಲಿ ಪೂರ್ವಕಾಲದಿಂದಲೂ ಆಗಿಹೋದ ರಾಜವಂಶಗಳ ಇತಿಹಾಸವನ್ನು ನೋಡಿದರೆ, ಅವೆಲ್ಲವುಗಳೂ ಕನ್ನಡ ಮತ್ತು ಸಂಸ್ಕೃತ ಪಂಡಿತರನ್ನು ತಮ್ಮ ಆಸ್ಥಾನದಲ್ಲಿಟ್ಟುಕೊಂಡು ವಾಙ್ಮಯಾಭಿವೃದ್ಧಿಗೆ ಬಹಳ ಸಹಾಯ ಮಾಡುತ್ತಿದ್ದುದು ಕಂಡುಬರುತ್ತದೆ. ಚಾಲುಕ್ಯ ರಾಷ್ಟ್ರಕೂಟ, ಹೊಯಸಳ ವಿಜಯನಗರದ ರಾಜ್ಯಗಳಲ್ಲಿ ಬಿಲ್ಹಣ, ವಿಜ್ಞಾನೇಶ್ವರ, ಸಾಯನ, ವಿದ್ಯಾರಣ್ಯ, ರಾಮಾನುಜಾಚಾರ್ಯ ಮೊದಲಾದ ಸಂಸ್ಕೃತ ಭಾಷಾಪಂಡಿತರಲ್ಲದೆ ಪೊನ್ನ, ಜನ್ನ, ಪಂಪ ಮೊದಲಾದ ಕನ್ನಡ ಮಹಾ ಪಂಡಿತರೂ ಸಹ ಅತ್ಯಂತ ಮನ್ನಣೆಯನ್ನು ಹೊಂದಿದವರಾಗಿದ್ದರು. ಇಷ್ಟೇ ಅಲ್ಲ, ಈ ವಂಶಗಳಲ್ಲಿಯ ಅನೇಕ ರಾಜರು ತಾವು ಸಹ ಸರಸ್ವತೀಸೇವಕರಾಗಿ ಮಹತ್ವದ ಗ್ರಂಥಗಳನ್ನು ರಚಿಸಿರುವದು ತೋರಿಬರುತ್ತದೆ. ಅದು ದರಿಂದಲೇ ಕರ್ನಾಟಕ ಭೂಮಿಯು ಪೂರ್ವಕಾಲದಿಂದಲೂ ವಿದ್ವಾಂಸರ ತವರುಮನೆ ಎಂದೆನಿಸಿಕೊಂಡು ಉತ್ತರಕ್ಕೆ ಕಾಶ್ಮೀರದಿಂದ ದಕ್ಷಿಣಕ್ಕೆ ತಮಿಳು ದೇಶದವರೆಗೆ ಅನೇಕ ನಾಡಿನ ಪಂಡಿತರು ಇಲ್ಲಿಯ ರಾಜಧಾನಿಗಳನ್ನು ಆಶ್ರಯಿಸಿ ಉದಾರಾಶ್ರಯವನ್ನು ರಾಜರುಗಳಿಂದ ಹೊಂದಿದವರಾಗಿದ್ದರು.

ಮುಖ್ಯ ರಾಜ್ಯಾಧಿಕಾರಿಗಳು ಹೀಗೆ ವಿದ್ಯಾವಿನೋದಿಗಳಾಗಿದ್ದರಿಂದ ಅವರ ಅನುಕರಣವನ್ನು ಅವರ ಸಾಮಂತ ರಾಜರೂ ಕೂಡ ಮಾಡಿ, ಅವರೂ ವಿದ್ವಾಂಸರಿಗೆ ಆಶ್ರಯದಾತರಾಗಿದ್ದದ್ದು ಕಂಡುಬರುತ್ತದೆ. ಸವದತ್ತಿಯ ರಟ್ಟರೂ ಕೆಳದಿಯ ರಾಜರೂ, ಮೈಸೂರಿನ ಅರಸರೂ, ಈ ಚೀಚಿಗೆ ಸುರಪುರದ ಬೇಡರ ದೊರೆಗಳೂ, ಇಷ್ಟೆ ಅಲ್ಲ, ಕಿತ್ತೂರಿನಂಥ ಸಣ್ಣ ಸಣ್ಣ ಸಂಸ್ಥಾನಿಕರೂ ಸಹ ಪಂಡಿತರಿಗೆ ಸಹಾಯ ಮಾಡುವಂಥವ

ರಾಗಿದ್ದರು. ಈ ಸ್ಥಿತಿಯು ಕರ್ನಾಟಕ ದೇಶದಲ್ಲಿದ್ದದರಿಂದ ಅಸಂಖ್ಯ ಗ್ರಂಥಕಾರರು ಉತ್ಪನ್ನರಾಗಿ ಕರ್ನಾಟಕದ ಸಂಸ್ಕೃತಿಯ ಪ್ರವಾಹವನ್ನು ಬಹಳ ಕಾಲದಿಂದಲೂ ಯಾವ ತಪ್ಪಿಲ್ಲದೆ ಸಾಗಿಸುತ್ತ ಬಂದಿರುತ್ತಾರೆ.

ಉದಾಹರಣಾರ್ಥವಾಗಿ ಪಶ್ಚಿಮ ಘಟ್ಟದ ಅತ್ಯಂತ ಅರಣ್ಯಮಯ ಪ್ರದೇಶವನ್ನು ತೆಗೆದುಕೊಳ್ಳುವಾ. ಈ ಪ್ರಾಂತವನ್ನು ೧೪೯೯ ರಿಂದ ೧೭೬೩ರವರೆಗೆ ಕೆಳದಿಯ ರಾಜರೂ ೧೫೫೫ ರಿಂದ ೧೭೬೩ರವರೆಗೆ ಸ್ವಾದಿಯ ಅಧಿಪತಿಗಳೂ ರಾಜ್ಯವಾಳಿದರು. ಇವರು ರಾಜ್ಯವಾಳಿದ್ದು ವಿಜಯನಗರದ ರಾಜ್ಯದ ಅಂತ್ಯಕಾಲದಲ್ಲಿ. ಈ ಕಾಲದಲ್ಲಿ ವಿಜಾಪುರದ ಬಾದಶಹ ಉಪಟಳ, ಮೊಗಲರ ದಾಳಿ, ಮತ್ತು ಮರಾಠರ ಹಾವಳಿಗಳು ಬಹುಭಯಂಕರ ರೀತಿಯಿಂದ ದೇಶವನ್ನೆಲ್ಲ ಕಂಗೆಡಿಸಿ ಬಿಟ್ಟವು. ದೇಶ ಮಧ್ಯದಲ್ಲಿ ಸ್ವಾಸ್ಥ್ಯ ಸಮಾಧಾನಗಳೇನೂ ಇರಲಿಲ್ಲ. ಆದರೂ ಕೆಳದಿ, ಸ್ವಾದಿಯ ಅರಸರು ತಮ್ಮ ಪ್ರಾಂತವನ್ನು ಸುಖಸಮಾಧಾನದಲ್ಲಿರಿಸಿ, ಅತ್ಯುತ್ತಮ ರೀತಿಯಿಂದ ರಾಜ್ಯವಾಳಿದ್ದಲ್ಲದೆ, ಅವರು ವಿದ್ವತ್ಪ್ರೇಮಿಗಳಾಗಿ ಅನೇಕ ಗ್ರಂಥಕಾರರಿಗೆ ಸಹಾಯ ಮಾಡಿ ವಾಙ್ಮಯವನ್ನು ಬೆಳೆಸುವಂಥವರಾದರು. ಕಾರವಾರ ಜಿಲ್ಹೆ ಎಂದರೆ ಈ ಕಾಲದಲ್ಲಿ ಅತ್ಯಂತ ಕಾಡು ಪ್ರದೇಶವಾಗಿದ್ದು ನಿರ್ಜನವಾಗುತ್ತ ನಡೆದಿರುತ್ತದೆ. ಆದರೆ ಪೂರ್ವ ಕರ್ನಾಟಕದಲ್ಲಿ ಈ ಭಾಗವು ಸುಖಸಮಾಧಾನದಿಂದ ತುಂಬಿಕೊಂಡು ದೊಡ್ಡ ದೊಡ್ಡ ನಗರಗಳಿಂದಲೂ ಬಂದರಗಳಿಂದಲೂ ಸುಶೋಭಿತವಾಗಿ ಬರೇ ಹಿಂದುಸ್ಥಾನದಲ್ಲಿಯಷ್ಟೇ ಅಲ್ಲ, ಯುರೋಪಖಂಡದಲ್ಲಿ ಸಹ ಹೆಸರುವಾಸಿಯಾಗಿತ್ತು. ಈ ಪ್ರಾಂತದಲ್ಲಿ ಡಚ್ಚ, ಇಂಗ್ಲಿಷ, ಪೋರ್ತುಗೀಜ ವರ್ತಕರು ನಿಂತುಕೊಂಡು ಈ ರಾಜರ ಸ್ನೇಹವನ್ನು ಬಳಸಿ, ಕರ್ನಾಟಕದ ನಾಡಿನ ಕೂಡ ವ್ಯಾಪಾರಾಭಿವೃದ್ಧಿಯನ್ನು ಕೋರುತ್ತಿದ್ದರು. ಕೆಳದಿ ಮತ್ತು ಸ್ವಾದಿಯ ರಾಜರಾದರೂ ಇದಕ್ಕೆ ಅನುಕೂಲರಾಗಿ ತಮ್ಮ ಪ್ರದೇಶಗಳಲ್ಲಿ ವ್ಯಾಪಾರಾಭಿವೃದ್ಧಿಗೆ ಅನುಕೂಲಗಳನ್ನು ಒದಗಿಸಿಕೊಟ್ಟು ಬಹು ಶ್ರೀಮಂತಿಕೆಯನ್ನು ಹೊಂದಿ ಅತ್ಯಂತ ವೈಭವದಿಂದ ರಾಜ್ಯವಾಳುತ್ತಿದ್ದರು. ಈ ಸಂಗತಿಯು ಕೇವಲ ಕಾಲ್ಪನಿಕವಲ್ಲವೆ. ಆ ಕಾಲಕ್ಕೆ ಈ ಪ್ರಾಂತಗಳಲ್ಲಿ ಪ್ರವಾಸ ಮಾಡಿದ ಅನೇಕ

ಯುರೋಪಿಯನ್ನ ಪ್ರವಾಸಿಗಳು ಇದರ ನಿಜ ಸ್ಥಿತಿಯ ಬಗ್ಗೆ ತಮ್ಮ ಗ್ರಂಥ ಗಳಲ್ಲಿ ವರ್ಣನೆ ಮಾಡಿದ್ದಾರೆ. ಅವರ ವರ್ಣನೆಗಳು ಬಹಳ ಮಹತ್ವದ ವಿದ್ದು ಅವುಗಳನ್ನು ನಾವು ಇಲ್ಲಿ ಕೊಡಲಿಚ್ಛಿಸಿದ್ದೇವೆ. ಇವುಗಳ ಮೇಲಿಂದ ಈ ರಾಜರ ನಿಜ ಸ್ಥಿತಿಯು ವಾಚಕರಿಗೆ ಚೆನ್ನಾಗಿ ಗೊತ್ತಾಗದೆ ಇರದು.

೧೫೮೨ ರಿಂದ ೧೬೨೯ರವರೆಗೆ ವೆಂಕಪ್ಪನಾಯಕನು ಕೆಳದಿಯಲ್ಲಿ ರಾಜ್ಯ ವಾಳುತ್ತಿದ್ದನು. ವಿಜಯನಗರದ ರಾಜ್ಯವು ಹಾಳಾದ ಬಳಿಕ ಇವನು ಮಂಗಳೂರ, ಕಾರವಾರ ಜಿಲ್ಹೆಗಳನ್ನೂ ಗಟ್ಟದ ಮೇಲೆ ಶಿವಮೊಗ್ಗ, ಕಡೂರು, ಧಾರವಾಡ ಜಿಲ್ಹೆಯ ದಕ್ಷಿಣಭಾಗಗಳನ್ನೂ ಪಾದಾಕ್ರಾಂತ ಮಾಡಿಕೊಂಡು ಬಹು ಬಲಾಢ್ಯನಾಗಿ ರಾಜ್ಯವಾಳಿದನು. ಇವನ ಸಂಪೂರ್ಣ ಚರಿತ್ರೆಯು ೧೨೯ನೇ ಅಗಷ್ಟಸಂಚಿಕೆಯಲ್ಲಿ ಕೊಡಲ್ಪಟ್ಟಿದೆ. ಇವನ ಕಾಲ ದಲ್ಲಿ ಡೆಲಾವೆಲ್ ಎಂಬ ಪ್ರವಾಸಿಯು ಪೋರ್ತುಗೀಜರ ರಾಯಭಾರಿಗ ಳೊಡನೆ ವೆಂಕಟಪ್ಪನಾಯಕನನ್ನು ಕಾಣಲಿಕ್ಕೆ ಹೋಗಿದ್ದನು. ಅವನು ತನ್ನ ವರ್ಣನೆಯಲ್ಲಿ ಉಲ್ಲೇಖಿಸಿರುವದೇನಂದರೆ :- ನಾವು ಹೊನ್ನಾವರದಲ್ಲಿ ಇಳಿದೆವು. ಇದು ದೊಡ್ಡ ಬಂದರವು. ಪಟ್ಟಣದಲ್ಲಿ ಒಂದು ದೊಡ್ಡ ಚೌಕು ಇದ್ದು ಸುಂದರವಾದ ಬೀದಿಗಳು ಇರುತ್ತವೆ. ಇಲ್ಲಿಂದ ಒಂದು ಗುಂಡಿನ ಅಳತೆಯಲ್ಲಿ ಇನ್ನೊಂದು ಬ್ರಾಹ್ಮಣರ ದೊಡ್ಡ ಪಟ್ಟಣವಿದೆ. ಇಲ್ಲಿಂದ ಗೆರಸಪ್ಪೆಗೆ ಹೋದೆವು. ಆದರೆ ವೆಂಕಟಪ್ಪನಾಯಕನು ಇಲ್ಲಿಯ ರಾಣಿ ಯನ್ನು ಗೆದ್ದು ಆಕೆಯ ರಾಜ್ಯವನ್ನು ವಶಮಾಡಿಕೊಂಡಿದ್ದನು. ಈ ಪಟ್ಟ ಣವೂ, ಅರಮನೆಯೂ ಹಾಳುಬಿದ್ದಿದ್ದವು. ಈ ಪ್ರಾಂತದಲ್ಲಿ ಮೆಣಸು ಬಹು ಪ್ರಸಿದ್ಧವಾದದ್ದು. ಇದಕ್ಕೋಸ್ಕರ ಗೆರಸಪ್ಪೆಯ ರಾಣಿಗೆ "ಮೆಣ ಸಿನರಾಣಿ" ಎಂಬ ಹೆಸರು ಬಿದ್ದಿತ್ತು. ಅಲ್ಲಿಂದ ಪೋರ್ತುಗೀಜರು ಅರಸ ನನ್ನು ಕಾಣಲಿಕ್ಕೆ ಇಕ್ಕೇರಿಗೆ ಹೋದರು. ಆದರೆ ಅವರು ಈ ಪ್ರದೇಶ ದಲ್ಲಿಯ ಮೆಣಸನ್ನು ಕೊಳ್ಳಲಿಕ್ಕೆ ಹಡಗುಗಳನ್ನು ತರದೆ ಇದ್ದದರಿಂದ ಅರಸನು ಸಿಟ್ಟಾಗಿ, ಅವರನ್ನು ಕಾಣಲಿಕ್ಕೆ ಅಲ್ಲಗಳೆದನು. ಆಗ ಪೋರ್ತು ಗೀಜರ ರಾಯಭಾರಿಗಳು ಹಾಗೆಯೇ ಹಿಂದಿರುಗಬೇಕಾಯಿತು. ಹೀಗೆ ಈ

ಪ್ರವಾಸಿಯು ತನ್ನ ವರ್ಣನೆಯಲ್ಲಿ ಉಲ್ಲೇಖಿಸಿರುತ್ತಾನೆ. ಇದು ೧೬೨೩ರಲ್ಲಿ ಸಂಭವಿಸಿತು.

ಮುಂದೆ ೧೬೬೦ರಲ್ಲಿ ಬಾಲ್ಡ್ಯುಸನೆಂಬ ಪ್ರವಾಸಿಯು ಈ ಭಾಗದಲ್ಲಿ ಸಂಚರಿಸಿದನು. ಆ ಕಾಲಕ್ಕೆ ಇಕ್ಕೇರಿಯ ರಾಜರಲ್ಲಿ ಅತ್ಯಂತ ಪ್ರಸಿದ್ಧನಾದ ಶಿವಪ್ಪನಾಯಕನು (೧೬೪೫-೧೬೬೦) ರಾಜ್ಯವಾಳುತ್ತಿದ್ದನು. ಇವನು ಭೂಮಿಯನ್ನು ಅಳೆಯಿಸಿ ಸರಕಾರಕ್ಕೆ ಬರತಕ್ಕ ಕಂದಾಯವನ್ನು ಗೊತ್ತುಪಡಿಸಿ ಅದನ್ನು ಸುವ್ಯವಸ್ಥೆಗೆ ತಂದನು. ಈ ಪ್ರವಾಸಿಯು ತನ್ನ ವರ್ಣನೆಯಲ್ಲಿ "ಕ್ಯಾನರಾಪ್ರದೇಶವು ಅಕ್ಕಿ ಮೊದಲಾದ ಜೀನಸುಗಳನ್ನು ಬೆಳೆಯುವದರಲ್ಲಿ ಅತಿ ಪ್ರಸಿದ್ಧಿಯನ್ನು ಹೊಂದಿದೆ. ಮತ್ತು ಬೇಕಾದಂಥ ಕೆಲಸ ಮಾಡಬಲ್ಲಂಥ ಸದೃಢರೂ ಆರೋಗ್ಯಕಾಯರೂ ಆದ ಜನರು ಇಲ್ಲಿ ಇದ್ದಾರೆ" ಎಂದು ಬರೆದಿರುವನು ಈ ವರ್ಣನೆಗೂ ಆ ಪ್ರಾಂತದ ಈಗಿನ ಸ್ಥಿತಿಗೂ ಎಷ್ಟು ಅಂತರವಿದೆ ಎಂಬುದನ್ನು ವಾಚಕರು ತಿಳಿಯತಕ್ಕದ್ದು.

ಮುಂದೆ ೧೬೭೩ರಲ್ಲಿ ಫ್ರಾಯರ ಎಂಬ ಪ್ರವಾಸಿಯು ಈ ಭಾಗದಲ್ಲಿ ಪ್ರವಾಸಮಾಡಿದನು. ಅದು ೧೬೭೨ರಿಂದ ೧೬೯೭ರವರೆಗೆ ಆಳಿದ ಚನ್ನಮಾಜಿರಾಣಿಯವರ ರಾಜ್ಯಭಾರದ ಕಾಲವು. ಆ ಕಾಲಕ್ಕೆ ರಾಜ್ಯಸ್ಥಿತಿಯು ಹೇಗಿತ್ತೆಂಬುದು ಈ ಪ್ರವಾಸಿಯ ವರ್ಣನೆಯಿಂದ ಬಹು ಚೆನ್ನಾಗಿ ವ್ಯಕ್ತವಾಗುತ್ತದೆ. ಅವನು ಅನ್ನುವದೇನಂದರೆ, "ಜನರಲ್ಲಿ ಉತ್ತಮ ಕಾಯದೆಗಳು ಪ್ರಚಾರದಲ್ಲಿದ್ದವು ಮತ್ತು ಅವರು ಅವುಗಳನ್ನು ಪಾಲಿಸುವರು. ಈ ಪ್ರಾಂತದಲ್ಲಿ ಸಣ್ಣ ಸಣ್ಣ ಅಡ್ಡ ದಾರಿಗಳಿರದೆ ಪ್ರವಾಸ ಮಾಡಲು ಯೋಗ್ಯವಾದ ದೊಡ್ಡ ದೊಡ್ಡ ರಸ್ತೆಗಳು ಇವೆ. ಮತ್ತು ಜನರು ತಮ್ಮ ಪ್ರವಾಸವನ್ನು ಹಾದಿ ತೋರಿಸುವವರಿಲ್ಲದೆ ಮಾಡುತ್ತಾರೆ. ಮಲಬಾರದಲ್ಲಿ ಈ ಸ್ಥಿತಿಯು ಇಲ್ಲ" ಎಂದು ಬರೆದಿದ್ದಾನೆ. ಈ ಪ್ರವಾಸಿಯು ಮಿರ್ಜಾನ ಬಂದರಕ್ಕೆ ಹೋದಾಗ್ಗೆ ಅಲ್ಲಿಯ ಅಧಿಪತಿಯ ಭೆಟ್ಟಿಯು ಅವನಿಗೆ ಆಯಿತು. ಅದನ್ನು ಅವನು ಹೀಗೆ ವರ್ಣಿಸಿರುವನು :- ಈತನು ಇತರೇ ದೇಶದ ಅರಸರಂತೆ ವ್ಯಾಪಾರಮಾಡಲು ನಾಚುವದಿಲ್ಲ. ನಾನು ಅವನನ್ನು ಕಂಡಾಗ್ಗೆ

ಒಂದು ವಿಸ್ತಾರವಾದ ಗಿಡದ ಕೆಳಗೆ ತನ್ನ ಪರಿವಾರದಿಂದ ಸುತ್ತುಗಟ್ಟಿಲ್ಪಟ್ಟವನಾಗಿ ಒಂದು ಜಮಖಾನೆಯ ಮೇಲೆ ಕುಳಿತಿದ್ದನು. ಆಗ ಅವನು ರಾಜ್ಯದ ಮಂತ್ರಿಯು ಆಗಮನವನ್ನು ನಿರೀಕ್ಷಿಸುತ್ತ ಕುಳಿತಿದ್ದನು. ಅರಸನು ಚಿಕ್ಕವನಿದ್ದದರಿಂದ ಅವನ ರಕ್ಷಕನಾಗಿ ಇವನೇ ರಾಜ್ಯಭಾರವನ್ನು ಮಾಡುತ್ತಿದ್ದನು. ಈ ಮಂತ್ರಿಯು ಢಾಲು, ಕತ್ತಿಗಳನ್ನು ಧರಿಸಿದ ಕಾವಲುಗಾರರು, ಸರದಾರರು, ಮತ್ತು ಇತರ ಕಾಲಾಳುಗಳಿಂದ ಕೂಡಿಕೊಂಡು ಇಲ್ಲಿಗೆ ಬಂದನು. ಅವರು ಹತ್ತಿದ ಕುದುರೆಗಳೂ ಅತ್ಯಂತ ಸುಂದರವಾದ ಆಭರಣಗಳಿಂದ ಅಲಂಕರಿಸಲ್ಪಟ್ಟಿದ್ದವು. ಕುದುರೆಯ ಮೇಲಿನ ಆಭರಣಗಳು ಇಂಗ್ಲಂಡದಲ್ಲಿಯ ಅತ್ಯಂತ ಉತ್ತಮವಾದ ಕುದುರೆಗಳ ಮೇಲಿನವುಗಳನ್ನು ಸರಿಗಟ್ಟುವಂತೆ ಇದ್ದವು. ಮಂತ್ರಿಯು ಇಂಗ್ಲೀಷರ ಹಡಗಗಳನ್ನು ನೋಡಬೇಕೆಂದು ೩೬ ಜನರಿಂದ ಹುಟ್ಟುಕಡಿಯಲ್ಪಟ್ಟ ದೋಣಿಯನ್ನೇರಿ ಬಂದನು. ಆಗ ವಾದ್ಯಗಳು ಬಾರಿಸುತ್ತಿದ್ದವು. ಅವನು ೨-೩ ಹಡಗಗಳನ್ನು ನೋಡಿದನು. ಆಗ ಇಂಗ್ಲಿಷ್ ನಾವಿಕನು ಅವನಿಗೆ ತನ್ನ ತೋಫಿನ ಸಲಾಮಿಯನ್ನು ಕೊಟ್ಟು ಜಯಘೋಷದಿಂದ ಒಂದು ಸುಂದರವಾದ ಹಸರು ಬಣ್ಣದ ವಸ್ತ್ರವನ್ನು ಕಾಣಿಕೆಯಾಗಿ ಕೊಟ್ಟನು." ಈ ವರ್ಣನೆಯ ಮೇಲಿಂದ ಆಗ ಈ ಕೆಳದೀ ರಾಜರ ವೈಭವ ಮತ್ತು ವರ್ಚಸ್ಸು ಎಷ್ಟು ಇತ್ತು ಎಂಬುದು ಗೊತ್ತಾಗುತ್ತದೆ.

ಇದೇ ಪ್ರವಾಸಿಯು ೧೬೭೬ರಲ್ಲಿ ಸ್ವಾದಿಯ ರಾಜ್ಯದಲ್ಲಿಯೂ ಸಂಚರಿಸಿದನು. ಆಗ ೧೬೭೪ ರಿಂದ ೧೬೯೭ರವರೆಗೆ ಆಳಿದ ಸದಾಶಿವರಾಯನು ಅಲ್ಲಿ ಆಳುತ್ತಿದ್ದನು. ಈ ಪ್ರವಾಸಿಯು ಸ್ವಾದಿ ರಾಜ್ಯದ ಬಗ್ಗೆ "ಈ ಪ್ರಾಂತವು ಮೆಣಸಿನ ಬಗ್ಗೆ ಪೃಥ್ವಿಯಲ್ಲೆಲ್ಲ ಹೆಸರಾಗಿದೆ. ಇದರಷ್ಟು ತಂಟು ಮತ್ತು ಅತ್ಯುತ್ತಮವಾದ ಮೆಣಸು ಎಲ್ಲಿಯೂ ಸಿಗುವದಿಲ್ಲ. ಇದರ ಉತ್ಪನ್ನವು ಅರಸನಿಗೆ ೩೦ ಲಕ್ಷ ಪ್ಯಾಗೋಡ ವರೆಗೆ ಆಗುತ್ತವೆಂದು ಊಹಿಸಲ್ಪಟ್ಟಿದೆ. ಅರಸನ ಹತ್ತಿರ ೩ ಸಾವಿರ ಕುದುರೆಗಳು ಮತ್ತು ೧೨ ಸಾವಿರ ಕಾಲಾಳುಗಳುಳ್ಳ ದಂಡು ಇದೆ'' ಎಂದು ಬರೆದಿರುವನು.

ಇಟಲಿಯ ಪ್ರವಾಸಿಯಾದ ಗ್ಯಾಮೆಲಿಯು ಇದೇ ಪ್ರದೇಶಕ್ಕೆ ೧೬೯೫ ಬಂದಿದ್ದನು. ಅವನು ಸ್ವಾದಿಯ ರಾಜ್ಯದೊಳಗೆ ಹಾಯ್ದು ಹೋದನು. ಅದರ ಬಗ್ಗೆ ಅವನು ''ಈ ಪ್ರಾಂತವು ಪರ್ವತ ಪ್ರದೇಶವಾಗಿದ್ದು ಅದಕ್ಕೆ ಅರಸನು ದೊರೆಯಾಗಿದ್ದಾನೆ. ಪ್ರದೇಶವು ಪ್ರವಾಸಕ್ಕೆ ಕಠಿಣವಾದದ್ದು. ಈಗ ಕಳ್ಳರ ಕಾಟವು ಹೆಚ್ಚಿದೆ. ಅರಸನು ಪಲ್ಯಾಳದ ದಕ್ಷಿಣಕ್ಕೆ ೭ ಮೈಲು ಮೇಲಿರುವ ಸಾಂಬ್ರಾಣಿಯಲ್ಲಿ ವಾಸಿಸುತ್ತಾನೆ. ಸಾಂಬ್ರಾಣಿಯು ದೊಡ್ಡ ಪೇಟೆಯ ಸ್ಥಳವಾಗಿದ್ದು ಅದರಿಂದ ಅರಸನಿಗೆ ೩ ಲಕ್ಷ ರೂಪಾಯಿ ಉತ್ಪನ್ನವಿದೆ" ಎಂದು ಬರೆದಿರುವನು.

ಹ್ಯಾಮಿಲ್ಟನ್ನನೆಂಬ ಇನ್ನೊಬ್ಬ ಇಂಗ್ಲೀಷ ಪ್ರವಾಸಿಯು ಈ ಭಾಗವನ್ನು ೧೭೨೦ರಲ್ಲಿ ಸಂಚರಿಸಿದ್ದು ಕೆಳದಿಯ ರಾಜ್ಯದ ಬಗ್ಗೆ ಹೀಗೆ ಬರೆದಿರುವನು. ಆಗ ೧೭೧೪ ರಿಂದ ೧೭೩೯ರವರೆಗೆ ಆಳಿದ ಸೋಮಶೇಖರನು ಅರಸನಾಗಿದ್ದನು. "ಜನರು ಬಹಳ ಸದಾಚಾರಿಗಳು. ದರೋಡೆ ಅಥವಾ ಕೊಲೆ ಇವುಗಳ ಸುದ್ದಿಯೇ ಇಲ್ಲಿಲ್ಲ. ಒಬ್ಬ ಅಪರಿಚಿತ ಮನುಷ್ಯನು ಕೂಡ ನೀನು ಎಲ್ಲಿಗೆ ಹೋಗುತ್ತಿ, ನಿನ್ನ ಕೆಲಸವಾವುದು ಎಂದು ಸಹ ಪ್ರಶ್ನೆ ಮಾಡಲ್ಪಡದೆ ಸುರಕ್ಷಿತವಾಗಿ ಇಲ್ಲಿ ಪ್ರವಾಸಮಾಡಬಹುದು. ಇಲ್ಲಿಯ ಪದ್ಧತಿ ಏನೆಂದರೆ, ರಾಜ್ಯದ ಶ್ರೇಷ್ಠ ಅಧಿಕಾರಿಗಳ ಹೊರ್ತು ಯಾರೂ ಆನೆ, ಕುದುರೆ ಅಥವಾ ಹೇಸರುಗತ್ತೆಗಳ ಮೇಲೆ ಹತ್ತಬಾರದು. ಅಥವಾ ಎರಡನೆಯವರ ಕೈಯಿಂದ ಛತ್ರಿಯನ್ನು ಹಿಡಿಸಿಕೊಳ್ಳಬಾರದು. ಆದರೆ ಛತ್ರಿಯನ್ನು ತಾವೇ ಹಿಡಿದುಕೊಳ್ಳಬಹುದು. ಆದರೆ ಬೇರೆ ವಿಷಯಗಳಲ್ಲಿ ಜನರಿಗೆ ಸ್ವತಂತ್ರತೆಯು ಇದ್ದು ಅವರು ಸುಖಿಯಾಗಿದ್ದಾರೆ."

ಇದೇ ಪ್ರವಾಸಿಯು ಸ್ವಾದಿಯ ರಾಜ್ಯದಲ್ಲಿಯೂ ಹೋಗಿದ್ದನು. ಅದರ ಬಗ್ಗೆ ಅವನು "ಕಂದರಗಳಲ್ಲಿ ಸಮೃದ್ಧಿಯಾಗಿ ಧಾನ್ಯವು ಬೆಳೆಯುವದಲ್ಲದೆ, ಓಂದುಸ್ಥಾನದಲ್ಲಿ ಅತ್ಯಂತ ಉತ್ತಮವಾದ ಮೆಣಸು ಇಲ್ಲಿ ಆಗುತ್ತದೆ. ಈ ಅರಸನ ರಾಜ್ಯದಲ್ಲಿ ಅಂಕೋಲಾ, ಮತ್ತು ಮಿರ್ಜಾನ ಎಂಬ ಬಂದರುಗಳು ಇವೆ" ಎಂದು ಬರೆದಿರುವನು.

ಕೆಳದಿಯ ರಾಜ್ಯವು ೧೭೬೩ರಲ್ಲಿ ನಾಶವಾಯಿತು. ಆಗ ವೀರಮ್ಮಾಜಯ ನಿದರ್ಶನದಲ್ಲಿ ಸೋಮಶೇಖರ ರಾಜನು ಆಳುತ್ತಿದ್ದನು. ಆಗ ರಾಜ್ಯದಲ್ಲಿ ಅವ್ಯವಸ್ಥೆಯಾಗಪತ್ತಿತ್ತು. ಈ ಕಾಲಕ್ಕೆ ಅಂಕ್ವಿಟಿಲ್ ಡು ಪೇರಿನ್ನ ಎಂಬ ಫ್ರೆಂಚ ಗ್ರಂಥಕಾರನು ಈ ಭಾಗದಲ್ಲಿ ಪ್ರವಾಸ ಮಾಡಿದ್ದು ಅವನು ಅನ್ನುವದೇನಂದರೆ, "ಜನರು ದಂಗೆ ಎಬ್ಬಿಸಿದ್ದಾರೆ, ಮರಾಠರು ೫೦ ಸಾವಿರ ಪೌಂಡು ಖಂಡಣಿ ಎತ್ತುತ್ತಿದ್ದರಿಂದ, ವ್ಯಾಪಾರಕ್ಕೆ ನಷ್ಟ ಉಂಟಾಗಿದೆ." ಎಂದು ಬರೆದಿರುವನು.

೧೭೬೩ನೇ ಇಸ್ವಿಯಲ್ಲಿ ಹೈದರನು ಆಗಿನ ರಾಜಧಾನಿಯಾದ ಬಿದನೂರನ್ನು ಕೈವಶ ಮಾಡಿಕೊಳ್ಳಲು ಆಗ ಅವನಿಗೆ ಅಪಾರವಾದ ಧನ ಸಂಪತ್ತು ದೊರಕಿತು. ಅವನಿಗೆ ಆಗ ಒಂದು ಕೋಟಿ ೨೦ ಲಕ್ಷ ಪೌಂಡು ಅಂದರೆ ೧೮ ಕೋಟಿ ರೂಪಾಯಿ ಬೆಲೆಯುಳ್ಳ ಲೂಟಿಯು ಬಿದನೂರು ಪಟ್ಟಣದಲ್ಲಿ ದೊರಕಿತೆಂದು ಯುರೋಪಿಯನ್ನ ಪ್ರವಾಸಿಗರು ಹೇಳುತ್ತಾರೆ. ಈ ಧನದ ಮೂಲಕವಾಗಿಯೇ ತಾನು ಮುಂದುವರಿಯಲಿಕ್ಕೆ ಮತ್ತು ತನ್ನ ರಾಜ್ಯವು ವಿಸ್ತಾರಹೊಂದಲಿಕ್ಕೆ ಕಾರಣವಾಯಿತೆಂದು ಹೈದರನು ಮೇಲಿಂದ ಮೇಲೆ ಅನ್ನುತ್ತಿದ್ದನು.

ಟೀಪುವಿನ ರಾಜ್ಯವು ೧೭೯೯ರಲ್ಲಿ ಇಂಗ್ಲಿಷರ ಕೈವಶವಾಯಿತು. ಆಗ ಅವರ ರಾಜ್ಯದ ಪದ್ಧತಿಯು ಬಗ್ಗೆ ೩೧ನೇ ಮೇ ೧೮೦೦ನೇ ಇಸ್ವಿಯ ದಿವಸ ಈಸ್ಟ ಇಂಡಿಯಾ ಕಂಪನಿಯು ಬೋರ್ಡ ಆಫ್ ಡಾಯರೆಕ್ಟರರಿಗೆ ಆಗಿನ ಇಲ್ಲಿಯ ಅಧಿಕಾರಿಗಳು ವರದಿ ಮಾಡಿರುವದೇನಂದರೆ :– ಹೈದರನು ಕೆನರಾ ಪ್ರದೇಶವನ್ನು ಕೈವಶ ಮಾಡಿಕೊಂಡಾಗ ಅಲ್ಲಿಯ ಜನರು ಉದ್ಯೋಗಿಗಳಾಗಿ ದೇಶವು ಬಹಳ ಸುಧಾರಣೆಯಲ್ಲಿತ್ತು. ರೈತರಿಗೆ ಉತ್ಪನ್ನದ ಬಹು ಭಾಗವು ಸಿಸುತ್ತಿದ್ದದರಿಂದ ಅವರಷ್ಟು ಸುಖಿಯಾದವರು ಒಂದು ಸ್ಥಾನದಲ್ಲಿಯು ಬೇರೆ ಯಾವ ಅರಸನ ರಾಜ್ಯದಲ್ಲಿರಲಿಲ್ಲ. ಆದರೆ ಹೈದರನು ಈ ಅರಸರ ನ್ಯಾಯವಾದ ಮತ್ತು ಜಾಣತನ ಆಳಿಕೆಯ ಕ್ರಮವನ್ನು ಅನುಸರಿಸದೆ, ಅವನು ಬೇರೆ ಭಾಗಗಳಲ್ಲಿ ಯುದ್ಧ ನಡಿಸಿ ಹೊಸ

ಪ್ರಾಂತಗಳನ್ನು ಕೈವಶ ಮಾಡಿಕೊಳ್ಳಲಿಕ್ಕೆ ಹತ್ತುವ ಯುದ್ಧದ ವೆಚ್ಚವನ್ನು ಈ ಪ್ರಾಂತದಿಂದ ವಸೂಲು ಮಾಡಿಕೊಳ್ಳುವ ಧ್ಯೇಯವನ್ನು ಇಟ್ಟುಕೊಂಡನು. ಅವನು ರೈತರ ಕಡೆಯಿಂದ ಎಷ್ಟು ಹಣ ವಸೂಲು ಮಾಡಲಿಕ್ಕೆ ಶಕ್ಯವಾದೀತೆಂಬುದನ್ನು ನೋಡಲಿಕ್ಕೆ ನಾನಾಬಗೆಯ ಪ್ರಯೋಗಗಳನ್ನು ಮಾಡುವನು. ಹೈದರನ ಈ ಬೇಡಿಕೆಗಳನ್ನು ಇಲ್ಲಿಯ ರೈತರ ಕಯ್ಯಲ್ಲಿ ಬಹು ವರ್ಷಗಳಿಂದಲೂ ಕೂಡಿ ಬಿದ್ದ ಸಂಚಯದಿಂದ ಪೂರೈಸಲಿಕ್ಕೆ ಕೆಲ ಕಾಲ ಶಕ್ಯವಾಯಿತು. ಆದರೆ ಇದು ಬಹಳ ದಿವಸ ನಡೆಯದಾಯಿತು. ಇದರ ಮೂಲಕ ಹೈದರನು ಸಾಯುವ ಮುಂದೆ ಈ ಪ್ರಾಂತದ ಒಕ್ಕಲುತನವು ಬಹಳ ಕಡಿಮೆಯಾಗಲಿಕ್ಕೆ ಹತ್ತಿತು. ಮತ್ತು ವಸೂಲಿ ಬಾಕಿಯು ಬಹಳ ಉಳಿಯು ಹತ್ತಿತು" ಎಂದು ಬರೆದಿದ್ದು ಇದರ ಮೇಲಿಂದ ಈ ಕೆಳದಿ ಅರಸರ ರಾಜ್ಯವು ಎಷ್ಟು ಸುಸ್ಥಿತಿಯಲ್ಲಿತ್ತೇಂಬುದರ ಕಲ್ಪನೆಯು ವಾಚಕರಿಗೆ ಬರಬಹುದು.

ಈ ಯುರೋಪಿಯನ್ನ ಪ್ರವಾಸಿಗಳೆಲ್ಲರೂ ಮಾಡಿದ ವರ್ಣನೆಗಳು ಸತ್ಯವಾದುದೆಂದು ನಂಬಲಿಕ್ಕೆ ಏನೂ ಪ್ರತ್ಯವಾಯವಿಲ್ಲ. ಇವುಗಳ ಮೇಲಿಂದ ಕೆಳದಿ ಮತ್ತು ಸ್ವಾದೀ ರಾಜರು ಎಷ್ಟು ಜಾಣತನದಿಂದ ಮತ್ತು ಸುವ ಬುದ್ಧಿಯಿಂದ ಪ್ರಜಾನುರಾಗಿಗಳಾಗಿ ರಾಜ್ಯವಾಳಿದರೆಂಬುದು ವ್ಯಕ್ತವಾಗುತ್ತದೆ. ಆಗ ಈಗಿನ ಎರಡೂ ಕನ್ನಡ ಜಿಲ್ಲೆಗಳು ಅತ್ಯಂತ ಸುಸಂಪನ್ನ ಸ್ಥಿತಿಯಲ್ಲಿದ್ದವೆಂಬುದು ಗೊತ್ತಾಗುತ್ತದೆ. ಈ ಭಾಗದಲ್ಲಿ ವಿಸ್ತಾರವಾದ ವೈಭವ ಸಂಪನ್ನವಾದ ಪಟ್ಟಣಗಳು ನೆಲಸಿದ್ದವು. ದೇಶದಲ್ಲಿ ಅತ್ಯುತ್ತಮ ರಸ್ತೆಗಳಿದ್ದು ವ್ಯಾಪಾರಸ್ಥರು ಕಳ್ಳಕಾಕರ ಕಾಟವಿಲ್ಲದೆ ನಿರಾಂತಕವಾಗಿ ವ್ಯಾಪಾರ ಮಾಡುವರು. ದೊಡ್ಡ ದೊಡ್ಡ ಬಂದರಗಳ ಮೂಲಕ ಪರದೇಶಕ್ಕೆ ಬೆಲೆಯುಳ್ಳ ಜೀನಸುಗಳನ್ನು ಸಾಗಿಸುತ್ತಿದ್ದರು. ಒಕ್ಕಲುತನವು ಅಕ್ಕಿ, ಯಾಲಕ್ಕಿ, ಮೆಣಸು ಇಂಥ ಮಹತ್ವದ ಜೀನಸುಗಳ ಮೂಲಕ ಅತ್ಯಂತ ಅಭಿವೃದ್ಧಿಯ ಸ್ಥಿತಿಯಲ್ಲಿತ್ತು. ಮೇಲ್ಕಂಡ ಪ್ರವಾಸಿಗಳು ರಾಜ್ಯದಲ್ಲಿ ಯೋಗ್ಯ ಆಡಳಿತ ಇದ್ದ ಮೂಲಕ ಪ್ರಜೆಗಳು ಎಷ್ಟು ಸುಖಿಯಾಗಿದ್ದರೆಂಬುದನ್ನು ಬಹು ಚೆನ್ನಾಗಿ ತಮ್ಮ ವರ್ಣನೆಗಳಲ್ಲಿ ವಿವರಿಸುತ್ತಾರೆ.

ಆದರೆ ಮುಂಚಿನ ಈ ಸ್ಥಿತಿಗೂ ಎಷ್ಟು ಮಹದಂತರವಾಗುತ್ತದೆಂಬು ದನ್ನು ನೋಡಲು ಯಾರಿಗಾದರೂ ವಿಷಾದವೆನಿಸದೆ ಇರಲಾರದು. ಒಕ್ಕಲು ತನವು ಈಗ ಸಂಪೂರ್ಣ ಹಾಳು ಬಿದ್ದು, ಘೋಡಾರಣ್ಯವು ಮಾತ್ರ ಈ ಭಾಗಗಳಲ್ಲಿ ಬೋರ್ಗರೆಯುತ್ತದೆ. ಜನರೆಲ್ಲರೂ ದರಿದ್ರತೆಯನ್ನು ಹೊಂದಿ ಪರನಾಡುಗಳಿಗೆ ಹೊರಟು ಹೋಗುವದರಲ್ಲಿ ಇದ್ದಾರೆ. ಮತ್ತು ಯಾವ ಬಂದರಗಳಲ್ಲಿ ಮೊದಲು ನೂರಾರು ಹಡಗುಗಳು ಬಂದು ಹೋಗುತ್ತಿ ದ್ದವೋ ಅವೆಲ್ಲವುಗಳು ಈಗ ಹಾಳಾಗಿ ಹೋಗಿವೆ. ಈ ಸ್ಥಿತಿಯು ಈ ಭಾಗಕ್ಕೆ ಬಂದಿದ್ದರ ಮೂಲಕ ಕರ್ನಾಟಕದ ವ್ಯಾಪಾರ ಕೈಗಾರಿಕೆಗಳು ನಾಶವಾಗಿ ಅದರ ಪೂರ್ವ ವೈಭವವು ನಷ್ಟ ಹೊಂದಲಿಕ್ಕೆ ಕಾರಣವಾಯಿ ತೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ.

(ಶಿವಾನುಭವ ಸಂಪುಟ ೬ ಸಂಚಿಕೆ ೧ ರಿಂದ)

# ಬೀಳಗಿಯ ಸಂಸ್ಥಾನ

ಬೀಳಗಿಯ ಸಂಸ್ಥಾನವು ಕಾರವಾರ ಜಿಲ್ಹೆಯಲ್ಲಿ ಒಂದು ಕಾಲದಲ್ಲಿ ಅತ್ಯಂತ ಪ್ರಸಿದ್ಧಿಗೆ ಬಂದಿತ್ತು. ಅಲ್ಲಿ ಅನೇಕ ಸುಂದರವಾದ ಜೈನಬಸದಿಗಳಿರುತ್ತವೆ. ಆದರೆ ಮುಖ್ಯವಾಗಿ ಅದು ಕನ್ನಡ ಪ್ರಸಿದ್ಧ ವ್ಯಾಕರಣಕಾರನಾದ ಭಟ್ಟಾಕಲಂಕನ ಜನ್ಮಸ್ಥಾನವಾಗಿರುತ್ತದೆ. ಈ ಸಂಸ್ಥಾನದ ಇತಿಹಾಸವು ಈಗ ಉಪಲಬ್ಧವಿದ್ದು ಅದರ ಮೂಲ ಪ್ರತಿಯು ಮದ್ರಾಸ ಓರಿಯಂಟಲ್ ಲೈಬ್ರರಿಯಲ್ಲಿ ಇರುತ್ತದೆ. ಅದನ್ನು ಮದ್ರಾಸ ಗವ್ಹರ್ನಮೆಂಟಿನ ಹಿಂದಿನ ಸೀನಿಯರ ಕನ್ನಡ ಟ್ರಾನ್ಸಲೇಟರರಾದ ದಿವಂಗತ ಬೆನಗಲ್ ರಾಮರಾಯರು ಸಿದ್ಧಪಡಿಸಿದರು. ಅದನ್ನು ನಾನು ಆಧಾರವಾಗಿಟ್ಟುಕೊಂಡು ಮುಂದಿನ ವಿಷಯಗಳನ್ನು ತಮಗೆ ನಿವೇದಿಸುತ್ತಿದ್ದೇನೆ.

ಬೀಳಗಿಯು ಕಾರವಾರ ಜಿಲ್ಹಾ ಸಿದ್ಧಾಪುರ ತಾಲೂಕಿನಲ್ಲಿ ಮಲೆನಾಡಿನ ಮಧ್ಯಪ್ರದೇಶದಲ್ಲಿದೆ. ಮಲೆನಾಡು ಎಂದರೆ ಬರೇ ಬೆಟ್ಟ ಗುಡ್ಡಗಳುಳ್ಳ ಕಾಡು ಪ್ರದೇಶವೆಂದಾಗಲಿ ವಿಪರೀತ ಮಳೆ ಹುಯ್ಯುವ ನಾಡಾಗಲಿ ಎಂದು ತಿಳಿಯುವದು ಸಾಧುವಲ್ಲ. ಈ ನಾಡು ಪ್ರಕೃತಿದೇವಿಯ ಸೌಂದರ್ಯದ ಬೀಡು. ಇಲ್ಲಿಯ ಗಿಡಮರಗಳ ಸೊಂಪು, ಶೈತ್ಯ ಸೌರಭ್ಯದಿಂದ ತುಂಬಿದ ವಾಯುದೇವನ ಹೊಯ್ದಾಟ, ನಾನಾಬಗೆಯ ಪುಷ್ಪಗಳಿಂದ ಹೊರಸೂಸುವ ಸುವಾಸನೆ, ಬೆಟ್ಟ ಗುಡ್ಡಗಳಲ್ಲಿ ಬಿಡುವಿಲ್ಲದೆ ಹರಿದುಬರುತ್ತಿರುವ ನಿರ್ಜರೋದಕ ಇವುಗಳಿಂದ ಪ್ರೇಕ್ಷಕರ ಚಿತ್ತಕ್ಕೆ ಈ ಪ್ರಾಂತವು ರಮಣೀಯವಾಗಿರುತ್ತದೆ.

ಹಿಂದುಸ್ತಾನ ದೇಶದಲ್ಲಿ ಚಿತ್ತಾಕರ್ಷಕವಾದ ಇಂಥ ಪ್ರದೇಶಗಳು ಅನೇಕವಿರುತ್ತವೆ. ಇವು ಕಾಶ್ಮೀರ ಮಾತ್ರವಲ್ಲ, ಹಿಮಾಲಯ, ಸಹ್ಯಾದ್ರಿ, ನೀಲಗಿರಿ ಮುಂತಾದ ಪ್ರದೇಶಗಳಲ್ಲಿಯೂ ಹೇರಳವಾಗಿ ಸಿಕ್ಕುತ್ತವೆ. ಅವು ಕರ್ನಾಟಕ ದೇಶದಲ್ಲಿಯೂ ಇವೆ. ಅವು ಸುಪೆ, ಹೊನ್ನಾವರ, ಕಾರವಾರ

ತಾಲೂಕುಗಳಲ್ಲಿಯೂ, ಮೈಸೂರು ಸೀಮೆಯಲ್ಲಿಯೂ ಅನೇಕವಿರುತ್ತವೆ. ನಮ್ಮಲ್ಲಿಯ ರಾಜ್ಯ ಸರಕಾರಗಳು ಇಂಥವುಗಳನ್ನು ಆಯ್ದು ಅವುಗಳಲ್ಲಿ ಪ್ರವಾಸಿಕರಿಗೆ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟಲ್ಲಿ ಅಸಂಖ್ಯ ಪ್ರವಾಸಿಗಳು ಇಲ್ಲಿಗೆ ಆಗಮಿಸಿ ಆನಂದಪಡಬಹುದು.

ಕರ್ನಾಟಕ ದೇಶದಲ್ಲಿರುವ ಸಹ್ಯಾದ್ರಿಯ ಬೆಟ್ಟದ ಪ್ರದೇಶಗಳಲ್ಲಿ ಕ್ರಿಸ್ತಶಕದ ಆರಂಭದಿಂದಲೂ ಮಹತ್ವದ ರಾಜ್ಯಗಳು ತಲೆದೋರಿ ಆಳುತ್ತ ಬಂದಿವೆ. ಕಾರವಾರ ಜಿಲ್ಹೆಯಲ್ಲಿರುವ ಬನವಾಸಿಯು ಕದಂಬ ರಾಜರ ರಾಜಧಾನಿಯಾಗಿತ್ತು. ಈ ರಾಜ್ಯವು ಯುರೋಪಖಂಡಕ್ಕೆ ಹೋಗಿಬರುವ ಮುಖ್ಯ ಮಾರ್ಗದಲ್ಲಿ ಇದ್ದುದರಿಂದ ಇಲ್ಲಿ ಅನೇಕ ವ್ಯಾಪಾರೀ ಪಟ್ಟಣಗಳಾದವು. "ವೈಜಯಂತಿ" ಎಂಬುದು ಬನವಾಸಿಯ ಪುರಾತನ ಹೆಸರು. ಇಲ್ಲಿಯ ಒಬ್ಬ ವ್ಯಾಪಾರಸ್ಥನು ಪುಣೆ ಪಟ್ಟಣಕ್ಕೆ ಉತ್ತರದಲ್ಲಿರುವ 'ಕಾರ್ಲಾ' ಎಂಬ ಗ್ರಾಮದಲ್ಲಿ ಕಲ್ಲಿನಲ್ಲಿ ಕೊರೆದ ಒಂದು ಪ್ರಸಿದ್ಧ ಬೌದ್ಧಾಲಯವಿದ್ದು ಅದನ್ನು ಈತನು ನಿರ್ಮಾಣ ಮಾಡಿದನೆಂದು ಇಲ್ಲಿಯ ಒಂದು ಶಿಲಾಶಾಸನದಲ್ಲಿ ಹೇಳಿದೆ. ಮುಂದೆ ಬನವಾಸಿಯು ಈ ಕದಂಬರ ರಾಜ್ಯದಲ್ಲಿ ಕೆಲವು ಶಾಖೆಗಳಾಗಿ ಈ ಶಾಖೆಗಳ ಅರಸರು ಗೋವೆ, ಹಲಸಗಿ, ಹಾನಗಲ್ಲು ಈ ಸ್ಥಾನಗಳಲ್ಲಿ ೧೪ನೇ ಶತಮಾನದವರೆಗೂ ರಾಜ್ಯವಾಳಿದರು. ಮುಂದೆ ಈ ಭಾಗವೆಲ್ಲ ವಿಜಯನಗರದ ರಾಜರ ಅಧೀನವಾಯಿತು. ಆಗ ಅವರ ಅಧೀನದಲ್ಲಿದ್ದಾಗ ಈ ಭಾಗದಲ್ಲಿ ಬೀಳಗಿ, ಸ್ವಾದಿ, ಇಕ್ಕೇರಿ ಈ ಸಂಸ್ಥಾನಗಳಲ್ಲಿ ಕೆಲವು ರಾಜವಂಶಗಳು ಕೆಲವು ಶತಮಾನಗಳವರೆಗೆ ಆಳಿದವು. ವಿಜಯನಗರವು ನಾಶವಾದ ಬಳಿಕ ಇಲ್ಲಿಯ ರಾಜರು ಸ್ವತಂತ್ರರಾಗಿ ತಮ್ಮ ಸೀಮೆಗಳಲ್ಲಿ ಆಳಹತ್ತಿದರು. ಮುಂದೆ ಮೈಸೂರು ಪ್ರಾಂತದಲ್ಲಿ ಹೈದರಅಲ್ಲಿ ಮತ್ತು ಟೀಪುಸುಲ್ತಾನರು ಪ್ರಬಲರಾಗಲು ಅವರು ಈ ಬೆಟ್ಟದ ಪ್ರಾಂತಗಳ ಮೇಲೆ ದಾಳಿ ಮಾಡಿ ಇಲ್ಲಿಯ ರಾಜ್ಯಗಳನ್ನು ಕಸಿದುಕೊಂಡರು. ಮುಂದೆ ಟೀಪುವಿನ ಮರಣದ ನಂತರ ಈ ರಾಜ್ಯಗಳೆಲ್ಲವೂ ಬ್ರಿಟೀಶರ ಕೈವಶವಾದವು. ಈ ರಾಜ್ಯಗಳು ವಿಸ್ತಾರದಲ್ಲಿ ಬಹು ಚಿಕ್ಕವು.

ಆದರೂ ಅಲ್ಲಿಯ ಪ್ರದೇಶಗಳು ವ್ಯಾಪಾರೋದ್ಯೋಗಗಳಲ್ಲಿ ಪ್ರಬಲವಾಗಿದ್ದುದರಿಂದ ಅಲ್ಲಿಯ ನಿವಾಸಿಗಳು ಅತ್ಯಂತ ಸುಸ್ಥಿತಿಯಲ್ಲಿ ಇದ್ದರು.

ಈ ಪ್ರಕಾರ ಈ ಪ್ರದೇಶವು ಐಶ್ವರ್ಯದಲ್ಲಿ ಮಾತ್ರವಲ್ಲ, ಸಂಸ್ಕೃತಿಯಲ್ಲಿಯೂ ಕೂಡ ಮುಂದುವರಿದಿತ್ತು. ಇದು ಜೈನ, ಶೈವ, ವೀರಶೈವ, ವೈಷ್ಣವ, ಪಾಶುಪತ, ಕಾಳಾಮುಖ ಮೊದಲಾದ ಸಂಸ್ಕೃತಿಗಳ ಆ ವಾಸಭೂಮಿಯಾಗಿತ್ತು. ಆದ್ದರಿಂದ ಈ ಪ್ರದೇಶದಲ್ಲಿ ಗೋಕರ್ಣ, ಉಡಿಪಿ, ಬನವಸೆ, ಬಾಳೆಯಹಳ್ಳಿ ಶೃಂಗೇರಿ, ಉಳಿವಿ, ಸ್ವಾದಿ, ಬಳ್ಳಿಗಾವಿ, ಮೂಡಬಿದಿರಿ ಮೊದಲಾದ ಅತ್ಯಂತ ಮಹತ್ವದ ಧಾರ್ಮಿಕ ಸ್ಥಾನಗಳು ಉಂಟಾದವು.

ಇಲ್ಲಿ ಉಂಟಾದ ರಾಜ್ಯಗಳಲ್ಲಿ ಬೀಳಗೆಯ ರಾಜ್ಯವು ಬಹಳ ಚಿಕ್ಕದು. ಆದರೂ ಅದು ಸೌಂದರ್ಯ ಸಿರಿವಂತಿಕೆಯಲ್ಲಿ ಶ್ರೇಷ್ಠಸ್ಥಾನವನ್ನು ಹೊಂದಿತ್ತು. ಈಗಿನ ಸಿದ್ಧಾಪುರ ತಾಲೂಕವೇ ಬೀಳಗಿ ರಾಜ್ಯದ ಮುಖ್ಯ ಕೇಂದ್ರವು. ಈ ಪ್ರದೇಶವು ಅತ್ಯಂತ ಫಲಪ್ರದವಾದದ್ದೂ, ಅಸಂಖ್ಯ ತೋಟಪಟ್ಟಿಗಳುಳ್ಳದ್ದೂ ಆಗಿತ್ತು. ಇಲ್ಲಿಯೇ ಪೃಥ್ವಿಯಲ್ಲಿ ಪ್ರಸಿದ್ಧಿ ಹೊಂದಿದ ಗೆರಸಪ್ಪೆಯ ಪ್ರಪಾತವೂ ಇದೆ.

ಬೀಳಗಿ ರಾಜ್ಯದ ಮೂಲ ಸ್ಥಾಪಕನು ಅಂಡಣ್ಣನೆಂಬುವನು. ಈತನು ಐಸೂರು ಪಟ್ಟಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಈ ಐಸೂರು ಮೋಗಿ ಈಗ ಚಂದ್ರಗುತ್ತಿಯಾಗಿರುತ್ತದೆ. ಇದು ಒಂದು ಅತ್ಯಂತ ಕಡಿದಾದ ಮತ್ತು ಉನ್ನತವಾದ ಪರ್ವತಶಿಖರವಿರುತ್ತದೆ. ಇದರ ಮೇಲೆ ಒಂದು ಭದ್ರವಾದ ಕೋಟೆಯು ಇದ್ದು ಇಲ್ಲಿಂದ ಸುತ್ತಲಿನ ಪ್ರದೇಶವು ಬಹು ದೂರದವರೆಗೆ ಬಹು ರಮಣೀಯವಾಗಿ ಕಂಗೊಳಿಸುತ್ತದೆ.

ಅಂಡಣ್ಣ ಭೂಪನ ತರುವಾಯ ಅವನ ಮಗ ಮುಂಡಣ್ಣನು, ಆಮೇಲೆ ನರಸಿಂಹನು ರಾಜ್ಯವಾಳಿದರು. ನರಸಿಂಹನು ಬೀಳಗಿ ಅರಸರಲ್ಲಿ ಬಹು ಪ್ರಸಿದ್ಧನು. ಆತನು ವಿಜಯನಗರದ ಕೃಷ್ಣರಾಜನ ಯುದ್ಧಗಳಲ್ಲಿ ತನ್ನ ಶೌರ್ಯ ಪ್ರತಾಪಗಳನ್ನು ಚೆನ್ನಾಗಿ ತೋರಿಸಿದನು. ಇದಕ್ಕೋಸ್ಕರ ಅವನಿಗೆ "ಎಂಟು ದಂಟಿಗೆಯ ಮಲೆತರಿರಾಯ ಮನ್ನೆಯರ ಗಂಡ" ಎಂದು

ಪುಂತಾಗಿ ಬಿರುದುಗಳು ಪ್ರಾಪ್ತವಾದವು. ಈತನು ಗಡಿರಾಜರನ್ನು ಗೆದ್ದು ಗಡಿಯಲ್ಲಿ ಧ್ವಜಸ್ತಂಭವನ್ನು ನಡಿಸಿದನು. ಕೃಷ್ಣರಾಯನು ಈತನ ಪರಾಕ್ರಮಕ್ಕೆ ಮೆಚ್ಚಿ ಈತನಿಗೆ ತನ್ನ ಮಗಳಾದ ಪರಿಯಮ್ಮನನ್ನು ಕೊಟ್ಟು ಲಗ್ನ ಮಾಡಿದನು. ಮತ್ತು ಪೆನಗುಂಡಿಯ ಮೂರು ಲಕ್ಷ ರಾಜ್ಯಕ್ಕೆ ಅಧಿಪತಿಯನ್ನಾಗಿಯೂ ಮಾಡಿದನು.

ನರಸಿಂಹಭೂಪನ ತರುವಾಯ ಘಂಟೇಂದ್ರನು ರಾಜ್ಯವಾಳಹತ್ತಿದನು. ಅವನು ಬೆಟ್ಟದ ಮೇಲಿದ್ದ ರಾಜಧಾನಿಯು ತನಗೆ ಅನನುಕೂಲವಾದದ್ದರಿಂದ ಅದನ್ನು ಬಿಟ್ಟು ಸೋಮನದಿಯ ದಂಡೆಯ ಮೇಲೆ ಇದ್ದ ಬೀಳಗಿಯಲ್ಲಿ ಬಂದು ಅದಕ್ಕೆ ಕೋಟೆ ಕೊತ್ತಲುಗಳನ್ನು ಕಟ್ಟಿಸಿದನು. ಅವನು ಸುತ್ತಲಿನ ಪ್ರದೇಶವನ್ನು ಆಕ್ರಮಿಸಿ ಜಂಡ ಕಣವೆ, ಕುಲುಮೆ, ಕೊಂಡಲಿ, ಮೂಗುಂದರ ಇಲ್ಲಿ ಕೋಟೆಗಳನ್ನು ಕಟ್ಟಿಸಿದನು. ಹೀಗೆ ಬೀಳಗಿ ಅರಸರಲ್ಲಿ ಇವನು ಖ್ಯಾತಿವಂತನಾಗಿ ರಾಜ್ಯವಾಳಿದನು.

ಇವನ ತರುವಾಯ ಇವನ ಮೊಮ್ಮಗನಾದ ವೀರಪ್ಪ ಒಡೆಯರ. ಈತನು ಪ್ರಸಿದ್ಧಿಗೆ ಬಂದನು. ಅವನು ಅತ್ಯಂತ ಧರ್ಮಿಷ್ಠನಾಗಿದ್ದನು. ಅವನ ಹೆಂಡತಿ ವೀರಮಾಂಬೆಯು ಬೀಳಗಿಯಲ್ಲಿ ಅತ್ಯಂತ ಸುಂದರವಾದ ವಿರೂಪಾಕ್ಷ ದೇವಾಲಯವನ್ನು ಕಟ್ಟಿಸಿದಳು.

ವೀರಪ್ಪ ಒಡೆಯರನ ತರುವಾಯ ಅವನ ಮಗ ರಂಗರಾಜನು ಆಳಹತ್ತಿದನು. ಈತನ ಕಾಲದಲಿ ಮುಸಲ್ಮಾನರು ಈ ಪ್ರಾಂತವನ್ನು ಅಭಿಯೋಗಿಸಿದರು. ಆದರೆ ಈ ಗುಡ್ಡಗಾಡು ಪ್ರದೇಶದಲ್ಲಿ ಅವರ ಆಟವೇನೂ ಸಾಗಲಿಲ್ಲ. ರಂಗರಾಜನು ಅವರನ್ನು ಸೋಲಿಸಿ ಹಿಂದಕ್ಕಟ್ಟಿದನು.

ರಂಗರಾಜನ ತರುವಾಯ ಎರಡನೇ ಘಂಟೇಂದ್ರನು ಪಟ್ಟವೇರಿದನು. ೧೫೫೯ರಲ್ಲಿನ ಒಂದು ಶಿಲಾಶಾಸನವು ಬೀಳಗಿಯಲ್ಲಿದ್ದು ಅದು ಈತನದಾಗಿರುತ್ತದೆ. ಬೀಳಗಿ ರಾಜ್ಯಕ್ಕೆ ಹೊಂದಿಯೇ ಗೇರಸೊಪ್ಪೆಯ ಭೈರಾದೇವಿಯ ರಾಜ್ಯವಿತ್ತು. ಈ ಉಭಯ ರಾಜರಲ್ಲಿ ವೈಮನಸ್ಸು ಉಂಟಾಗಲು ಘಂಟೇಂದ್ರನು ಭೈರಾದೇವಿಯನ್ನು ಜಯಿಸಿ ಅವಳನ್ನು ಹಿಂದಕಟ್ಟಿದನು.

ಇವನು ಪೆನುಗೊಂಡೆಯ ರಾಜನಾದ ವೆಂಕಟರಾಯನಿಗೆ ಬಹು ಪ್ರೀತ್ಯಾಸ್ಪದನಾಗಿದ್ದನು. ಮುಂದೆ ವೆಂಕಟರಾಯನಿಗೂ ನಿಜಾಮಶಹನಿಗೂ ಕದನವೆಸಗಲು ಘಂಟನೃಪಾಲನು ೧೨,೦೦೦ ದಂಡಿನೊಂದಿಗೆ ನಿಜಾಮಶಹನೊಂದಿಗೆ ಕಾದಿ ಅವನನ್ನು ಹಿಂದಕ್ಕಟ್ಟಿದನು. ಇದರಿಂದ ಅವನಿಗೆ 'ಗದಿಯಂಥಭೀಮ' ಎಂಬ ಬಿರುದೂ ಕೆಲವು ತೋಪುಗಳಿಗೂ ಪಂಚ ದೀವಟಿಗೆಯ ಮಾನವೂ ಬಂಗಾರದ ಚಮರೀರುಹ ಸಿಂಹಪತಾಕೆಯೂ ಮುಂಗ್ಯ ಮುರಾರಿ ಎಂಬ ಬಿರುದೂ ಬಹುಮಾನವಾಗಿ ಕೊಡಲ್ಪಟ್ಟವು. ಅಲ್ಲದೆ ಪೆನಗೊಂಡೆ ಮತ್ತು ಗುತ್ತಿ ಗಡಿಗಳ ಪರಿಯಂತರ ೯ ಲಕ್ಷ ಆದಾಯದ ಪ್ರಾಂತವು ಇವನಿಗೆ ಉಡುಗೊರೆಯಾಗಿ ಕೊಡಲ್ಪಟ್ಟಿತು. ಆಮೇಲೆ ವೆಂಕಟರಾಯನು ತನ್ನ ಮಗಳಾದ ರಮಾದೇವಿಯನ್ನು ಇವನಿಗೆ ಕೊಟ್ಟು ಲಗ್ನ ಮಾಡಿದನು. ಈತನ ಕಾಲಕ್ಕೆ ಬೀಳಗಿ ರಾಜ್ಯವು ಅತ್ಯಂತ ವೈಭವದ ಸ್ಥಿತಿಯನ್ನು ಹೊಂದಿತು.

ಘಂಟೆಣ್ಣೊಡೆಯರ ಕುಮಾರ ತಿಮ್ಮರಸೊಡೆಯರು ರತ್ನತ್ರಯ ಚೈತ್ಯಾಲಯವನ್ನು ಕಟ್ಟಿಸಿದನು. ಇದು ಸುಂದರವಾದ ದೇವಾಲಯವು. ಅವನ ಮಗ ನರಸಿಂಹಭೂಪಾಲನು ತನ್ನ ಹಿರಿಯರು ಕಟ್ಟಿಸಿದ ಚೈತ್ಯಾಲಯಗಳನ್ನೆಲ್ಲ ಜೀರ್ಣೋದ್ಧಾರ ಮಾಡಿಸಿದನು. ಆತನ ಕುಮಾರ ವೀರೇಂದ್ರನು ತನ್ನ ತಂಗಿ ತಿಮ್ಮಾಂಬೆಯು ಕಟ್ಟಿಸಿದ ಚಂದ್ರಪ್ರಭ ತೀರ್ಥಂಕರ ಬಸದಿಗೆ ಭೂಮಿಯನ್ನು ಕೊಟ್ಟನು.

ಮೇಲ್ಕಂಡ ಶಾಸನಗಳಿಂದ ಬೀಳಗಿಯ ಪೂರ್ವದ ರಾಜರು ಜೈನ ಮತಾವಲಂಬಿಗಳಾಗಿದ್ದುದು ತಿಳಿದುಬರುತ್ತದೆ. ಆದರೆ ಮುಂದೆ ಇವರು ವಿಜಯನಗರದ ರಾಜರ ಕಾಲದಲ್ಲಿ ವೈದಿಕ ಮತವನ್ನು ಅವಲಂಬಿಸಿದರು. ಆಗ ಇವರಿಗೂ ವಿಜಯನಗರದ ರಾಜರಿಗೂ ಶರೀರ ಸಂಬಂಧಗಳಾದುವು.

ವಿಜಯನಗರದ ರಾಜರ ಆಳಿಕೆಯಲ್ಲಿ ಮುಖ್ಯವಾಗಿ ೧ನೇ ದೇವರಾಜನ ಕಾಲದಲ್ಲಿ ವೀರಶೈವ ಮತವು ನಾಡಿನಲ್ಲಿ ಪ್ರಬಲವಾಯಿತು. ಆದರಲ್ಲಿ ಅನೇಕ ವಿದ್ವಾಂಸರು ಉಗಮಿಸಿ ಮಹತ್ವದ ಗ್ರಂಥಗಳನ್ನು ಬರೆದರು.

ಆಗ ಕೆಳದಿ, ಹಾಗಲವಾಡಿ, ಕೊಡಗು, ಮೈಸೂರು ಅಲ್ಲಿಯ ರಾಜರೂ ವಿಜಾಪುರ ರಾಜ್ಯದಲ್ಲಿಯ ಅನೇಕ ಪಾಳ್ಯಗಾರರೂ ವೀರಶೈವ ಮತವನ್ನು ಪಾಲಿಸಹತ್ತಿದರು. ಇದರ ಪರಿಣಾಮವು ಬೀಳಗಿ, ಸ್ವಾದಿ ರಾಜರ ಮೇಲೂ ಆಗಿ ಅವರು ವೀರಶೈವ ಧರ್ಮಾನುಯಾಯಿಗಳಾದರು.

೨ನೇ ಘಂಟೇಂದ್ರನ ತರುವಾಯ ಅವನ ಮಗ ತಮ್ಮರಸ ಒಡೆಯರು ಅವನ ತರುವಾಯ ೩ನೇ ಘಂಟೇಂದ್ರನು, ಆಮೇಲೆ ಮೌನ ಘಂಟೇಂದ್ರನು ರಾಜ್ಯವಾಳಿದನು. ಮೌನಘಂಟೇಂದ್ರನ ಕಾಲದಲ್ಲಿ ಕೆಳದಿಯ ಶಿವಪ್ಪನಾಯಕನು ಬೀಳಗಿ ರಾಜ್ಯವನ್ನು ಅಭಿಯೋಗಿಸಿದನು. ಆಗ ಅವನ ಮಗಳು ಘಂಟೆಮ್ಮನು ಶಿವಪ್ಪನಾಯಕನಿಗೆ ಶರಣುಹೋಗಲು ನಿರಾಕರಿಸಿ ಬಾಳುಗೋಡೆ ಎಂಬಲ್ಲಿ ನಿಂತುಕೊಂಡು ಇಕ್ಕೇರಿ ರಾಜ್ಯದ ಬಲಾಢ್ಯ ಸೇನೆಯನ್ನು ವಿಧಿದೇವತೆಯಂತೆ ಅತ್ಯಂತ ಶೂರತನದಿಂದ ಪ್ರತಿಭಟಿಸಿದಳು. ಇವಳ ಸಾಹಸದ ಮೂಲಕ ಬೀಳಗಿ ರಾಜ್ಯವು ಉಳಿಯಿತು. ಕರ್ನಾಟಕ ಶೂರ ಸ್ತ್ರೀಯರಲ್ಲಿ ಘಂಟೆಮ್ಮನು ಒಬ್ಬಳಾಗಿದ್ದಾಳೆ.

ಆದರೆ ಮುಂದೆ ಕೆಲವು ವರ್ಷಗಳಲ್ಲಿ ಮೈಸೂರಿನಲ್ಲಿ ಹೈದರ ಅಲ್ಲಿ, ಟೀಪುಸುಲ್ತಾನ, ಇವರು ಆಳಹತ್ತಿದರು. ಅವರು ಸುತ್ತಲಿನ ಪ್ರದೇಶಗಳನ್ನು ಅಭಿಯೋಗಿಸುತ್ತ ನಡೆದರು. ೧೭೬೩ರಲ್ಲಿ ಹೈದರಲ್ಲಿಯು ಬಿದನೂರು ರಾಜ್ಯವನ್ನು ಸೆಳೆದುಕೊಂಡನು. ಮುಂದೆ ಬೀಳಗಿ ರಾಜ್ಯವೂ ಟೀಪುವಿನ ರಾಜ್ಯದಲ್ಲಿ ಸೇರಿಸಲ್ಪಟ್ಟಿತು. ಸ್ವಾದಿಯ ರಾಜನು ಟೀಪುವಿನ ಉಪಟಳಕ್ಕಾಗಿ ತನ್ನ ದೇಶವನ್ನು ಬಿಟ್ಟು ಹೋಗಿ ಪೋರ್ತುಗೀಜರ ಆಶ್ರಯವನ್ನು ಹೊಂದಿದನು.

ಮುಂದೆ ೧೭೯೯ರಲ್ಲಿ ಟೀಪುವು ಶ್ರೀರಂಗಪಟ್ಟಣದ ಮುತ್ತಿಗೆಯಲ್ಲಿ ಮರಣಹೊಂದಿದನು. ಆಗ ಇಂಗ್ಲೀಷ, ನಿಜಾಮ ಮತ್ತು ಪೇಶ್ವೆ ಇವರು ಅವನ ರಾಜ್ಯವನ್ನು ಹಂಚಿಕೊಂಡರು. ಕಾರವಾರ ಜಿಲ್ಹೆಯು ಮದ್ರಾಸಾಧಿಪತ್ಯಕ್ಕೆ ಸೇರಿಸಲ್ಪಟ್ಟಿತು. ಅಂದಿನಿಂದ ಬೀಳಗಿಯು ಇಂಗ್ಲೀಷರ ಅಧಿಪತ್ಯಕ್ಕೆ ಬಂದಿತು. ಆದರೆ ಆ ಬೀಳಗಿಯ ಆಗಿನ ರಾಜನಾಗಿದ್ದ ಶಾಂತವೀರರಾಜನು ಇಂಗ್ಲೀಷರಿಗೆ ಕೇಳಿಕೊಂಡಿದ್ದರ ಮೇಲೆ ಅವರು ಅವನ ಜೀವ

ನಕ್ಕೆ ಕೆಲವು ಗ್ರಾಮಗಳ ಕಾಣಿಕೆಯನ್ನೂ ವಿಶ್ರಾಂತಿ ಧನವನ್ನೂ ಕೊಡುತ್ತ ಬಂದರು. ಆದರ ಮೇರೆಗೆ ಅವನ ವಂಶಜರು ಈವರೆಗೆ ಉಪಜೀವಿಸುತ್ತ ಬಂದಿದ್ದಾರೆ.

ನಾನು ಈವರೆಗೆ ಬೀಳಗಿ ಸಂಸ್ಥಾನದಲ್ಲಿಯ ಮಹತ್ವದ ರಾಜರ ಚರಿತ್ರೆಗಳನ್ನು ಬಹು ಸಂಕ್ಷಿಪ್ತವಾಗಿ ವಿವರಿಸಿದೆನು. ಇವರು ರಾಜಕೀಯ ಕ್ಷೇತ್ರದಲ್ಲಿಯಂತೆಯೇ ಸಂಸ್ಕೃತಿಯ ಬೆಳವಣಿಗೆಗೂ ಸಹಾಯ ಮಾಡಿದ್ದಾರೆ. ಇವರು ಆರಂಭದಲ್ಲಿ ಜೈನ ಸಂಸ್ಕೃತಿಯನ್ನು ಪಾಲಿಸುವವರಾಗಿದ್ದರು. ಚಂದ್ರಪ್ರಭ ಪುರಾಣವನ್ನು ರಚಿಸಿದವನು ಅಗ್ಗಳನು. ಅವನು ಬಾಗೇವಾಡಿಗೆ ಸಮೀಪವಿರುವ ಇಂಗುಳೇಶ್ವರದವನು. ಆದರೆ ೧೨ನೇ ಶತಮಾನದ ಕಡೆಯ ಭಾಗದಲ್ಲಿ ಈ ಪ್ರದೇಶದಲ್ಲಿ ಶಿವಶರಣರ ವಿಚಾರಗಳು ಪ್ರಬಲವಾದವು. ಆಗ ಇಲ್ಲಿ ವಾಸವಾಗಿದ್ದ ಬಹುಜನ ಜೈನರು ಇಂಗುಳೇಶ್ವರ ಪ್ರದೇಶವನ್ನು ಬಿಟ್ಟು ಭಟಕಳ, ಸಂಗೀತಪುರ, ಬೀಳಗಿ, ಸ್ವಾದಿ ಈ ಸ್ಥಾನಗಳಲ್ಲಿ ಬಂದು ವಾಸ ಮಾಡಹತ್ತಿದರು. ಇದೇ ಕಾಲಕ್ಕೆ ಅಗ್ಗಳನ ಅನುಯಾಯಿಗಳು ಬೀಳಗಿ ಭಾಗಕ್ಕೆ ಬಂದು ವಾಸಮಾಡಹತ್ತಿರಬೇಕು. ಭಟ್ಟಾಕಳಂಕನು ತನ್ನ ವಂಶದ ವಿವರಣೆಯನ್ನು ಕೊಟ್ಟಿದ್ದು ಅದು ಅಗ್ಗಳನ ವಂಶದ ವಿವರಣೆಗೆ ಕೂಡುತ್ತದೆ, ಬೀಳಗಿಯಲ್ಲಿಯ ಒಂದು ಶಿಲಾಶಾಸನವನ್ನು ಈ ಭಟ್ಟಾಕಳಂಕನು ಬರೆದದ್ದರ ಉಲ್ಲೇಖವು ಅದರಲ್ಲಿಯೇ ಇದೆ. ಈತನು ತನ್ನ ಶಬ್ದಾನುಶಾಸನವನ್ನು ಬರೆದು ಮುಗಿಸಿದ್ದು ಬೀಳಗಿಯಲ್ಲಿಯೇ ಇದೆ. ಈ ಗ್ರಾಮದಲ್ಲಿ ದೊರೆಯುವ ಒಂದು ಶಾಸನದಲ್ಲಿ ಕೆಳಗೆ ಬರೆದಂತೆ ಉಲ್ಲೇಖಿಸಿದೆ. "ರತ್ನತ್ರಯ ಚೈತ್ಯಾಲಯಕ್ಕೆ ತನ್ನ ವಂಶ ಪರಂಪರೆಯ ಪರಮ ಗುರುಗಳಾದ ಸ್ವಸ್ತಿ ಶ್ರೀ ಮದ್ರಾಜಗುರು ಗುರು ಮಂಡಲಾಚಾರ್ಯ ಮಹಾವಾದಿ ವಾದೀಶ್ವರರಾಯ ವಾದಿಪಿತಾಮಹ ಸಕಲ ವಿದ್ವಜ್ಜನ ಚಕ್ರವರ್ತಿಗಳು...... ಶ್ರೀಮಾನ್ ಭಟ್ಟಾಕಲಂಕ ದೇವರುಗಳ ಉಪದೇಶದಿಂದ ರಂಗಮಂಟಪ, ಮುನಿವಾಸ, ಚಂದ್ರಸಾಲೆಯ ಮೊದಲಾದ ಕೆಲಸಗಳನ್ನು ಶಿಲಾಮಯವಾಗಿ ಗೆಯಿಸಿ ಸಂಪೂರ್ಣ ಮಾಡಿ" ಎಂದಿದೆ. ಈ ಕಲಂಕ ಮಹಾಮುನಿಗಳು ಕನ್ನಡದಲ್ಲಿ ತಮ್ಮ ವಿದ್ವತ್ತೆಗೋಸ್ಕರ ಬಹಳ ಪ್ರಸಿದ್ಧರಾಗಿದ್ದಾರೆ.

ಭಟ್ಟಾಕಲಂಕನು ಕರ್ನಾಟಕ ಶಬ್ದಾನುಶಾಸನವನ್ನು ರಚಿಸಿದ್ದಾನೆ. ಇದು ಕನ್ನಡದ ಒಂದು ಶ್ರೇಷ್ಠ ವ್ಯಾಕರಣ ಗ್ರಂಥವು. ಇದು ಸೂತ್ರ ಬದ್ಧವಾದದ್ದು. ಇದಕ್ಕೆ ಭಾವಮಂಜರಿ ಎಂಬ ವೃತ್ತಿಯೂ ಮಂಜರೀ ಮಕರಂದವೆಂಬ ವ್ಯಾಖ್ಯಾನವೂ ಇವೆ. ಸೂತ್ರ, ವೃತ್ತಿ, ವ್ಯಾಖ್ಯಾನ ಈ ಮೂರೂ ಸಂಸ್ಕೃತ ಭಾಷೆಯಲ್ಲಿ ಬರೆದಿವೆ, ಪುರಾತನ ಕಾವ್ಯಗಳಿಂದ ಅನೇಕ ಉದಾಹರಣೆಗಳನ್ನು ಗ್ರಂಥಕಾರನು ತೆಗೆದುಕೊಂಡಿದ್ದಾನೆ. ಇದು ನಾಗ ವರ್ಮನ ಗ್ರಂಥಕ್ಕಿಂತಲೂ ವಿಸ್ತಾರವಾಗಿಯೂ, ಪ್ರೌಢ ವ್ಯಾಖ್ಯಾನ ಸಮೇತವಾಗಿಯೂ ಇರುತ್ತದೆ. ಶಬ್ದಮಣಿದರ್ಪಣಕ್ಕಿಂತಲೂ ಹೆಚ್ಚು ವಿಷಯಗಳನ್ನು ಒಳಗೊಂಡಿಗೆ. ಹೀಗೆ ಇದು ಕನ್ನಡದ ಒಂದು ಅತ್ಯುತ್ತಮ ವ್ಯಾಕರಣ ಗ್ರಂಥವಾಗಿದೆ. ಈ ಗ್ರಂಥವು ೧೬೦೪ರಲ್ಲಿ ಬರೆದಂತೆ ಇದರಲ್ಲಿ ಉಲ್ಲೇಖವಿದೆ.

ಬೀಳಗಿ ಪಟ್ಟಣದಲ್ಲಿ ಒಂದು ಕಾಲದಲ್ಲಿ ೩೦ ಸಾವಿರ ಜನರು ವಾಸ ವಾಗಿದ್ದರು. ಈ ಪ್ರದೇಶದಲ್ಲಿ ಹುಟ್ಟುತ್ತಿದ್ದ ಮೆಣಸು ಪರದೇಶಗಳಿಗೆ ಹೇರಳವಾಗಿ ಕಳಿಸಿಕೊಡಲ್ಪಡುತ್ತಿತ್ತು. ಈ ಭಾಗದಲ್ಲಿ ನಾನಾ ತರಹದ ಕೈಗಾರಿಕೆಗಳೂ ವ್ಯಾಪಾರೋದ್ಯೋಗಗಳೂ ದೊಡ್ಡ ಪ್ರಮಾಣದಿಂದ ನಡೆ ಯುತ್ತ ಇದ್ದವು. ಆದರೆ ಕಾಲ ಪರಿಸ್ಥಿತಿಯು ಬದಲಾದದ್ದರಿಂದ ಈ ವ್ಯವ ಸಾಯಗಳು ಸಾಂಪ್ರತ ಕಾಲದಲ್ಲಿ ನಿಂತುಹೋಗಿವೆ. ಕಾರವಾರ ಜಿಲ್ಹೆಯ ಮಹತ್ವವೇ ಈಗ ಹೊರಟುಹೋಗಿರುತ್ತದೆ. ಹೀಗೆ ಬೀಳಗಿ ಸಂಸ್ಥಾನದ ಸಂಕ್ಷಿಪ್ತ ಇತಿಹಾಸವಿದೆ.

(ಶಿವಾನುಭವ ಸಂಪುಟ ೨೯ ಸಂಚಿಕೆ ೯೦ದ)

# ಮಲ್ಲವ್ವಾ ಬಾಯಿ ದೇಸಾಯಿಣಿ-ಬೆಳವಡಿ

ಶಿವಾಜಿಮಹಾರಾಜರೊಡನೆ ಬಹು ಶೂರತನದಿಂದ ಯುದ್ಧಮಾಡಿದ ಮಲ್ಲವ್ವಾಬಾಯಿಯ ಹೆಸರು ನಮ್ಮ ಕರ್ನಾಟಕದಲ್ಲಿ ಬಹು ಜನರಿಗೆ ಗೊತ್ತಿದ್ದಂತೆ ಕಂಡು ಬರುವದಿಲ್ಲ. ಇದಕ್ಕೆ ನಮ್ಮ ಕರ್ನಾಟಕ ದೇಶದ ಇತಿಹಾಸದ ಅಜ್ಞಾನವೇ ಕಾರಣವಾಗಿದೆ. ಈ ವೀರ ಸ್ತ್ರೀಯಳ ಚರಿತ್ರೆಯನ್ನು ಈಗ ಉಪಲಬ್ಧವಿದ್ದಷ್ಟರ ಮಟ್ಟಿಗೆ ನಾನು ಇಲ್ಲಿ ವಿವರಿಸಲಿಕ್ಕೆ ಯತ್ನಿಸಿದ್ದೇನೆ.

ಮಲ್ಲವ್ವಾಬಾಯಿಯ ವೃತ್ತಾಂತವು. (೧) ಶಿವಛತ್ರಪತೀಚೆ ಚರಿತ್ರೆ ಸಭಾಸದ (೨) ಶಿವಾಜೀ ಬಖರ--ಚಿತ್ರಗುಪ್ತ (೩) ಶಿವದಿಗ್ವಿಜಯ (೪) ಮರಾಠೀ ದಫ್ತರ (೫) ತಾರೀಖ—ಈ ಶಿವಾಜಿ, ಈ ಹಳೇ ಕಾಲದ ಗ್ರಂಥಗಳಲ್ಲಿಯೂ, (೧) ಪ್ರಭುರತ್ನಮಾಲಾ (೨) ರಿಯಾಸತ–ಸರದೇಸಾಯಿ (೩) ಶಿವ ಚರಿತ್ರೆ—ಕೇಳೂಸಕರ, ಈ ಆಧುನಿಕ ಇತಿಹಾಸಜ್ಞರ ಗ್ರಂಥಗಳಲ್ಲಿಯೂ, ಮತ್ತು (೧) ಗ್ರಾಂಟ್‌ಡಫ್ (೨) ಕಿಂಕೇಡ (೩) ಜದುನಾಥ ಸರಕಾರ ಈ ಪ್ರಸಿದ್ಧ ಇತಿಹಾಸ ಸಂಶೋಧಕರ ಇಂಗ್ಲೀಷ್ ಗ್ರಂಥಗಳಲ್ಲಿಯೂ ಖಂಡಶ: ಸಿಗುತ್ತದೆ.

ಮೇಲ್ಕಂಡ ಈ ಎಲ್ಲ ಗ್ರಂಥಕಾರರು ಶಿವಾಜಿ ಮಹಾರಾಜರೊಡನೆ ೨೭ ದಿವಸಗಳವರೆಗೆ ಅತಿ ಶೂರತನದಿಂದ ಕಾಳಗವಾಡಿದ ಈ ವೀರಸ್ತ್ರೀಯಳ ಪರಾಕ್ರಮವನ್ನು ಬಹಳವಾಗಿ ಹೊಗಳಿದ್ದಾರೆ. ಆಕೆಯು ಈ ವೇಳೆಯಲ್ಲಿ ತೋರಿಸಿದ ಶೌರ್ಯವು ಯಾರನ್ನಾದರೂ ಆಶ್ಚರ್ಯಗೊಳಿಸುವಂಥಾದ್ದಾಗಿದೆ. ಆದ್ದರಿಂದ ಈ ಸ್ತ್ರೀಯಳು ಯಾರೆಂಬುದನ್ನು ಗೊತ್ತುಹಚ್ಚುವ ಕುತೂಹಲವು ಈಗ ಮಹಾರಾಷ್ಟ್ರಪ್ರದೇಶದಲ್ಲಿ ಉತ್ಪನ್ನವಾಗಿ, ಅಲ್ಲಿಯ ಜನರು ಈಕೆಯು ಒಬ್ಬ ಮಹಾರಾಷ್ಟ್ರೀಯಳೆಂದು ತೋರಿಸಲು ಯತ್ನಿಸುತ್ತಿರುವರು. ಪ್ರಭುರತ್ನ ಮಾಲಾಕಾರರು ಈಕೆಯು ಬೇಳವಡಿಯ

ಲ್ಲಿಯ ಒಬ್ಬ ಕಾಯಸ್ಥ ಸ್ತ್ರೀಯಳೆಂದು ಬರೆದಿದ್ದಾರೆ. ಮತ್ತೊಬ್ಬ ಲೇಖಕರು ಜ್ಞಾನ ಪ್ರಕಾಶದ ೮-೧೩-೧೯೧೮ನೆ ಇಸ್ವಿಯ ಸಂಚಿಕೆಯಲ್ಲಿ ಈಕೆಯು ಒಬ್ಬ ಚಿತಪಾವನ ಬ್ರಾಹ್ಮಣ ವೀರಾಂಗನೆ ಎಂದು ಕಾಣಿಸಿದ್ದಾರೆ. ಈ ಮಲ್ಲಮ್ಮಾಬಾಯಿಯು ಮಹಾರಾಷ್ಟ್ರ ಸ್ತ್ರೀಯಳಾಗಿರದೆ ಒಬ್ಬ ಕರ್ನಾಟಕಸ್ಥಳೇ ಆಗಿದ್ದಾಳೆ. ಈಕೆಯು ಬೆಳಗಾವ ಜಿಲ್ಲೆಯ ಪೈಕಿ ಸಂಪಗಾವ ತಾಲೂಕಿನಲ್ಲಿರುವ ಬೇಳವಡಿ ದೇಸಗತಿಯ ಮನೆತನದವಳು ಮತ್ತು ಒಬ್ಬ ವೀರಶೈವಳು. ಈ ಸಂಗತಿಯನ್ನು ಭಾರತ ಸಂಶೋಧಕ ಮಂಡಳಿಯ ಸೆಕ್ರೆಟರಿಗಳಾದ ಕೈ. ವಾ. ಪಟವರ್ಧನ ಇವರು ಕೇಸರೀ ಪತ್ರದ ೩ನೇ ಡಿಸೆಂಬರ ೧೯೧೮ನೇ ಇಸ್ವಿಯ ಸಂಚಿಕೆಯಲ್ಲಿ ಪ್ರಸಿದ್ಧಿಸಿರುವ ತಮ್ಮ ಲೇಖನದಲ್ಲಿ ಒಪ್ಪಿಕೊಂಡಿದ್ದಾರೆ.

ಈ ಸ್ತ್ರೀಯಳ ಪರಾಕ್ರಮದ ವರ್ಣನೆಯು ಶಿವದ್ವಿಗಿಜಯ, ಪ್ರಭಾರತ್ನಮಾಲಾ, ರಿಯಾಸತ ಮತ್ತು ಜದುನಾಥ ಸರಕಾರ ಇವರ ಲೇಖಗಳಲ್ಲಿ ವಿಶೇಷವಾಗಿ ಕಂಡು ಬರುತ್ತದೆ. ಇವುಗಳ ಆಧಾರದಿಂದ ಕೆಳಗಿನ ಸಂಗತಿಗಳನ್ನು ವಿವರಿಸಿದ್ದೇನೆ.

ಶಿವಾಜಿಮಹಾರಾಜನು ರಾಯಗಡದಲ್ಲಿ ರಾಜ್ಯಾಭಿಷಿಕ್ತನಾದ ಬಳಿಕ ಸನ್ ೧೬೭೬ನೇ ಇಸ್ವಿಯ ಅಂತ್ಯಭಾಗದಲ್ಲಿ ತಂಜಾವರ ಪ್ರಾಂತದ ಕಡೆಗೆ ದಿಗ್ವಿಜಯಕ್ಕಾಗಿ ಹೊರಟಿದ್ದು ಇತಿಹಾಸ ಪ್ರಸಿದ್ಧವೇ ಇರುತ್ತದೆ. ಈ ವೇಳೆಯಲ್ಲಿ ಅವನು ೩೦ ಸಹಸ್ರ ರಾವುತರನ್ನೂ ೪೦ ಸಹಸ್ರ ಕಾಲ್ದಳವನ್ನೂ ಸಿದ್ಧಪಡಿಸಿಕೊಂಡು ಮೊದಲಿಗೆ ಗೋವಳಕೊಂಡ ಸೀಮೆಯನ್ನು ನುಗ್ಗಿದನು. ಆ ಮೇಲೆ ಸನ್ ೧೬೭೭ನೇ ಮಾರ್ಚ ತಿಂಗಳಿನಲ್ಲಿ ಕಡಪಾ, ಕರ್ನೂಲಗಳ ನೆರೆಯಲ್ಲಿ ಹಾಯ್ದು ಶ್ರೀಶೈಲ ಮಲ್ಲಿಕಾರ್ಜುನನ ದರ್ಶನವನ್ನು ತೆಗೆದುಕೊಂಡು, ಪಯಣಗಟ್ಟದ ಮಾರ್ಗವಾಗಿ ದ್ರಾವಿಡ ದೇಶವನ್ನು ಸೇರಿ ಜಿಂಜೀ, ವೆಲ್ಲೂರ, ಆರಣೀ ಕೋಟೆಗಳನ್ನು ಹಿಡಿದುಕೊಂಡನು. ಆ ಮೇಲೆ ತನ್ನ ತಮ್ಮನಾದ ವೆಂಕೋಜಿಯನ್ನು ಹಣ್ಣಿಗೆ ತಂದು, ನೊವ್ಹೆಂಬರ ತಿಂಗಳಿನ ಸುಮಾರಕ್ಕೆ ತನ್ನ ತಂದೆಯ ಜಹಾಗೀರುಗಳಾದ ಕೋಲಾರ, ಬೆಂಗಳೂರ, ಹೊಸಕೋಟೆ, ಬಳ್ಳಾಪೂರ, ಸೀರ್ಯ ಪ್ರಾಂತಗಳನ್ನು ಕೈವಶಮಾಡಿಕೊಂಡು, ಡಿಸೆಂಬರ ತಿಂಗಳಿನಲ್ಲಿ ಉತ್ತರ ದಿಕ್ಕಿನಕಡೆಗೆ ಅಂದರೆ ಸ್ವದೇಶದ ಕಡೆಗೆ ಹೊರಳಿದನು.

ತರುವಾಯ ಅವನು ಬಲು ಭದ್ರವಾದ ಕೊಪ್ಪಳ, ಬಹದೂರ, ಬಂಡಾ ಕೋಟೆಗಳನ್ನು ಹಿಡಿದುಕೊಂಡು, ಪಶ್ಚಿಮಕ್ಕೆ ಒಳಿದು ಧಾರವಾಡ ಜಿಲ್ಲೆಯೊಳಗಿನ ಗದಗ, ಹುಳಗುಂದ, ಲಕ್ಷ್ಮೇಶ್ವರ, ಅಲ್ಲಿಂದ ಬೆಳಗಾವ ಜಿಲ್ಲೆಯಲ್ಲಿಯ ಬೆಳವಡಿ, ತೊರಗಲ್ಲ ಮೇಲಿಂದ ಹಾಯ್ದು ಪನಹಾಳಾ ಮಾರ್ಗವಾಗಿ ತನ್ನ ರಾಜಧಾನಿಯಾದ ರಾಯಗಡಕ್ಕೆ ಹೋದನು. ಅವನ ಈ ದಕ್ಷಿಣ ದಿಗ್ವಿಜಯವು ಶಿವಾಜಿಯ ಇತಿಹಾಸದಲ್ಲೇ ಅತೀವ ಮಹತ್ವದ್ದೆಂದು ಇತಿಹಾಸಕಾರರು ವರ್ಣಿಸಿದ್ದಾರೆ. ಈ ದಿಗ್ವಿಜಯಕ್ಕೆ ಶಿವಾಜಿಗೆ ೧೮ ತಿಂಗಳುಗಳು ಹಿಡಿದವು. ಈ ದೌಡಿನಲ್ಲಿ ಶಿವಾಜಿಯು ಸಂಪಗಾವದಿಂದ ೧೪ ಮೈಲುಗಳ ಮೇಲಿರುವ ಬೆಳವಡಿಯ ಕೋಟೆಯ ಸಮೀಪಕ್ಕೆ ಬಂದಾಗ್ಗೆ ಆತನು ಮಲ್ಲಮ್ಮಾಬಾಯಿಯ ಕೂಡ ಯುದ್ಧ ಮಾಡುವ ಪ್ರಸಂಗವು ಒದಗಿತ್ತು.

ಶಿವಾಜಿಯ ದಂಡು ಬೆಳವಡಿಯ ಸಮೀಪಕ್ಕೆ ಬಂದ ಕೂಡಲೆ, ಅವನ ಸಾಮಾನ ಹೇರುವತೆಗಾರರು ಸುತ್ತಲಿನ ಪ್ರದೇಶವನ್ನು ಸುಲಿಯಲಾರಂಭಿಸಲು, ಅವರಿಗೂ ಕೋಟೆಯವರಿಗೂ ಜಗಳ ಹತ್ತಿತು. ಇದರಲ್ಲಿ ಬೆಳವಡಿಯವರು ಶಿವಾಜಿಯ ಉಗ್ರಾಣದ ಎತ್ತುಗಳನ್ನು ಕಸಿದುಕೊಂಡರೆಂದು ಕೆಲವು ಗ್ರಂಥಕಾರರು ಬರೆದಿದ್ದಾರೆ. ಮತ್ತು ಕೆಲವು ಗ್ರಂಥಕಾರರು ಶಿವಾಜಿಯ ದಂಡಿನವರು ಧಾನ್ಯವನ್ನು ಎತ್ತಲಿಕ್ಕೆ ಹೋದಾಗ್ಗೆ, ಅವರಲ್ಲಿ ಕೆಲವರು ಬೆಳವಡಿಯವರಿಂದ ಕೊಲ್ಲಲ್ಪಟ್ಟರೆಂದು ಉಲ್ಲೇಖಿಸಿದ್ದಾರೆ. ಆದರೆ ಇದರಲ್ಲಿ ನಿಜವಾದ ಅಂಶವು ಏನೇ ಇರಲಿ, ಇಂಥಾದ್ದೊಂದು ನೆವವು ಬೆಳವಡಿಯವರೊಂದಿಗೆ ಕಾಳಗ ಹೂಡಲಿಕ್ಕೆ ಶಿವಾಜಿಗೆ ಸಾಕಾಯಿತೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಕೂಡಲೇ ಅವನು ಬೆಳವಡಿಯ ಕೋಟೆಯನ್ನು ಮುತ್ತಿದನು. ಆ ಕಾಲಕ್ಕೆ ಈಶಪ್ರಭು ಎಂಬುವನು ಬೆಳವಡಿಯ ದೇಸಾಯಿಯಾಗಿದ್ದನು. ಅವನು ಶಿವಾಜಿ ಮಹಾರಾಜನ ಅಪರಿಮಿತ ಸೈನ್ಯವು ತನ್ನ ಕೋಟೆಗೆ ಮುತ್ತಿಗೆ ಹಾಕಿದ್ದನ್ನು ಕಂಡು ಹೆದರಲಿಲ್ಲ. ಅವನು ಒಮ್ಮೆಲೇ ಕೋಟೆಯ ಬಾಗಿಲನ್ನು ಇಕ್ಕಿ ಯುದ್ಧಕ್ಕೆ ಅಣಿಯಾದನು. ಕೆಲವು ದಿವಸಗಳವರೆಗೆ ಮುತ್ತಿಗೆಯು ಹಾಗೆಯೇ ಸಾಗಿತು. ಈ ಕಾಲ

ದಲ್ಲಿ ದಾದಾಜಿ ರಘುನಾಥ ಪ್ರಭು ಮಹಾಡಕರ ಎಂಬುವವನು ಶಿವಾಜಿಯ ದಳಪತಿಯಾಗಿದ್ದನು. ಅವನು ಒಂದು ಕಪಟೋಪಾಯದಿಂದ ಕೋಟೆಯೊಳಗಿನ ಮನೆಗಳಿಗೆ ಒಮ್ಮಿಂದೊಮ್ಮೆಲೇ ಬೆಂಕಿಯನ್ನು ಹಚ್ಚಿಸಿದನು. ಆಗ ಕೋಟೆಯೊಳಗಿನ ದಂಡಾಳುಗಳು ಆ ಬೆಂಕಿಯನ್ನು ನಂದಿಸುವದರಲ್ಲಿ ತೊಡಗಿರುವ ಸಂಧಿಯನ್ನು ಸಾಧಿಸಿ ಶಿವಾಜಿಯ ದಂಡಾಳುಗಳು ಕೋಟೆಗೆ ಲಗ್ಗೆ 'ಏರಿ, ಒಳಗೆ ನುಗ್ಗಿದರು. ಕೂಡಲೇ ಶಿವಾಜಿಯ ದಂಡಾಳುಗಳಿಗೂ ಈಶಪ್ರಭುವಿನ ದಂಡಿಗೂ ಕೈಗೆ ಕೈ ಹತ್ತಿ ಕಾಳಗವೆಸಗಿತು. ಆಗ ಈಶಪ್ರಭುವು ಪೂರಾ ಘಾಯಪಟ್ಟು ಪ್ರಾಣ ಬಿಟ್ಟನು, ಈ ಮೇರೆಗೆ ತಮ್ಮ ಒಡೆಯನು ಮಡಿದದ್ದನ್ನು ಅವನ ದಂಡಾಳುಗಳು ನೋಡಿ, ಧೈರ್ಯಗುಂದಿ ಓಡಿ ಹೋಗುವ ಯೋಜನೆಯಲ್ಲಿದ್ದರು. ಮತ್ತು ಕೋಟೆಯು ಶಿವಾಜಿಯ ಕೈಯಲ್ಲಿ ಎಲ್ಲಿ ಬೀಳುವದೋ ಎಂಬ ಭೀತಿಯು ಉತ್ಪನ್ನವಾಯಿತು. ಇಂಥ ಬಿಕ್ಕಟ್ಟಿನ ಸಮಯದಲ್ಲಿ ಈಶಪ್ರಭುವಿನ ಹೆಂಡತಿಯಾದ ಮಲ್ಲವ್ವಾಬಾಯಿಯು ಅತಿ ಶೀಘ್ರವಾಗಿ ರಣಭೂಮಿಗೆ ಬಂದು, ತನ್ನ ಮಡಿದ ಪತಿಯ ಮಗ್ಗಲಲ್ಲಿ ಬಿದ್ದಿದ್ದ ಖಡ್ಗವನ್ನು ಕೈಯಲ್ಲಿ ತೆಗೆದುಕೊಂಡು ಕುದುರೆಯನ್ನೇರಿ, ಎದೆಯೊಡೆದುಕೊಂಡು ಓಡಿ ಹೋಗುವ ಯೋಜನೆಯಲ್ಲಿದ್ದ ತನ್ನ ದಂಡಾಳುಗಳನ್ನು ಯುದ್ಧಕ್ಕೆ ಹುರಿದುಂಬಿಸಹತ್ತಿದಳು. ಆಗ ಆಕೆಯ ಸೈನಿಕರು ಆಕೆಯ ಈ ಉಬ್ಬಾಳುತನವನ್ನು ನೋಡಿ, ಹುರಿಗೊಂಡು ಶಿವಾಜಿಯೊಡನೆ ಯುದ್ಧಕ್ಕೆ ಸಿದ್ಧರಾದರು. ಆ ಮೇಲೆ ಕೋಟೆಯಲ್ಲಿ ಎರಡು ಪ್ರಹರುಗಳವರೆಗೆ ಕಾಳಗವು ನಡೆಯಿತೆಂದು ಬಖರುಗಳಲ್ಲಿ ಬರೆಯಲ್ಪಟ್ಟಿದೆ. ಈ ವೇಳೆಯಲ್ಲಿ ಮಲ್ಲವ್ವಾಬಾಯಿಯು ಶತ್ರುಗಳೊಡನೆ ಕಾದಾಡಿ ಕಟ್ಟಕಡೆಗೆ ಅವರನ್ನು ಕೋಟೆಯ ಹೊರಗೆ ಅಟ್ಟಿ ಬಿಟ್ಟಳು.

ಈ ಮೇರೆಗೆ ಒಬ್ಬ ಸ್ತ್ರೀಯಳಿಂದ ಸೋಲಿಸಲ್ಪಟ್ಟದ್ದಕ್ಕೆ ಶಿವಾಜಿಯ ಮನಸ್ಸಿಗೆ ಬಹಳ ಹತ್ತಿತು. ಈ ದಕ್ಷಿಣ ದಿಗ್ವಿಜಯದಲ್ಲಿ ವಿಶೇಷ ಕೀರ್ತಿಗೊಂಡಿದ್ದ ಆತನು ಈ ಕೋಟೆಯನ್ನು ಹಾಗೆಯೇ ಬಿಟ್ಟುಹೋಗುವದು ಅವನ ಜೀವದ ಸುತ್ತ ಬಂದಿತು. ಆದ್ದರಿಂದ ಆತನು ಈ ಮುತ್ತಿಗೆಯನ್ನು ಮತ್ತಿಷ್ಟು ಬಿಗಿಯಾಗಿ ಸಾಗಿಸಿದನು. ಕೋಟೆಯ ಸುತ್ತಲೂ ತನ್ನ ದಂಡಾ

ಳುಗಳ ಆಶ್ರಯಕ್ಕೆ ಅಲ್ಲಲ್ಲಿ ಕಂದಕಗಳನ್ನು ಅಗಿಸಿದನು. ಮತ್ತು ಅವುಗಳ ಮರೆಯಿಂದ ಮೇಲಿಂದ ಮೇಲೆ ಕೋಟೆಯನ್ನು ಲಗ್ಗೆ ಏರಲು ಯತ್ನಿಸಿದನು. ಆದರೆ ಅವೆಲ್ಲವೂಗಳೂ ನಿಷ್ಫಲವಾದವು.

ಶಿವಾಜಿಯು ದಕ್ಷಿಣ ದೇಶದ ದಿಗ್ವಿಜಯದಲ್ಲಿ ಜಿಂಜೀ, ವೆಲ್ಲೂರು ಇವುಗಳಂಥ ಅನೇಕ ಭದ್ರವಾದ ಕೋಟೆಗಳನ್ನು ಸಾಧಿಸಿಕೊಂಡಿದ್ದರೂ ಇಷ್ಟು ತೊಂದರೆಯನ್ನು ಆತನಿಗೆ ಯಾರೂ ಕೊಟ್ಟಿದ್ದಿಲ್ಲ. ಒಂದು ಸಣ್ಣ ಕೋಟೆಯ ಮುಂದೆ ಅವನು ತನ್ನ ಅಸಂಖ್ಯ ಸೇನೆಯೊಡನೆ ಒಬ್ಬ ಸ್ತ್ರೀಯಳೊಂದಿಗೆ ಇಷ್ಟು ದಿವಸಗಳವರೆಗೆ ನಿಷ್ಫಲವಾಗಿ ಹೋರಾಡುತ್ತಿರುವದನ್ನು ನೋಡಿ ಇಡೀ ದೇಶವೆಲ್ಲ ಬೆರಗಾಯಿತು. ಮತ್ತು ಜನರು ಅವನ ಅವಹೇಳನೆ ಮಾಡತೊಡಗಿದರು. ಈ ಸಂಗತಿಯು, ರಾಜಾಪುರದಲ್ಲಿಯ ಒಬ್ಬ ಇಂಗ್ಲಿಷ್ ವರ್ತಕನು ತಾ. ೨೮-೨,೧೬೭೮ನೇ ಇಸ್ವಿಯ ದಿವಸ ಬರೆದ ಒಂದು ಪತ್ರದಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ಅವನು ಅದರಲ್ಲಿ ಬರೆದಿರುವದೇನಂದರೆ :—

"He is at present besieging a fort, where by relation of their own people come from him, has suffered more disgrace than ever he did from all the powers of the Moghal or the Deccanies ( ijapuries) and he who hath conquered so many kingdoms is not able to reduce this woman Desi." (ಮಾಡರ್ನರಿವ್ಹ್ಯೂ ೧೯೧೮ ನವ್ಹೆಂಬರ ಸಂಚಿಕೆ)

"ಈಗ ಆತನು (ಶಿವಾಜಿಯು) ಒಂದು ಕೋಟೆಯನ್ನು ಮುತ್ತಿದ್ದಾನೆ. ಮೊಗಲ ಅಥವಾ ವಿಜಾಪುರ ಬಾದಶಹರ ದಂಡಾಳುಗಳ ಕೈಯಲ್ಲಿ ಆತನು ಎಷ್ಟು ಅವಮಾನವನ್ನು ಹೊಂದಿದ್ದನೋ ಅದಕ್ಕೂ ಹೆಚ್ಚಿನ ಅವಮಾನವನ್ನು ತನಗೆ ಸಂಬಂಧ ಪಟ್ಟ ಜನರಲ್ಲಿಯೇ ಈಗ ಹೊಂದಿರುವನು. ಮತ್ತು ಯಾವ ಮನುಷ್ಯನು ಅನೇಕ ರಾಜ್ಯಗಳನ್ನು ಗೆದ್ದನೋ

ಅಂಥವನು ಈ ಒಬ್ಬ ಸ್ತ್ರೀಯಳಾದ ದೇಸಾಯಣಿಯನ್ನು ಗೆಲ್ಲಲಿಕ್ಕೆ ಅಸಮರ್ಥನಾಗಿದ್ದಾನೆ."

ಈ ಮುತ್ತಿಗೆಯು ಬಿಟ್ಟೂ ಬಿಡದೆ ೨೭ ದಿವಸಗಳ ವರೆಗೆ ನಡೆಯಿತು. ಆದರೆ ೨೭ ದಿವಸಗಳ ತರುವಾಯ ಕೋಟೆಯಲ್ಲಿಯ ಸಾಮಗ್ರಿಗಳು ತೀರಿ ಹೋದವು. ಮಲ್ಲವ್ವಾಬಾಯಿಯ ದಂಡಾಳುಗಳು ಉಪವಾಸಬೀಳುವ ಪೊತ್ತು ಬಂದೊದಗಿತು. ಆಕೆಯ ಮದ್ದು ಗುಂಡುಗಳಾದರೂ ತೀರಿದವು. ಆದ್ದರಿಂದ ಮಲ್ಲವ್ವಾಬಾಯಿಗೆ ತನ್ನ ಕೋಟೆಯನ್ನು ಇನ್ನು ಮುಂದೆ ಕಾಪಾಡಿಕೊಳ್ಳುವದು ಅಸಾಧ್ಯವೆಂದು ಅನಿಸಹತ್ತಿತು. ಆದರೂ ಆಕೆಯು ಎದೆಗುಂದಲಿಲ್ಲ. ಇಂಥ ಸಮಯದಲ್ಲಿ ಮತ್ತೊಬ್ಬ ಅಳ್ಳೆದೆಯ ಸೇನಾನಾಯಕನು ಆಕೆಯ ಸ್ಥಳದಲ್ಲಿದ್ದರೆ, ಅವನು ಕೋಟೆಯನ್ನು ಶಿವಾಜಿಗೆ ಒಪ್ಪಿಸಿ ಶರಣು ಹೋಗುತ್ತಿದ್ದನು. ಇಲ್ಲವೆ ತನ್ನ ಜೀವವನ್ನು ಉಳಿಸಿಕೊಳ್ಳುವದಕ್ಕಾಗಿ ಪಲಾಯನ ಮಾಡುತ್ತಿದ್ದನು. ಆದರೆ ಮಲ್ಲವ್ವಾಬಾಯಿಯು ಹಾಗೆ ಮಾಡಲಿಲ್ಲ. ಆ ಶೂರ ಸ್ತ್ರೀಯಳು ಆಗ ಮಾಡಿದ ಪರಾಕ್ರಮದ ಸಂಗತಿಯು ತಾರೀಖು—ಈ ಶಿವಾಜಿ ಎಂಬ ಗ್ರಂಥದಲ್ಲಿ ಕೆಳಗೆ ಬರೆದ ಮೇರೆಗೆ ವಿವರಿಸಲ್ಪಟ್ಟಿದೆ ಏನಂದರೆ :- "ಅವಳು ತನ್ನ ದಂಡಾಳುಗಳನ್ನು ಕೂಡಿಕೊಂಡು ಕೋಟೆಯ ಬಾಗಿಲುಗಳನ್ನು ತೆರೆದು ಅತಿಧೈರ್ಯದಿಂದ ಹೊರಬಿದ್ದು ಹೋಗಿ, ಶಿವಾಜಿಯ ಸೇನಾಸಮುದ್ರದ ಮೇಲೆ ಫಕ್ಕನೆ ಎರಗಿದಳು. ಆಗ ಆಕೆಯು ಮುತ್ತಿಗೆಗೋಸ್ಕರ ಶಿವಾಜಿಯು ನಿರ್ಮಿಸಿದ್ದ ಕಟ್ಟಡಗಳನ್ನೆಲ್ಲ ಕೆಡವಿ, ತನ್ನನ್ನು ಎದುರಿಸಿದವರನ್ನು ಓಮ್ಮೆಟ್ಟಿಸಿದಳು. ಮತ್ತು ಮುತ್ತಿಗೆ ಹಾಕಿದವರಲ್ಲಿ ಬಹು ಜನರನ್ನು ಕೊಂದಳು. ಹೀಗೆ ಇಡೀ ದಿವಸ ಆಕೆಯು ಅತ್ಯಂತ ಶೌರ್ಯದಿಂದ ರಣಭೂಮಿಯಲ್ಲಿ ಯುದ್ಧ ಮಾಡಿದಳು." ಆದರೂ ಶಿವಾಜಿಯು ಆಕೆಯನ್ನು ಸೋಲಿಸಲು ಸಮರ್ಥನಾಗಲಿಲ್ಲ. ಆದರೆ ಶಿವಾಜಿಯ ಅಪರಿಮಿತ ಸೈನ್ಯದ ಮುಂದೆ ಆ ವೀರ ಅಬಲೆಯ ಆಟವು ಎಷ್ಟು ಹೊತ್ತು ಸಾಗಬಹುದು ? ಆಕೆಯ ಸೈನ್ಯವು ಯುದ್ಧದಲ್ಲಿ ಮಡಿದು ಬರ ಬರುತ್ತ ಕಡಿಮೆ ಕಡಿಮೆಯಾಗಹತ್ತಿತು. ಈ ಮೇರೆಗೆ ಮಲ್ಲವ್ವಾಬಾಯಿಯು ತನ್ನ ಶಕ್ತಿ ಇರುವವರೆಗೆ ವೈರಿಗಳ ಕೂಡ

ಕಾದಾಡಿ ಕಟ್ಟ ಕಡೆಗೆ ನಿರುಪಾಯಸ್ಥಳಾಗಿ ತನ್ನ ಬೆಂಗಾವಲಿನ ಕೆಲ ದಂಡಾ
ಳುಗಳೊಡನೆ ತನ್ನ ಕುದುರೆಯನ್ನು ಅತಿ ತ್ವರೆಯಾಗಿ ಓಡಿಸುತ್ತ ರಣಾಂಗ
ಣವನ್ನು ಬಿಟ್ಟು ಹೊರಟಳು. ಆಗ ಶಿವಾಜಿಯ ದಂಡನಾಯಕನಾದ ದಾದಾ
ಜಿಯು ಆಕೆಯ ಬೆನ್ನು ಹತ್ತಿದನು. ಅವನು ಆಕೆಯನ್ನು ಹಿಡಿದ ಸಂಗ
ತಿಯು ಶಿವದಿಗ್ವಿಜಯದಲ್ಲಿ ಹೀಗೆ ವರ್ಣಿಸಲ್ಪಟ್ಟಿದೆ :- ದಾದಾಜಿಯು
ಆಕೆಯನ್ನು ಸಮೀಪಿಸಿ, ಆಕೆಯ ಕುದುರೆಯ ಹಿಂಗಾಲನ್ನು ಕಡಿದನು.
ಕೂಡಲೇ ಕುದುರೆಯು ನೆಲಕ್ಕುರುಳಿತು. ಆಗ ಮರಾಠಾ ಸೈನಿಕರು ಆಕೆ
ಯನ್ನೂ ಆಕೆಯ ಪರಿವಾರವನ್ನೂ ಸುತ್ತುಗಟ್ಟಿದರು. ಆದರೂ ಆ ಸ್ತ್ರೀ
ಯಳು ಅವರಿಗೆ ಶರಣು ಹೋಗಲಿಲ್ಲ. ಪಾದಚಾರಿಯಾಗಿಯೇ ಅವರೊಂ
ದಿಗೆ ಕಾದಾಡ ಹತ್ತಿದಳು. ಆಸಮಯದಲ್ಲಿ ಅವಳ ಕೈಗೆ ಒಂದು ದೊಡ್ಡ
ಘಾಯವಾಗಿ ಅದರಿಂದ ರಕ್ತವು ಚಿಮ್ಮಹತ್ತಿತು. ಹೀಗಾಗಿ ಅವಳು
ಹೋರಾಡಲು ಅಸಮರ್ಥಳಾದಳು. ಆಗ ದಾದಾಜಿಯು ಆಕೆಯನ್ನು ಹಿಡಿ
ದೊಯ್ದು ಶಿವಾಜಿಗೆ ಒಪ್ಪಿಸಿದನು.

ಹುಡಿಯಲ್ಲಿ ಮುಳುಗಿದ ಮತ್ತು ರಕ್ತದಿಂದ ನೆನೆದ ಆ ವೀರಾಂಗನೆ
ಯನ್ನು ನೋಡಿದ ಕೂಡಲೆ ಶಿವಾಜಿಯ ಮನಸ್ಸು ಕರಗಿತು ಅವನು
ಆಕೆಯ ವಿಷಯದಲ್ಲಿ ಅತ್ಯಂತ ಪೂಜ್ಯ ಭಾವವನ್ನು ತಾಳಿ, ಅವಳನ್ನು
ಬಹಳವಾಗಿ ಹೊಗಳಿ, ಅವಳ ದೇಸಗತಿಯ ಗ್ರಾಮಗಳೊಳಗಿನ ಎರಡು
ಗ್ರಾಮಗಳನ್ನು ಮಾತ್ರ ಆಕೆಗೆ ಉಂಬಳಿಯಾಗಿ ಬಿಟ್ಟು, ಉಡುಗರೆಗಳನ್ನು
ಕೊಟ್ಟು, ಯೋಗ್ಯ ಮರ್ಯಾದೆಗಳೊಡನೆ ಆಕೆಯನ್ನು ಬೆಳವಡಿಗೆ ಕಳು
ಹಿಸಿ ಕೊಟ್ಟನು.

ಈ ಮೇರೆಗೆ ಮಲ್ಲವ್ವಾಬಾಯಿಯ ಸಂಕ್ಷಿಪ್ತ ವೃತ್ತಾಂತವಿದೆ. ಇದ
ರಲ್ಲಿ ನಾವು ಲಕ್ಷದಲ್ಲಿಡತಕ್ಕ ಸಂಗತಿ ಏನೆಂದರೆ :– ಒಂದು ಕಡೆಗೆ ದಕ್ಷಿಣ
ದೇಶವನ್ನೆಲ್ಲ ತಲ್ಲಣಿಸಿ ಬಿಟ್ಟಿದ್ದ ಮತ್ತು ಯುದ್ಧ ಕಲೆಯಲ್ಲಿ ನಿಷ್ಣಾತ
ನೆಂದೆನ್ನಿಸಿಕೊಂಡಿದ್ದ ಶಿವಾಜಿ ಮಹಾರಾಜನಂಥ ಬಲಿಷ್ಠ ವೀರನು, ಮತ್ತೊಂದು
ಕಡೆಗೆ ಒಂದು ಸಣ್ಣ ದೇಸಗತಿಯ ಮತ್ತು ಒಂದು ಪುಟ್ಟ ಸೈನ್ಯದ ನಾಯ

ಕಳಾಗಿ ಕಾಳಗಕ್ಕೆ ಸನ್ನದ್ಧಳಾಗಿ ನಿಂತ ಓರ್ವ ಅಬಲೆಯೂ, ಇವರಿಬ್ಬರ
ನಿಕರದ ಹೋರಾಟವು ಸುಮಾರು ಒಂದು ತಿಂಗಳಿನವರೆಗೆ ನಡೆದರೂ
ಶಿವಾಜಿ ಮಹಾರಾಜನಂಥ ಗಟ್ಟಿಗನು ಆಕೆಯ ಕೋಟೆಯನ್ನು ಸಾಧಿಸಿ
ಕೊಳ್ಳಲಾರದೇ ಹೋದನು. ಕೋಟೆಯೊಳಗಿನ ಅನ್ನ ಮತ್ತು ಯುದ್ಧ
ಸಾಮಗ್ರಿಗಳು ತೀರಿ ಹೋದರೂ ಆಕೆಯು ತನ್ನ ಎದುರಾಳಿಗೆ ಮೊರೆ
ಹೋಗದೆ, ತನ್ನ ಕೋಟೆಯ ಆಶ್ರಯವನ್ನು ಸಹ ಬಯಸದೆ, ತನ್ನ
ಸಣ್ಣ ದಂಡಿನೊಡನೆ ಸಮರಾಂಗಣದಲ್ಲಿ ನಿಂತು, ಶಿವಾಜಿಯ ಅಸಂಖ್ಯ
ದಂಡಾಳುಗಳ ಕೂಡ ಇಡೀ ಒಂದು ದಿವಸ ಕಾಳಗ ಮಾಡಿದಳು, ಆದರೂ
ಶಿವಾಜಿಯು ಆಕೆಯನ್ನು ಸೋಲಿಸಲು ಸಮರ್ಥನಾಗಲಿಲ್ಲ. ಕಟ್ಟಕಡೆಗೆ
ಆಕೆಯ ದಂಡಾಳುಗಳೆಲ್ಲ ಯುದ್ಧದಲ್ಲಿ ಮಡಿದು; ಸ್ವತಃ ಘಾಯಪಟ್ಟು
ಸಮರ ಭೂಮಿಯಲ್ಲಿ ಏಕಾಕಿನಿಯಾಗಿ ಉಳಿದಮೇಲೆ ಮಾತ್ರ ಮರಾಠರು
ಆಕೆಯನ್ನು ಹಿಡಿಯಲು ಸಮರ್ಥರಾದರು. ಇವೆಲ್ಲ ಸಂಗತಿಗಳು ಆ ಕಾಲದ
ಜನರನ್ನು ಬಹಳೇ ವಿಸ್ಮಯಗೊಳಿಸಿದವು. ಇದೇ ಕಾರಣದಿಂದ ಯಾವತ್ತು
ಇತಿಹಾಸಕಾರರೂ ಬಖರಕಾರರೂ ಮಲ್ಲವ್ವಾಬಾಯಿಯನ್ನು ಬಹಳವಾಗಿ
ಹೊಗಳಿದ್ದಾರೆ. ಇದರಂತೆ ಆಕೆಯ ಸೈನಿಕರ ಸ್ವಾಮಿಭಕ್ತಿಯೂ, ಶೌರ್ಯವೂ
ಅಸದೃಶ ವಾಗಿರುತ್ತವೆ. ಕಾಳಗ ನಡೆದಾಗ್ಗೆ, ಅವರಲ್ಲಿ ಒಬ್ಬರಾದರೂ
ರಣಾಂಗದಲ್ಲಿ ಆಕೆಯನ್ನು ಬಿಟ್ಟು ಅತ್ತಿತ್ತ ಅಗಲಲಿಲ್ಲ! ಅವರೆಲ್ಲರೂ ತಮ್ಮ
ಜೀವದ ಹಂಗುದೊರೆದು, ತಮ್ಮ ಸ್ವಾಮಿನಿಗಾಗಿ ಕಾದಾಡಿ, ರಣದೇವ
ತೆಗೆ ತಮ್ಮ ಪ್ರಾಣಗಳನ್ನು ಅರ್ಪಿಸಿದರು. ಇವೆಲ್ಲ ಸಂಗತಿಗಳು ಆಗಿನ
ಕಾಲದ ವೀರಶೈವರಲ್ಲಿದ್ದ ಸ್ವಾಭಿಮಾನ, ಶೌರ್ಯ, ಧೈರ್ಯ, ಸ್ವಾಮಿ
ಭಕ್ತಿ ಇವೇ ಮುಂತಾದ ಮೇಲಾದ ಗುಣಗಳನ್ನು ತೋರಿಸುತ್ತವೆ.

ಶಿವಾಜಿಮಹಾರಾಜನು ಮಹಾರಾಷ್ಟ್ರದಲ್ಲಿ ಅತ್ಯಂತ ಪೂಜ್ಯನಾಗಿದ್ದು
ಅವನ ಸಲುವಾಗಿ ಅನೇಕ ದಂತಕಥೆಗಳೂ ಐತಿಹ್ಯಗಳೂ ಉಂಟಾಗಿವೆ.
ಇವುಗಳಲ್ಲಿ ಶಿವಾಜಿಯು ಅನೇಕ ಸಾರ್ವಭೌಮರನ್ನು ಗೆದ್ದು, ಅನೇಕ ರಾಜ್ಯ
ಗಳನ್ನು ಸಂಪಾದಿಸಿ, ಕಟ್ಟಕಡೆಗೆ ಒಬ್ಬ ಹೆಂಗಸಿನಿಂದ ಸೋಲಲ್ಪಟ್ಟನೆಂಬ

ಒಂದು ಐತಿಹ್ಯವು ಇದೆ. ಆದರೆ ಈ ಹೆಂಗಸು ಕರ್ನಾಟಕಸ್ಥಳೂ ವೀರ ಶೈವಳೂ ಆದ ವೀರಮಣಿ ಮಲ್ಲವ್ವಾಬಾಯಿಯೇ ಇದ್ದಾಳೆ.

ಮಲ್ಲವ್ವಾಬಾಯಿಯ ವೃತ್ತಾಂತದ ಬಗ್ಗೆ ಬೇರೆ ಬೇರೆ ಗ್ರಂಥಗಳಲ್ಲಿ ಪಲಕೆಲವು ವ್ಯತ್ಯಾಸಗಳಿದ್ದುದರಿಂದ ಅವುಗಳನ್ನು ಇಲ್ಲಿ ಉಲ್ಲೇಖಿಸುವದು ಅವಶ್ಯವಿದೆ.

(೧) ಗ್ರಾಂಟ್ ಡಫ್, ಕಿಂಕೇಡ ಮತ್ತು ಸರ್ ದೇಸಾಯಿ ಇವರು ಬೆಳವಡಿ ಎಂದರೆ ಈಗಿನ ಬಳ್ಳಾರಿ ಎಂದು ತಮ್ಮ ಗ್ರಂಥಗಳಲ್ಲಿ ಕಾಣಿಸಿದ್ದಾರೆ. ಆದರೆ ಇದು ತಪ್ಪು ಇರುತ್ತದೆ. ಗ್ರಾಂಟ್‌ಡಫರು ಮೊದಲಿಗೆ ಮಾಡಿದ ಈ ತಪ್ಪನ್ನು ಉಳಿದ ಇಬ್ಬರು ಗ್ರಂಥಕಾರರು ಅಂಧತೆಯಿಂದ ಅನುಕರಣ ಮಾಡಿದ್ದಾರೆ. ಆದರೆ ಬೇರೆ ಎಲ್ಲ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಬೆಳವಡಿ ಎಂತಲೇ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ಶಿವಾಜಿಯು ತೀರಿಕೊಂಡ ಬಳಿಕ ೧೭ ವರ್ಷಗಳ ತರುವಾಯ ಅವನ ಚರಿತ್ರೆಯನ್ನು ಬರೆದ ಕೃಷ್ಣಾಜಿ ಅನಂತ ಸಭಾಸದ ಇವನು ಸಂಪಗಾವ ಪ್ರಾಂತದಲ್ಲಿಯ ಬೆಳವಡಿ ಎಂದು ಸ್ಪಷ್ಟವಾಗಿ ತನ್ನ ಬಖರದಲ್ಲಿ ಬರೆದಿರುವನು. ಆದ್ದರಿಂದ ಸಂಪಗಾವದಿಂದ ೧೪ ಮೈಲುಗಳ ಮೇಲಿರುವ ಬೆಳವಡಿಯೇ ಮಲ್ಲವ್ವಾಬಾಯಿಯ ಸ್ಥಾನವಿರುತ್ತದೆ.

(೨) ಶಿವದಿಗ್ವಿಜಯಕಾರನು ಈಕೆಯ ಹೆಸರು ಸಾವಿತ್ರಿಬಾಯಿ ಎಂದು ಉಲ್ಲೇಖಿಸಿದ್ದಾನೆ. ಆದರೆ ಇದು ತಪ್ಪು ಇರುತ್ತದೆ. ಒಬ್ಬಿಬ್ಬ ಗ್ರಂಥಕಾರರನ್ನು ಬಿಟ್ಟು ಉಳಿದವರೆಲ್ಲರೂ ಮಲವಾಯಿ, ಮಲ್ಲಬಾಯಿ ಎಂತಲೇ ಉಲ್ಲೇಖಿಸಿದ್ದಾರೆ. ತಾರೀಖು-ಈ-ಶಿವಾಜಿ ಎಂಬ ಗ್ರಂಥವನ್ನು ಬರೆದ ಮುಸಲ್ಮಾನ ಗೃಹಸ್ಥನು ಈಕೆಯನ್ನು ಲಾಲಬೀ ಎಂದು ಕರೆದಿದ್ದಾನೆ. ಇವೆಲ್ಲ ಮಲ್ಲವ್ವಾಬಾಯಿ ಎಂಬದರ ಅಪಭ್ರಂಶಗಳಿರುತ್ತವೆ.

ಮಲ್ಲವ್ವಾಬಾಯಿ ಎಂಬ ಹೆಸರಿನ ದೇಸಾಯಿಣಿಯು ಬೆಳವಡಿಯಲ್ಲಿ ಇದ್ದಳೋ ಹೇಗೆ ಎಂಬುದರ ವಿಷಯವಾಗಿ ನಾನು ಸಂಪಗಾವ ತಾಲೂ

ಕನಲ್ಲಿ ಶೋಧಮಾಡಲಾಗಿ, ಅಲ್ಲಿಯ ಒಬ್ಬ ಜೋಯಿಸರಿಗೆ ಒಂದು ಜಮೀನವನ್ನು ಆಕೆಯು ದಾನಕೊಟ್ಟಿರುವ ಸಂಗತಿಯು ನನ್ನ ನಿದರ್ಶನಕ್ಕೆ ಬಂದಿತು. ಆ ದಾನ ಪತ್ರದ ನಕಲನ್ನು ರಾವಬಹದ್ದೂರ ಮಲ್ಲನಾಯಕ ಪಾಟೀಲ ಹೊಂಗಲ ಇವರು ನನ್ನ ಕಡೆಗೆ ಕಳಿಸಿದ್ದಾರೆ. ಅದರಲ್ಲಿ ವೇದಮೂರ್ತಿ ರಾಜಶ್ರೀ ಶ್ರೀಪಾದಭಟ್ಟ ಬಿನ್ ಕೃಷ್ಣಭಟ್ಟ ಜೋಶಿ ಮಾಮಲೇ ಹುಬ್ಬಳ್ಳಿ ಇವರಿಗೆ ಬೆಳವಡಿ ಮಾಮಲೇ ಪರಗಣೆಯ ಮಲ್ಲಿನಾಯಕಿಣಿಯು ಶ್ರೀವೀರ ಭದ್ರ ದೇವರ ಆರಾಧನೆಗೋಸ್ಕರ ಗೂಡಿಕಟ್ಟಿ ಎಂಬ ಹೆಸರಿನ ಗ್ರಾಮದಲ್ಲಿಯ ಒಂದು ಮಾರು ಜಮೀನನ್ನು ಕೃಷ್ಣಾರ್ಪಣವಾಗಿ ವಂಶ ಪರಂಪರ ಕೊಟ್ಟ ಸಂಗತಿಯು ಉಲ್ಲೇಖಿಸಲ್ಪಟ್ಟಿದೆ. ಈ ಸನದು ಸನ್ ೧೭೧೩ನೇ ಇಸ್ವಿಯದು ಇರುತ್ತದೆ. ಅಂದರೆ ಶಿವಾಜಿಯು ಕೂಡ ಯುದ್ಧವಾದಬಳಿಕ ೩೫ ವರ್ಷಗಳ ತರುವಾಯ ಕೊಟ್ಟದ್ದು ಇರುತ್ತದೆ. ಇದರ ಮೇಲಿಂದ ಮಲ್ಲಮ್ಮಾಬಾಯಿಯು ಶಿವಾಜಿಯು ಕೂಡ ಯುದ್ಧಮಾಡಿದಾಗ ತಾರುಣ್ಯಾವಸ್ಥೆಯಲ್ಲಿದ್ದಳೆಂತಲೂ ಮುಂದೆ ಬಹಳ ದಿವಸಗಳ ವರೆಗೆ ಜೀವಿಸಿದ್ದಳೆಂತಲೂ ತೋರುತ್ತದೆ. ಈ ಸನದಿನಲ್ಲಿ ಮಲ್ಲನಾಯಕಿಣಿಯು ಕೂಡ ನಾಗಪ್ಪ ನಾಯಕ ದೇಸಾಯಿ ಮತ್ತು ಹೋನಾಜಿ ವೆಂಕಟಾದ್ರಿ ದೇಶ ಕುಲಕರ್ಣಿ ಇವರ ಹೆಸರುಗಳೂ ಕಾಣಸಲ್ಪಟ್ಟವೆ; ಅಂದರೆ ಆಕೆಯು ತನ್ನ ಮಗ ಮತ್ತು ದೇಶ ಕುಲಕರ್ಣಿ ಇವರನ್ನು ಸಹ ಸಾಕ್ಷಿಯಾಗಿಟ್ಟುಕೊಂಡು, ಈ ಸನದನ್ನು ಮಾಡಿಕೊಟ್ಟಿರಬಹುದೆಂದು ತೋರುತ್ತದೆ.

(೩) ಮಲ್ಲಮ್ಮಾಬಾಯಿಯು ಪ್ರಭು ಅಥವಾ ಚಿತಪಾವನ ಬ್ರಾಹ್ಮಣಳಿರಬೇಕೆಂದು ಮಹಾರಾಷ್ಟ್ರದಲ್ಲಿಯ ಅನೇಕರು ಅಭಿಪ್ರಾಯ ಪಟ್ಟಿರುವರು. ಅದರೆ ಇದು ತಪ್ಪು ಇರುತ್ತದೆ. ಯಾಕೆಂದರೆ ಸಂಪಗಾವ ತಾಲೂಕಿನಲ್ಲಿ ಪ್ರಭು ಅಥವಾ ಚಿತ್ ಪಾವನ ಬ್ರಾಹ್ಮಣರ ದೇಸಗತಿಗಳು ಯಾವವೂ ಇರುವದಿಲ್ಲ. ಇದಲ್ಲದೆ ಸಂಪಗಾಂವ ಪ್ರಾಂತದಲ್ಲಿ ಈಕೆಯು ಯಾವ ದೇಸಗತಿಗೆ ಸಂಬಂಧಪಟ್ಟವರೆಂಬುದನ್ನು ಶೋಧಮಾಡಲಾಗಿ ನನಗೆ ವಿಶ್ವಸನೀಯವಾಗಿ ತಿಳಿದುಬಂದದ್ದೇನೆಂದರೆ :– ಮೊದಲು ವೀರಪ್ಪನೆಂಬವನು ಮೂಲ ಪುರುಷನಾಗಿದ್ದನು. ಅವನಿಂದ ೪ ನೆಯವನಾದ ರಾಯಪ್ಪನೆಂಬವನಿಗೆ ಚಂದ್ರಭೂಷಣನೆಂಬ ಮಗನಿ

ದ್ದನು. ಆಗಿನ ಬೆಳವಡಿ ದೇಸಗತಿಯ ಮಾಲಿಕನಾದನೆಂತಲೂ, ಇದೇ ರಾಯಪ್ಪನ ಇನ್ನೊಬ್ಬ ಮಗನಿಂದ ಈಗಿನ ತಲ್ಲೂರ ದೇಸಗತಿಯೂ, ಇನ್ನೊಬ್ಬ ಮಗನಿಂದ ಈಗಿನ ಚಚಡಿ ದೇಸಗತಿಯೂ, ಮತ್ತೊಬ್ಬ ಮಗನಿಂದ ರುದ್ರಾಪುರ ಇಂಗಳಗಿ, ಮುತವಾಡ, ಈ ದೇಸಗತಿಗಳು ಉಂಟಾದವೆಂತಲೂ ನನ್ನ ತಿಳು ವಳಿಕೆಗೆ ಬಂದಿದೆ. ಇವುಗಳಲ್ಲಿ ತಲ್ಲೂರ, ಚಚಡಿ, ರುದ್ರಾಪುರ ದೇಸಗತಿ ಗಳು ಸಂಪಗಾವ ತಾಲೂಕಿನಲ್ಲಿ ಈಗೂ ಇರುತ್ತವೆ. ಆದರೆ ಉಳಿದವು ಗಳು ಮಾತ್ರ ನಾಶವಾಗಿರುತ್ತವೆ. ಈ ದೇಸಗತಿಗಳು ವೀರಶೈವರವೇ ಇರುತ್ತವೆ. ಇವೆಲ್ಲ ಕಾರಣಗಳಿಂದ ಮಲ್ಲವ್ವಾಬಾಯಿ ದೇಸಾಯಿಣಿಯು ಒಬ್ಬ ವೀರಶೈವಳೇ ಆಗಿದ್ದಳೆಂದು ಹೇಳಲಿಕ್ಕೆ ಏನೂ ಅಡ್ಡಿ ಇಲ್ಲ.

ಶಿವಾಜಿ ಮಹಾರಾಜನು ಮಲ್ಲವ್ವಾಬಾಯಿಯ ಪ್ರಾಂತವನ್ನು ಅವ ಳಿಂದ ಕಸಕೊಂಡು ಹೋದಬಳಿಕ, ನಾಕು ದಿವಸಗಳಲ್ಲಿಯೇ ಅಂದರೆ ಅವನು ತೀರಿಕೊಂಡ ತರುವಾಯ ದೇಶದಲ್ಲಿ ಅವ್ಯವಸ್ಥೆಯುಂಟಾಗಲು, ಆಕೆಯು ತನ್ನ ಸೀಮೆಯನ್ನು ತಿರುಗಿ ದೊರಕಿಸಿಕೊಂಡು ಪೂರ್ಣ ಸ್ವತಂತ್ರಳಾದಳು. ಈ ದೇಸಗತಿಯು ಮುಂದೆ ಕೆಲವು ವರ್ಷಗಳವರೆಗೆ ಬಾಳಿತು. ಆದರೆ ತರುವಾಯ ಕಿತ್ತೂರ ಸಂಸ್ಥಾನದವರು ಅದಕ್ಕಿದ್ದ ೬೩ ಗ್ರಾಮಗಳನ್ನು ಖಾಲಸಾತು ಮಾಡಿ, ಆ ದೇಸಗತಿಯನ್ನೇ ಮುರಿದು ಬಿಟ್ಟರೆಂದು ತಿಳಿದು ಬರುತ್ತದೆ.

(ಶಿವಾನುಭವ ಸಂಪುಟ ೧ ಸಂಚಿಕೆ ೩ ೦೦೫)

# ವೀರಶೈವವು ಕರ್ನಾಟಕ ಧರ್ಮವು

ವೀರಶೈವ ಧರ್ಮವು ಪುರಾತನವಾದುದೆಂತಲೂ ಅದು ಈಗಿನ ಸ್ವರೂಪದಲ್ಲಿಯೇ ಹಿಂದಿನ ಕಾಲದಲ್ಲಿಯೂ ಕೂಡ ಇದ್ದಿತೆಂತಲೂ ಬಹುಜನರ ತಿಳಿವಳಿಕೆಯುಂಟು. ಆದರೆ ಯಾವ ಧರ್ಮವಾದರೂ ಕೂಡ ಈ ಪ್ರಕಾರವು ಒಂದೇ ರೀತಿಯುಳ್ಳದಾಗಿ ಯಾವಾಗಲೂ ಇರುವದಿಲ್ಲ. ಅದರಲ್ಲಿ ಪರಿಸ್ಥಿತಿಗೆ ಅನುಸಾರವಾಗಿ ಕಾಲಕಾಲಕ್ಕೆ ಬದಲಾವಣೆಗಳಾಗುತ್ತವೆ. ವೇದಕಾಲದಲ್ಲಿ ಹಿಂದೂ ಧರ್ಮದ ಸ್ವರೂಪವು ಇದ್ದಂತೆ ಉಪನಿಷತ್ಕಾಲದಲ್ಲಿ ಇರಲಿಲ್ಲ. ಮುಂದೆ ಈ ಧರ್ಮದ ಸ್ವರೂಪವು ಪೌರಾಣಿಕ ಕಾಲದಲ್ಲಿ ಉಳಿಯಲಿಲ್ಲ. ಪೌರಾಣಿಕಕಾಲದ ಹಿಂದೂ ಧರ್ಮದಲ್ಲಿಯಾದರೂ ಪುನಃ ಅನೇಕ ಬದಲಾವಣೆಗಳಾದವು. ಹೀಗೆ ಬದಲಾವಣೆಗಳು ಆಗುತ್ತ ಬರುವದು ಸ್ವಾಭಾವಿಕವಾಗಿದೆ. ಇದು ಆ ಧರ್ಮದ ಜೀವಂತತನದ ದ್ಯೋತಕವಾಗಿರುತ್ತದೆ.

ವೀರಶೈವ ಧರ್ಮದಲ್ಲಿಯೂ ಕೂಡ ಇದೇ ಪ್ರಕಾರ ಕಾಲಕಾಲಕ್ಕೆ ಬದಲಾವಣೆಗಳಾಗುತ್ತ ಬಂದಿವೆ. ಒಂದು ಕಾಲದಲ್ಲಿ ಶೈವಧರ್ಮದಲ್ಲಿರುವ ಆಚರಣೆಗಳು ಅದರಲ್ಲಿ ಇದ್ದುದ್ದಲ್ಲದೆ ಬ್ರಾಹ್ಮಣ ಧರ್ಮದಲ್ಲಿಯ ಆಚರಣೆಗಳೂ ಕೂಡ ಅದರಲ್ಲಿ ಮಿಶ್ರವಾಗಿದ್ದವು. ಆದರೆ ಈ ಸ್ವರೂಪು ಅದರಲ್ಲಿ ಯಾವಾಗಲೂ ಇರಲಿಲ್ಲ. ಬಸವಾದಿ ಪ್ರಮಥರ ಕಾಲದಲ್ಲಿ ವೀರಶೈವ ಧರ್ಮದಲ್ಲಿ ಒಂದು ಕ್ರಾಂತಿಯುಂಟಾಯಿತು. ಅದಕ್ಕೆ ಆಗ ಒಂದು ಹೊಸ ಸ್ವರೂಪು ಪ್ರಾಪ್ತವಾಯಿತು. ಆಗ ಅದು ಒಂದು ವಿಶಾಲವಾದ ವಿಸ್ತೃತವಾದ ಧರ್ಮವಾಯಿತು. ಈ ಕಾಲಕ್ಕೆ ಕರ್ನಾಟಕದಲ್ಲಿ ಪ್ರಚಲಿತವಿದ್ದ ಧರ್ಮತತ್ವಗಳಲ್ಲಿ ಮತ್ತು ಆಚಾರಗಳಲ್ಲಿ ಯಾವವು ಅತ್ಯುತ್ತಮವಾದವುಗಳೆಂದು ಆ ಕಾಲದ ಶಿವಶರಣರಿಗೆ ತೋರಿದವೋ ಅವುಗಳನ್ನೆಲ್ಲ ಅವರು ವೀರಶೈವ ಧರ್ಮದಲ್ಲಿ ಸೇರ್ಪಡೆ ಮಾಡಿದ್ದು ಕಂಡುಬರುತ್ತದೆ. ಇದರ ಮೂಲಕ ಅದು ನಾಡಿನಲ್ಲಿ ಒಂದು ಪ್ರಬಲ ಧರ್ಮವಾಯಿತು. ಅದಕ್ಕೆ

ಒಂದು ವ್ಯಾಪಕ ಸ್ವರೂಪ ಪ್ರಾಪ್ತವಾಯಿತು ಮತ್ತು ಅದನ್ನು ಎಲ್ಲ ಪಂಗಡದವರು ಅನುಸರಿಸಹತ್ತಿದರು. ನಾವು ಬಸವೇಶ್ವರನ ಕಾಲದಲ್ಲಿ ಆಗಿ ಹೋದ ಶಿವಶರಣರ ಚರಿತ್ರೆಗಳನ್ನು ಪ್ರಸಿದ್ಧ ಮಾಡುತ್ತ ಬಂದಿದ್ದು ಅವು ಗಳ ಮೇಲಿಂದ ಮೇಲಿನ ಸಂಗತಿಗಳು ಸ್ಪಷ್ಟವಾಗುವಂತೆ ಇವೆ.

ವೀರಶೈವ ಧರ್ಮವು ಬ್ರಾಹ್ಮಣ ವಿರೋಧೀ ಧರ್ಮವೆಂದು ಬಹು ಜನರು ತಿಳಿದಿರುತ್ತಾರೆ. ಆದರೆ ಈ ತಿಳುವಳಿಕೆಯು ತಪ್ಪು ಇರುತ್ತ ದೆಂಬುದು ಶಿವಶರಣರ ಚರಿತ್ರೆಗಳಿಂದ ಕಂಡುಬರುತ್ತದೆ. ಬಸವೇಶ್ವರನು ಮೊದಲು ಬ್ರಾಹ್ಮಣನಿದ್ದು ಯಜ್ಞೋಪವೀತವನ್ನು ಧಾರಣ ಮಾಡಲಿಕ್ಕೆ ಒಪ್ಪದೇ ಹೋಗಲು ವೀರಶೈವ ಧರ್ಮವನ್ನು ಅವನು ಸ್ಥಾಪಿಸಿದನೆಂಬ ತಿಳುವಳಿಕೆಯು ಈಗಲೂ ಕೂಡ ಪ್ರಚಲಿತವಿರುತ್ತದೆ. ಆದರೆ ನಿಜ ಸ್ಥಿತಿಯು ಹೀಗಿರುವದಿಲ್ಲ.

ಹನ್ನೊಂದನೆಯ ಶತಮಾನದ ಮಧ್ಯಕಾಲದಲ್ಲಿ ಅಂದರೆ ಬಸವೇಶ್ವರನಿ ಗಿಂತಲೂ ನೂರು ವರ್ಷ ಮೊದಲು ಶಂಕರದಾಸಿಮಯ್ಯನೆಂಬ ಶಿವಶರಣನು ಉತ್ಪನ್ನನಾಗಿ ಚಾಲುಕ್ಯ ಜಯಸಿಂಹರಾಜನ ಆಸ್ಥಾನದಲ್ಲಿ ಪರವಾದಿಗಳೊ ಡನೆ ವಾದ ವಿವಾದ ಮಾಡಿ ವೀರಶೈವ ಧರ್ಮದ ಶ್ರೇಷ್ಠತೆಯನ್ನು ಪ್ರಸ್ಥಾ ಪಿಸಿದ್ದು ತಿಳಿದುಬರುತ್ತದೆ. ಆದರೆ ಇವನು ಮೊದಲು ಗಂಗಾಧರಭಟ್ಟ ನೆಂಬ ಹೆಸರಿನ ಬ್ರಾಹ್ಮಣನಾಗಿದ್ದನು. ಅವನು ಮುಂದೆ ವೀರಶೈವ ಧರ್ಮ ವನ್ನು ಸ್ವೀಕರಿಸಿ ಅದರ ತತ್ವಗಳನ್ನು ಅನೇಕ ಕಡೆಗೆ ಪ್ರಸಾರಪಡಿಸಿದನು.

ಈಗ ಕಲಬುರ್ಗಿ ಜಿಲ್ಲೆಯಲ್ಲಿರುವ ಆಲಂದಿಯಲ್ಲಿ ಏಕಾಂತದ ರಾಮಯ್ಯನೆಂಬ ಶಿವಶರಣನು ಉದಿಸಿ ಧಾರವಾಡ ಜಿಲ್ಲೆಯಲ್ಲಿಯ ದಕ್ಷಿಣ ಭಾಗದಲ್ಲಿ ವೀರಶೈವ ಧರ್ಮವನ್ನು ನೆಲೆಗೊಳಿಸಿದನು. ಇವನು ಬ್ರಾಹ್ಮಣ ನಾಗಿದ್ದನು.

ವೀರಶೈವರ ಪಂಚಾಚಾರ್ಯರಗಳಲ್ಲೊಬ್ಬನಾದ ಪಂಡಿತಾರಾಧ್ಯನು ಬ್ರಾಹ್ಮಣನಾಗಿದ್ದನು. ಅವನು ಆಂಧ್ರ ದೇಶದಲ್ಲಿ ವೀರಶೈವ ಮತೋ ದ್ಧಾರ ಕಾರ್ಯಗಳನ್ನು ಮಾಡಿದನು.

ಅವನ ತರುವಾಯ ಆಂಧ್ರ ದೇಶದಲ್ಲಿ ಪಂಡಿತಾರಾಧ್ಯ ಮತ್ತು ಪಾಲ್ಕುರಿಕೆ ಸೋಮಾರಾಧ್ಯ ಇವರು ಉತ್ಪನ್ನರಾಗಿ ವೀರಶೈವ ಧರ್ಮವನ್ನು ಪ್ರಸಾರಪಡಿಸಿದರು. ಅವರು ಸಹ ಬ್ರಾಹ್ಮಣರಾಗಿದ್ದರು.

ಶಿವಲೆಂಕ ಮಂಚಣ್ಣನು ಬಸವನ ತರಗತಿಯ ವಚನಕಾರನಾಗಿದ್ದಾನೆ. ಅವನು ಸಹ ಬ್ರಾಹ್ಮಣನಾಗಿದ್ದಾನೆ. ಬಹುರೂಪಿ ಚೌಡಯ್ಯನು ಬಹುಜನ ಶೈವರನ್ನು ಒಡಗೊಂಡು ವೀರಶೈವ ಧರ್ಮವನ್ನು ಪ್ರಸಾರ ಮಾಡಿದನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಅವನು ಬಹುಜನ ಶೈವ ಬ್ರಾಹ್ಮಣರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟನು.

ಬಿಬ್ಬಿ ಬಾಚಯ್ಯ, ಅಮ್ಮವ್ವೆ, ಗುಪ್ತ ಮಂಚಣ್ಣ, ಕೆಂಭಾವಿ ಭೋಗಣ್ಣ, ಮಧುವರಸ ಇವರೆಲ್ಲರೂ ಬ್ರಾಹ್ಮಣರಾಗಿದ್ದರು. ಆದರೆ ಅವರೆಲ್ಲರೂ ಮೊದಲು ಬ್ರಾಹ್ಮಣ ಧರ್ಮವನ್ನು ಅನುಸರಿಸುತ್ತಿದ್ದರೂ ಹಿಂದುಗಡೆ ಅವರು ಶಿವಾನುಭವದ ತತ್ವಗಳನ್ನು ತಿಳಿದವರಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿದರು. ಅವರ ಕಾರ್ಯಗಳ ಮೂಲಕ ನಾಡಿನಲ್ಲಿ ವೀರಶೈವ ಧರ್ಮದ ಮಹತ್ವವು ಬೆಳೆಯಲಿಕ್ಕೆ ಕಾರಣವಾಯಿತು.

ಹೀಗೆ ಬ್ರಾಹ್ಮಣ ಸಮಾಜವಷ್ಟೇ ಅಲ್ಲ ಇತರ ಸಮಾಜದವರೂ ಕೂಡ ವೀರಶೈವ ಧರ್ಮವನ್ನು ಅನುಸರಿಸಿ ಅದರ ಪ್ರಸಾರ ಮಾಡಿದ್ದು ಕಂಡುಬರುತ್ತದೆ.

ಬಹು ಜನ ಕೈಗಾರಿಕೆಯವರು ವೀರಶೈವ ಧರ್ಮದ ಅನುಯಾಯಿಗಳಾದರು. ಒಕ್ಕಲುತನ ಮಾಡುವ ಒಕ್ಕಲಿಗ ಮುದ್ದಯ್ಯ, ಇಳಿಹಾಳಿ ಬೊಮ್ಮಯ್ಯ, ಇವರು ಒಕ್ಕಲಿಗರಾಗಿ ಶ್ರೇಷ್ಠ ಶಿವಶರಣರೆಂದು ಪ್ರಸಿದ್ಧಿಯನ್ನು ಹೊಂದಿದ್ದಾರೆ.

ಮಡಿವಾಳ ಮಾಚಿದೇವನು ಅಗಸರವನು. ಅಂಬಿಗರ ಚೌಡಯ್ಯನು ಅಂಬಿಗನು. ದೇವರ ದಾಸಿಮಯ್ಯನು ನೇಗೆಯವನು. ಕುಂಬಾರ ಗುಂಡಯ್ಯನು ಕುಂಬಾರನು. ನುಲಿಯ ಚಂದಯ್ಯನು ಹಗ್ಗ ಹೊಸೆಯುವವನು.

ಹಡಪದಪ್ಪಣ್ಣನು ನಾವಲಿಗನು, ಗೊಲ್ಲಾಳನು ಕುರಿ ಕಾಯುವವನು. ಹೀಗೆ ಅನೇಕ ಉದ್ಯೋಗಸ್ಥರು ಮತ್ತು ಕೈಗಾರಿಕೆಯವರು ವೀರಶೈವ ಧರ್ಮವನ್ನು ಅನುಸರಿಸುವವರಾದರು.

ಘಟದಾಸಿ ಗುಡ್ಡವ್ವ ಮತ್ತು ಹಾವಿನಹಾಳ ಕಲ್ಲಯ್ಯ ಈ ಉಭಯತರು ಅಕ್ಕಸಾಲಿಗರು. ಈ ಉಭಯತರು ವೀರಶೈವ ಧರ್ಮತತ್ವಗಳನ್ನು ಬಹು ಕಾಲ ಪ್ರಸಾರ ಪಡಿಸಿದ್ದಾರೆ. ಅವರು ಅತ್ಯುಚ್ಚ ತರಗತಿಯ ವಚನಕಾರರೂ ಶಿವಶರಣರೂ ಎಂದು ಪ್ರಸಿದ್ಧರಾಗಿದ್ದಾರೆ.

ಪುಲಿಗೆರೆಯ ಆದಯ್ಯ, ಸೊಡ್ಡಳ, ಬಾಚರಸ, ಮತ್ತು ಬಳ್ಳೇಶ ಮಲ್ಲಯ್ಯ ಇವರು ವ್ಯಾಪಾರಸ್ಥರಿದ್ದಾರೆ. ಅವರಲ್ಲಿ ಕೆಲವರು ವಚನಕಾರರಿದ್ದಾರೆ ಅವರೆಲ್ಲರು ಶ್ರೇಷ್ಠ ಶಿವಾನುಭವಿಗಳು.

ಇದರಂತೆ ಬಹುಜನ ಅಸ್ಪೃಶ್ಯರು ಸಹ ವೀರಶೈವ ಧರ್ಮವನ್ನು ಪರಿಪಾಲಿಸುತ್ತ ಅದರ ಮಹತ್ವವನ್ನು ಹೆಚ್ಚಿಸಿದ್ದಾರೆ. ಮಾದರ ಚೆನ್ನಯ್ಯ, ಹರಳಯ್ಯ, ಡೋರ ಕಕ್ಕಯ್ಯ, ಶಿವನಾಗಮಯ್ಯ, ಧೂಳಯ್ಯ, ನಾವದಿಗೆಯ ಗುಡ್ಡಮ್ಮ ಇವರೆಲ್ಲರೂ ಅಸ್ಪೃಶ್ಯರಾಗಿದ್ದು ಶಿವಶರಣರಲ್ಲಿ ಬಹಳ ಪ್ರಸಿದ್ಧಿಯನ್ನು ಹೊಂದಿರುತ್ತಾರೆ. ಇವರಲ್ಲಿ ವಚನಕಾರರೂ ಇದ್ದಾರೆ.

ಹೀಗೆ ಕರ್ನಾಟಕದಲ್ಲಿ ವೀರಶೈವ ಧರ್ಮವು ಎಲ್ಲ ಸಮಾಜಗಳಲ್ಲಿ ಪಸರಿಸಿದ್ದು ಕಂಡುಬರುತ್ತದೆ. ಕರ್ನಾಟಕವು ಈ ಕಾಲಕ್ಕೆ ಸಂಸ್ಕೃತಿಯಲ್ಲಿ ಬಹು ಹೆಸರಾದ ದೇಶವಾಗಿತ್ತು. ಚಾಲುಕ್ಯ ವಿಕ್ರಮಾದಿತ್ಯ, ಹೊಯಿಸಳ ವಿಷ್ಣುವರ್ಧನ, ಚಾಲುಕ್ಯ ತೈಲಪ, ಮುಂತಾದ ರಾಜರು ಕರ್ನಾಟಕದಲ್ಲಿ ಮಾತ್ರವಲ್ಲ, ಆಗಿನ ಇಡೀ ಭಾರತದಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದವರಾಗಿದ್ದರು. ಅವರ ಕಾಲದಲ್ಲಿ ಅತ್ಯಂತ ವರ್ಚಸ್ಸುಳ್ಳ ಧಾರ್ಮಿಕ ವರ್ಗಗಳೆಂದು ಹೆಸರು ಪಡೆದ ಜೈನರು, ಬ್ರಾಹ್ಮಣರು, ಶೈವರು, ಕಾಳಾಮುಖರು, ಪಾಶುಪತರು, ಶಾಕ್ತರು, ಯೋಗವಿದ್ಯಾಪ್ರವೀಣರು, ಸಿದ್ಧಿಗಳನ್ನು ಸಾಧಿಸಿದ ಸಿದ್ಧರು ಆಗಿಹೋಗಿದ್ದು ಇವರೆಲ್ಲರೂ ಶಿವಶರಣರು ಪ್ರಸಾರಪಡಿಸಿದ ವೀರಶೈವ ಧರ್ಮಾಚಾರಗಳನ್ನು ಅವಲಂಬಿಸಿದವರಾದರು. ಯಾಕಂದರೆ ಈ

ಇತರ ಧರ್ಮಗಳಲ್ಲಿ ಯಾವ ತತ್ವಗಳು ಶ್ರೇಷ್ಠವೆಂದು ತಿಳಿಯಲ್ಪಟ್ಟಿದ್ದವೋ ಅವುಗಳನ್ನೆಲ್ಲ ಶಿವಶರಣರು ತಮ್ಮ ಜೀವಿಕಿಲ ಮಾರ್ಗದಲ್ಲಿ ಸಮಾವೇಶ ಮಾಡಿಕೊಂಡು ಅವುಗಳನ್ನು ಎಲ್ಲ ಸಮಾಜಗಳಲ್ಲಿ ಮತ್ತು ಜಾತಿಯವರಲ್ಲಿ ಪ್ರಸಾರಪಡಿಸಿದರು.

ವೀರಶೈವ ಧರ್ಮದವರಲ್ಲಿರುವ ಅಹಿಂಸಾ ತತ್ವವು ಜೈನ ಧರ್ಮದವರಿಗೆ ಪ್ರಿಯವಾದುದಾಗಿರುತ್ತದೆ. ಲಿಂಗಾಂಗ ಸಾಮರಸ್ಯದ ತತ್ವಗಳು ಬ್ರಾಹ್ಮಣರ ಅದ್ವೈತ ಮಾರ್ಗವನ್ನು ಅನುಸರಿಸುತ್ತವೆ. ವಚನಶಾಸ್ತ್ರಸಾರದಲ್ಲಿಯ ಕರಣ ಹಸಿಕೆಯಲ್ಲಿ ಕಂಡುಬರುವ ವಿವೇಚನೆಗಳು ಸಾಂಖ್ಯದ ಮಾರ್ಗವನ್ನು ಹೋಲುತ್ತದೆ. ಶಿವಶರಣರು ಅನುಸರಿಸುವ ತ್ರಿಲಿಂಗಗಳ ಅನುಸಂಧಾನಗಳು ಯೋಗಾಭ್ಯಾಸಿಗಳ ರೀತಿಯನ್ನು ಹೋಲುತ್ತವೆ. ಶಿವಶರಣರ ವಿಧಿ ವಿಧಾನಗಳಲ್ಲಿ ವೈಷ್ಣವರ ಭಕ್ತ್ಯಾಚಾರಗಳು ಇರುವದು ಕಂಡುಬರುತ್ತದೆ. ಶಾಕ್ತರ ತತ್ವಗಳು ಶಿವಶರಣರು ಅಂಗೀಕರಿಸಿರುವ ಮಂತ್ರ ವಿಧಾನಗಳಲ್ಲಿ ತೋರುತ್ತದೆ. ಹೀಗೆ ಹಿಂದುಸ್ಥಾನದಲ್ಲಿ ಖ್ಯಾತಿಯುಳ್ಳ ಬೇರೆ ಧರ್ಮಗಳಲ್ಲಿ ಕಂಡುಬರುವ ಉಚ್ಚ ತತ್ವಗಳು ವೀರಶೈವ ಮಾರ್ಗದಲ್ಲಿ ಇರುವದು ಕಂಡುಬರುತ್ತದೆ.

ಮೇಲಿನ ಕಾರಣಗಳ ಮೂಲಕ ವೀರಶೈವ ಧರ್ಮವು ಕೆಲವೊಂದು ವಿಶಿಷ್ಟ ಧರ್ಮ ಅಥವಾ ಜಾತಿ ಅಥವಾ ಪಂಥ ಅಥವಾ ಸಮಾಜದವರದು ಇರದೆ ಅದು ಕರ್ನಾಟಕದ ಸರ್ವ ಸಾಮಾನ್ಯ ಧರ್ಮವಾಗಿರುತ್ತದೆಂದು ಹೇಳಬಹುದು. ಅದರ ವ್ಯಾಪ್ತಿಯು ನಾಡಿನ ಇಡೀ ಜನಾಂಗವನ್ನು ಒಳಗೊಂಡಿರುತ್ತದೆ. ಹೀಗೆ ಅದು ಒಂದು ವ್ಯಾಪಕವಾದ ಸರ್ವ ಸಾಮಾನ್ಯ ಧರ್ಮವಾಗಿರುತ್ತದೆ. ಅದು ಕೆಲವೊಂದು ಪಂಗಡಕ್ಕೆ ಸೇರಿದ ವಿಶಿಷ್ಟ ಧರ್ಮವಲ್ಲ.

ಇದರ ನಿಜ ಸ್ವರೂಪ ಹೀಗಿದ್ದರೂ ವೀರಶೈವ ಸಮಾಜದಲ್ಲಿಯ ಕೆಲ ಪಂಗಡದವರು ಅದರ ಕ್ಷೇತ್ರವನ್ನು ಕುಂಚಿತ ಮಾಡಲು ಬಗೆದರು. ಈಗಲೂ ಬಗೆಯುತ್ತಾರೆ. ಅವರು ಹೀಗೆ ಒಂದು ಕಾಲದಲ್ಲಿ ಬಹಳ ಪ್ರಯತ್ನಿಸಿದರು. ಇದರಿಂದ ಸಮಾಜದಲ್ಲಿ ಒಡಕುಗಳುಂಟಾದವು ಅನೇಕ ಅನಾ

ಮತಗಳಾದವು. ಇದರಿಂದ ಬಹು ಜನರು ವೀರಶೈವ ಧರ್ಮವನ್ನು ತ್ಯಜಿಸಿದರು. ಅನೇಕರು ಅಲಿಂಗಿಗಳಾದರು. ಇದರ ಘಾತುಕ ಪರಿಣಾಮಗಳನ್ನು ಈಗಲೂ ಕೂಡ ಸಮಾಜದಲ್ಲಿ ಕಾಣಬಹುದು. ಈ ಸ್ಥಿತಿಯು ಮೈಸೂರು ಪ್ರಾಂತದಲ್ಲಿ ಮಾತ್ರವಲ್ಲ, ಉತ್ತರ ಕರ್ನಾಟಕದಲ್ಲಿಯೂ ಕೂಡ ಇರುವದು ಕಂಡುಬರುತ್ತದೆ.

ಆದರೆ ಈ ಪರಿಸ್ಥಿತಿಯು ಶಿವಾನುಭವ ಪತ್ರಿಕೆಯಲ್ಲಿ ವಚನಶಾಸ್ತ್ರವು ಪ್ರಸಾರವಾಗಹತ್ತಿದಂದಿನಿಂದ ದೂರವಾಗಹತ್ತಿರುತ್ತದೆ. ಮಧ್ಯದಲ್ಲಿ ಉಂಟಾದ ಆಕುಂಚಿತ ವಿಚಾರಗಳು ಮೆಲ್ಲನೆ ಈಗ ಸಡಿಲಾಗಹತ್ತಿದೆ. ಸಮಾಜದಲ್ಲಿ ಮೊದಲಿನಂತೆ ಒಕ್ಕಟ್ಟು ಪರಸ್ಪರ ಸ್ನೇಹ ಸೌಹಾರ್ದಗಳು ಉಂಟಾಗುವ ಚಿನ್ಹಗಳು ಕಂಡುಬರುತ್ತಿವೆ. ಶಿವಾನುಭವ ಪತ್ರಿಕೆಯಲ್ಲಿ ವಚನಶಾಸ್ತ್ರವು ಪ್ರಕಟವಾಗಹತ್ತಿದಂದಿನಿಂದ ಒಂದು ಸಾಮಾಜಿಕ ಕ್ರಾಂತಿಯು ಉಂಟಾಗಹತ್ತಿತೆಂದು ನಾವು ನಿರ್ವಿವಾದವಾಗಿ ಹೇಳಬಹುದು.

(ಶಿವಾನುಭವ ಸಂಪುಟ ೨೫ ಸಂಚಿಕೆ ೧೧ರಿಂದ)

# ಶಿವಯೋಗದ ಸಾಮಾನ್ಯ ಸ್ವರೂಪ

## (ಸಿದ್ಧಿಗಳ ಸಾಧನೆ ಮತ್ತು ನೈತಿಕಾಚಾರ)

ನಾವು ಶಿವಾನುಭವ ಪತ್ರಿಕೆಯ ಕೆಲವು ಸಂಚಿಕೆಗಳಲ್ಲಿ ರಾ. ರಾ. ಮಡಿವಾಳಪ್ಪ ಸಾಸನೂರ ಇವರು ಭಕ್ತಿಯೋಗ, ಕರ್ಮಯೋಗ, ಜ್ಞಾನಯೋಗ, ರಾಜಯೋಗ ಈ ವಿಷಯಗಳ ಮೇಲೆ ಲಿಖಿಸಿದ ನಿಬಂಧಗಳನ್ನು ಪ್ರಸಿದ್ಧಿಸಿರುತ್ತೇವೆ. ಅವುಗಳಲ್ಲಿ ಯೋಗಾಭ್ಯಾಸದಲ್ಲಿ ಪ್ರಚಲಿತವಿರುವ ನಿಜತತ್ವಗಳು ಬಹು ವಿಶದವಾಗಿ ಮತ್ತು ಸಂಕ್ಷೇಪವಾಗಿ ವಿವರಿಸಲ್ಪಟ್ಟಿವೆ. ಯೋಗದ ತತ್ವಗಳು ಮತ್ತು ಅವರ ಅಭ್ಯಾಸವು ಹಿಂದೂ ಧರ್ಮಶಾಸ್ತ್ರದಲ್ಲಿ ಒಂದು ಮಹತ್ವದ ವಿಶಿಷ್ಟ ಭಾಗವಾಗಿದ್ದು ಅದರ ಉದ್ದೇಶವು ಚಂಚಲವಾದ ಚಿತ್ತವೃತ್ತಿಯನ್ನು ಸ್ಥಿರಗೊಳಿಸಿ ಮನುಷ್ಯನ ಆಧ್ಯಾತ್ಮಿಕ ಹಾದಿಯಲ್ಲಿರುವ ಆತಂಕಗಳನ್ನು ದೂರಪಡಿಸಿ ಅವನಲ್ಲಿ ಶುದ್ಧ ಸಾತ್ವಿಕವೃತ್ತಿಯನ್ನು ಹುಟ್ಟಿಸಿ ಅವನಿಗೆ ಮೋಕ್ಷಸಿದ್ಧಿಯನ್ನು ತೀವ್ರವಾಗಿ ಮಾಡಿ ಕೊಡುವದೇ ಇರುತ್ತದೆ. ಇದರ ತತ್ವಗಳು ಮಾನಸಿಕ ಶಕ್ತಿಯ ವಿಕಾಸವನ್ನು ಹೊಂದುವ ದೃಷ್ಟಿಯಿಂದ ಹ್ಯಾಗೆ ಮಾಡಬೇಕೆಂಬುದನ್ನು ಅರುಹುತ್ತವೆ. ಈ ಮಹತ್ತರವಾದ ವಿಷಯವನ್ನು ನಮ್ಮ ಪೂರ್ವಜರು ಚನ್ನಾಗಿ ಪರಿಶೋಧಿಸಿ ಅನೇಕ ಗೂಢ ವಿಷಯಗಳನ್ನು ಕಂಡುಹಿಡಿದದ್ದನ್ನು ಈಗಿನ ಪಾಶ್ಚಿಮಾತ್ಯ ಮಾನಸಿಕ ಶಾಸ್ತ್ರಾಭ್ಯಾಸಿಗಳೂ ಸಹ ಒಪ್ಪಿಕೊಳ್ಳಹತ್ತಿದ್ದಾರೆ. ಮತ್ತು ಈಗಿನವರು ಮಾಡುತ್ತಿದ್ದ ಅನೇಕ ಅದ್ಭುತ ಕೌಶಲ್ಯಗಳು ಈ ತತ್ವಗಳ ವ್ಯಾವಹಾರಿಕ ಪ್ರಯೋಗಗಳೇ ಎಂದು ಹೇಳಬಹುದು.

ವೀರಶೈವ ಪುರಾತನರು ಹಿಂದೂ ಧರ್ಮದ ತತ್ವಗಳನ್ನೇ ಅನುಸರಿಸಿ ಅವುಗಳನ್ನೊಳಗೊಂಡ ತಮ್ಮ ಒಂದು ವಿಶಿಷ್ಟ ಮಾರ್ಗವನ್ನು ಹುಡುಕಿದವರು. ಇದಕ್ಕೆ ಷಟ್‌ಸ್ಥಲ ಮಾರ್ಗವೆಂತಲೇ ಹೆಸರು. ಇದರಲ್ಲಿ ಅವರು ಯೋಗಾಭ್ಯಾಸದ ತತ್ವಗಳನ್ನು ಸಂಪೂರ್ಣವಾಗಿ ಸೇರಿಸಿರುತ್ತಾರೆ. ಇದೇ

ಶಿವಯೋಗವೆನಿಸಿಕೊಳ್ಳುವದು. ಷಟಸ್ಥಲದಲ್ಲಿ ಆರು ಭಾಗಗಳಿದ್ದು ಭಕ್ತಿಯೋಗ ಮತ್ತು ಕರ್ಮಯೋಗಗಳು ಭಕ್ತ ಮತ್ತು ಮಹೇಶ್ವರ ಸ್ಥಲಗಳಲ್ಲಿ ಒಳಗೊಂಡಿರುವವೆಂದು ಹೇಳಬಹುದು ಈ ಎರಡು ಸ್ಥಲಗಳ ವಿಶಿಷ್ಟತ್ವವೆಂದರೆ ಭಕ್ತಿ ಭಾವ ಮತ್ತು ಆಚರಣೆಯ ಶುದ್ಧತೆ ಇವುಗಳೇ ಇರುತ್ತವೆ. ಇವೆರಡೂ ಸ್ಥಲಗಳಿಗೆ ಸಂಬಂಧಿಸಿದ ಏಕೋತ್ತರ ಶಟ್‌ಸ್ಥಲಗಳಲ್ಲಿಯ ಸ್ಥಲಗಳನ್ನು ತೆಗೆದುಕೊಂಡರೆ, ಅವೆಲ್ಲವೂ ಭಕ್ತಿ ಮತ್ತು ಕರ್ಮಗಳನ್ನು ವಿಶೇಷವಾಗಿ ಅನುಸರಿಸುತ್ತವೆಂಬುದನ್ನು ನಾವು ಬಹು ಸ್ಪಷ್ಟವಾಗಿ ಕಂಡುಹಿಡಿಯಬಹುದು. ಈ ಸ್ಥಗಳು ಯಾವವೆಂದರೆ— ಭಕ್ತಸ್ಥಲದಲ್ಲಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ಗುರುಕರುಣಸ್ಥಲ, ಲಿಂಗಧಾರಣಸ್ಥಲ, ವಿಭೂತಿಯ ಸ್ಥಲ, ರುದ್ರಾಕ್ಷಿಯ ಸ್ಥಲ. ಪಂಚಾಕ್ಷರಿಯ ಸ್ಥಲ, ಭಕ್ತಸ್ಥಲ, ಆಮೇಲೆ ಉಭಯಸ್ಥಲ, ತ್ರಿವಿಧ ಸಂಪತ್ತು ಸ್ಥಲ, ಚತುರ್ವಿಧ ಸಾರಾಯ ಸ್ಥಲ, ನಿರುಪಾಧಿಮಾಟಸ್ಥಲ, ಮತ್ತು ಸಹಜಮಾಟಸ್ಥಲವೆಂದು ೧೫ ಸ್ಥಲಗಳಿದ್ದು, ಇವುಗಳಲ್ಲಿ ಮೊದಲನೆಯ ಒಂಭತ್ತು ಭಕ್ತಸ್ಥಲಕ್ಕೆ ಯೋಗ್ಯನನ್ನಾಗಿ ಮಾಡಲು ಅವಶ್ಯವಾದ ಸ್ಥಲಗಳಿದ್ದು, ಅವುಗಳ ಮುಂದಿನ ಸ್ಥಲಗಳು ಭಕ್ತನು ಹ್ಯಾಗೆ ಆಚರಿಸಬೇಕೆಂಬುದನ್ನು ವಿವರಿಸುತ್ತವೆ. ಇವುಗಳಲ್ಲಿ ಕರ್ಮಯೋಗದ ತತ್ವಗಳಿರುತ್ತವೆ. ಮನುಷ್ಯನಲ್ಲಿ ಶ್ರೇಷ್ಠ ಪ್ರವೃತ್ತಿಗಳನ್ನು ಇವು ಹೆಚ್ಚಿಸಲು ಕಾರಣವಾಗುತ್ತವೆ. ಮಹೇಶ್ವರ ಸ್ಥಲಕ್ಕೆ ಸಂಬಂಧಪಟ್ಟ ಸ್ಥಲಗಳು ಒಂಭತ್ತು ಇವೆ. ಅವು ಯಾವವೆಂದರೆ– ಮಹೇಶ್ವರಸ್ಥಲ, ಲಿಂಗನಿಷ್ಠಾಸ್ಥಲ, ಪೂರ್ವಾಶ್ರಯನಿರಸನಸ್ಥಲ, ವಾಗದ್ವೈತನಿರಸನಸ್ಥಲ, ಅಷ್ಟತನುಮೂರ್ತಿನಿರಸನಸ್ಥಲ, ಶಿವಜಗನ್ಮಯಸ್ಥಲ, ಭಕ್ತದೇಹಿಕಲಿಂಗಸ್ಥಲ, ಎಂದು ಇರುತ್ತವೆ. ಇವುಗಳು ಲಿಂಗನಿಷ್ಠೆಯನ್ನು ಭಕ್ತಿಪುರಸ್ಸರವಾಗಿ ಹ್ಯಾಗೆ ಮಾಡಬೇಕೆಂಬುದನ್ನು ವಿವರವಾಗಿ ಹೇಳುತ್ತಾರೆ. ಹೀಗೆ ವಿವರಿಸುವಲ್ಲಿ ಜಗತ್ತು ತಾನು ಮತ್ತು ಇತರರು ಇವರೆಲ್ಲರೊಡನೆ ಭಕ್ತನು ಹ್ಯಾಗೆ ವ್ಯವಹರಿಸಬೇಕೆಂಬುದನ್ನು ಈ ಸ್ಥಲಗಳು ಸ್ಪಷ್ಟೀಕರಿಸುತ್ತವೆ. ಪಠಯೋಗದ ವಿಷಯಗಳು ಪ್ರಾಣಲಿಂಗಿ ಸ್ಥಲದಲ್ಲಿ ಬರುತ್ತವೆ. ಪ್ರಾಣಲಿಂಗಿಸ್ಥಲದ ಉದ್ದೇಶವು ಆತ್ಮಲಿಂಗವನ್ನು ಕಂಡುಹಿಡಿಯುವದೇ ಇದ್ದು ಇದರಲ್ಲಿ ಮನುಷ್ಯನ ಅಂತರಂಗದ ವಿಕಾಸತೆಯ ಮಾರ್ಗವನ್ನು ಮತ್ತು

ಆದರ ಶಕ್ತಿಯು ಹೆಚ್ಚುಗೆಯನ್ನು ವೀರಶೈವ ಷಟ್‌ಸ್ಥಲ ಶಾಸ್ತ್ರಕಾರರು ಬಹು ಚೆನ್ನಾಗಿ ವಿವರಿಸುತ್ತಾರೆ. ಇದರಲ್ಲಿ ಮನುಷ್ಯನು ತನ್ನ ಲಿಂಗಧ್ಯಾನವನ್ನು ಹ್ಯಾಗೆ ಮಾಡಬೇಕು, ಈ ಧ್ಯಾನದ ಮೂಲಕ ತನ್ನ ಅಂತರಂಗ ಶಕ್ತಿಗಳನ್ನು ಹ್ಯಾಗೆ ಹೆಚ್ಚಿಸಬೇಕು, ಇವೇ ಮೊದಲಾದ ಮಹತ್ವದ ಗೂಢ ವಿಷಯಗಳು ಈ ಸ್ಥಲದಲ್ಲಿ ಬರುತ್ತವೆ. ಜ್ಞಾನಯೋಗ ಮತ್ತು ರಾಜಯೋಗದ ತತ್ವಗಳು ಶರಣ ಮತ್ತು ಐಕ್ಯಸ್ಥಲಗಳಲ್ಲಿ ಬರುತ್ತವೆಂದು ಹೇಳಬಹುದು. ಈ ಪ್ರಕಾರ ಈ ಎಲ್ಲ ಯೋಗಮಾರ್ಗಗಳನ್ನು ಷಟ್‌ಸ್ಥಲ ಶಾಸ್ತ್ರದ ತತ್ವಗಳ ಪ್ರಕಾರ ಬೇರೆ ಬೇರೆ ಭಾಗಗಳಲ್ಲಿ ಸಂಬಂಧಪಡಿಸಬಹುದು. ಮತ್ತು ಈ ಷಟ್‌ಸ್ಥಲದ ಮೂಲಕ ಇವೆಲ್ಲವುಗಳು ಪರಸ್ಪರ ಸಹಾಯಕಾರಿಗಳಾಗಿ ಮನುಷ್ಯನ ಬಹಿರಂಗ ಮತ್ತು ಅಂತರಂಗಿಕ ಎಲ್ಲ ಬಗೆಯ ಗುಣಗಳನ್ನು ವಿಕಾಸಪಡಿಸುವದರಲ್ಲಿ ಹ್ಯಾಗೆ ಪರಿಣಮಿಸುತ್ತವೆಂಬುದನ್ನು ಬಹು ಸ್ಫುಟವಾಗಿ ವೀರಶೈವ ಧರ್ಮಗ್ರಂಥಕಾರರು ಆಯಾ ಸ್ಥಲಗಳಲ್ಲಿ ವಿವರಿಸುವದುಂಟು.

ಈ ಮೇರೆಗೆ ಈ ಎಲ್ಲ ಯೋಗಮಾರ್ಗಗಳು ಅಂದರೆ ಭಕ್ತಿ, ಕ್ರಿಯಾ, ಜ್ಞಾನ ಮತ್ತು ರಾಜಯೋಗ ಇವುಗಳ ತತ್ವಗಳನ್ನು ವೀರಶೈವ ಧರ್ಮಶಾಸ್ತ್ರಕಾರರು ಅಂಗೀಕರಿಸಿದರೂ ಅವರು ಇವುಗಳೆಲ್ಲವೂ ಭವಿಮಾರ್ಗಗಳೆಂದು ಭಾವಿಸಿ ಭಕ್ತಿಮಾರ್ಗಕ್ಕೆ ಉಚಿತವಾಗಿ ಬೇರೊಂದು ಶಿವಯೋಗ ಮಾರ್ಗವನ್ನು ಪ್ರಚುರಗೊಳಿಸಿದ್ದಾರೆ. ಭವಿಮಾರ್ಗವೆಂದರೆ ಭವಕ್ಕೆ ಅಂದರೆ ಪ್ರಪಂಚಕ್ಕೆ ಎಳಿಸತಕ್ಕವುಗಳೆಂತಲೇ ಇದರ ಅರ್ಥವು. ಮೇಲ್ಕಂಡ ಯೋಗಮಾರ್ಗಗಳ ಉದ್ದೇಶವು ಮೋಕ್ಷ ಮಾರ್ಗಕ್ಕೆ ಸಹಾಯಕಾರಿಯಾದವುಗಳೆಂದು ಆಯಾ ಮಾರ್ಗಪ್ರಚಾರಕರಿಂದ ನಿರೂಪಿಸಲ್ಪಟ್ಟರೂ ಅವುಗಳೆಲ್ಲವು ಲಿಂಗರಹಿತವಾಗಿ ಆಚರಿಸಲ್ಪಡುವದರಿಂದ ವ್ಯವಹಾರಕ್ಕೆ ಮಗ್ನ ಮಾಡುವದರಲ್ಲಿ ಅವು ಜರಗುವವೆಂದು ವೀರಶೈವ ಗ್ರಂಥಕಾರರ ಮತವಿದೆ. ಆದ್ದರಿಂದ ಅವರು ಈ ಸ್ಥಿತಿಯು ಉಂಟಾಗಬಾರದೆಂದು ಲಿಂಗಾಂಗ ಸಾಮರಸ್ಯ ಭಾವವನ್ನು ತಂದುಕೊಡುವ ಶಿವಯೋಗಾಚರಣೆಯನ್ನು ಪ್ರಚಾರಕ್ಕೆ ತಂದಿದ್ದಾರೆ. ಅವರು ಆ ಆಚರಣೆಯನ್ನೇ ತಮ್ಮ ಗ್ರಂಥಗಳಲ್ಲಿ ಬೋಧಿಸಿ ಉಳಿದ ಯೋಗ

ಮಾರ್ಗಗಳನ್ನು ಅವರು ತಮ್ಮ ವಚನಗಳಲ್ಲಿ ಟೀಕಿಸಿರುತ್ತಾರೆ. ಒಬ್ಬ ವಚನಕಾರನು ಈ ಯೋಗಗಳನ್ನು ಕುರಿತು ಹೀಗೆ ಆಕ್ಷೇಪಿಸಿರುವನು, ಏನೆಂದರೆ –

"ಲಂಬಿಕಾಯೋಗಗಳ ಡೊಂಬರಿಗೆ ಸರಿ ಎಂಬೆ. ಹಠಯೋಗಿಗಳಿಗೆ ಅಟಮಟಕಾರರೆಂದೆಂಬೆ. ಅಷ್ಟಾಂಗಯೋಗಿಗಳ ಕಷ್ಟಕರ್ಮಿಗಳೆಂಬೆ. ಪವನಯೋಗಿಗಳ ಪ್ರಪಂಚಿಗಳೆಂದೆಂಬೆ. ಲಯಯೋಗಿಗಳ ನಾಯಿಗಿಂತಕಡೆ ಎಂಬೆ. ಅದೇನು ಕಾರಣವೆಂದರೆ ಲಯಯೋಗವೆಂಬುದು ನಾನಾದರ್ಶನದಲ್ಲಿ ವರ್ತಿಸುವುದಾಗಿ ಅದನ್ನು ಶಿವಯೋಗಿಗಳು ಒಲ್ಲರು. ಮಂತ್ರಯೋಗವೆಂಬುದು ಸರ್ವರ ಸಂದೇಹಕ್ಕೆ ಕೊಲ್ಲುತಿಪ್ಪುದು. ಅದೇನು ಕಾರಣವೆಂದಡೆ ಮಂತ್ರವೇ ಲಿಂಗ,ಲಿಂಗವೇ ಮಂತ್ರವೆಂದರಿದು ಲಿಂಗನೆನಹು ಸಂಬಂಧಿಸಿಕೊಳಲರಿಯದೆ ಲಿಂಗ ವಿರಹಿತವಾಗಿ ಮಾಡುತಿರ್ಪವರಾಗಿ ಅದನು ಅಂಗಲಿಂಗ ಸಂಬಂಧಿಗಳು ಮೆಚ್ಚರು ನೋಡಾ. ರಾಜಯೋಗವೆಂಬುದು ಗಾಜುಗೋಜು ನೋಡಾ. ಅದನು ಲಿಂಗವಿರಹಿತರಾದ ಜ್ಞಾತೃ ಜ್ಞೇಯ ಜ್ಞಾನ ಒಂದಾದಲ್ಲಿ ಯೋಗವೆನುತಿಪ್ಪರಾಗಿ ಇವು ಒಂದು ಲಿಂಗಾಂಗದ ಪೆಜ್ಜೆಯಲ್ಲ. ಅದು ಕಾರಣ ಲಿಂಗನಿಷ್ಠರು ಮೆಚ್ಚರು. ಅದೇನು ಕಾರಣವೆಂದರೆ, ಲಿಂಗವ ತೆಗೆದರೆ ಲಿಂಗದೊಡನೆ ಪ್ರಾಣ ಪೋಗದಾಗಿ, ಅದೆಲ್ಲಿಯ ಯೋಗವಯ್ಯ ಭ್ರಾಂತಯೋಗ ? ಇದು ಕಾರಣ ನಿಮ್ಮ ಶರಣರು ಲಿಂಗಪ್ರಾಣಿಗಳು, ಪ್ರಾಣಲಿಂಗ ಸಂಬಂಧಿಗಳು ಪ್ರಸಾದಮುಕ್ತರು. ಈ ಮೂರು ಪ್ರಕಾರದಲ್ಲಿ ಕೂಡುತಿಪ್ಪರು ಶಿವಯೋಗಿಗಳು. ಅದು ಕಾರಣ ನಿಮ್ಮ ಶರಣರು ಸ್ವಾನುಭಾವ ಜ್ಞಾನ ಶುದ್ಧ ಶಿವಯೋಗದಲ್ಲಿ ಸ್ವರೂಪ ಜ್ಞಾನಿಗಳು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ."

ಈ ವಚನಕಾರನ ಅಭಿಪ್ರಾಯವೇನೆಂದರೆ, ಈ ಅನೇಕ ಯೋಗಗಳು ಮನುಷ್ಯನ ಶಕ್ತಿಯ ವಿಕಾಸತೆಯನ್ನು ಕೇವಲ ಪ್ರಪಂಚ ದೃಷ್ಟ್ಯಾ ಯಾವುದು ಶ್ರೇಷ್ಠವೋ ಅತ್ತ ಕಡೆಗೆ ಎಳೆಯುತ್ತವಾದ್ದರಿಂದ ಅವುಗಳು ಶಿವಯೋಗಕ್ಕೆ ಹೊರತಾದವು. ಆದರೆ ಶಿವಯೋಗದ ಮುಖ್ಯ ಧ್ಯೇಯವು ಲಿಂಗಾನುಭವವು. ಅಂದರೆ ಲಿಂಗದ ಶಕ್ತಿ ಮತ್ತು ಅದರ ಪ್ರಭಾವವನ್ನು ಮನುಷ್ಯನ ಒಳಗೂ ಹೊರಗೂ ಬೀರಿ ಅದರಲ್ಲಿಯೇ ಅವನು ಕಡೆಗೆ ಲಯ

ವಾಗುವದು ಇರುತ್ತದೆ. ಇದರ ಮುಖ್ಯ ಸಾಧನೆಗಳ ಉದ್ದೇಶವು ಲಿಂಗದ
ಕಳೆಯನ್ನು ತನ್ನ ಆಯಾ ಶಾರೀರಿಕ ಶಕ್ತಿಗಳಲ್ಲಿ ಬೆರಿಸುವದೇ ಇರುತ್ತದೆ.
ಆದರೆ ಈ ಮಾರ್ಗವನ್ನು ಮೇಲ್ಕಂಡ ಯೋಗಸಾಧನೆಗಳು ಅರುಹಿ ಕೊಡು
ವದಿಲ್ಲ. ಇದರ ಬದಲು ಅವು ಲಿಂಗ ವಿರಹಿತವಾಗಿ ಮನುಷ್ಯನನ್ನು ಸಂದೇ
ಹಕ್ಕಿಕ್ಕುತ್ತವೆ. ಮತ್ತು ಭವದಲ್ಲಿ ಬೀಳಿಸುತ್ತವೆ ಎಂದು ನಾವು ಮೇಲೆ ಉದ
ಹರಿಸಿದ ವಚನಕಾರನ ಭಾವವಿರುತ್ತದೆ.

ಈ ದೃಷ್ಟಿಯಿಂದ ಯೋಗಾಭ್ಯಾಸವನ್ನು ಖಂಡಿಸಿದ ಉಕ್ತಿಗಳು
ವಚನಕಾರರಲ್ಲಿ ಅನೇಕದಿರುತ್ತವೆ. ಆದರೆ ಈ ಪ್ರಕಾರ ಅಭ್ಯಾಸವನ್ನು
ನಿರಾಕರಿಸಿದವರು ವೀರಶೈವರು ಮಾತ್ರವಲ್ಲದೆ ಇನ್ನೂ ಅನೇಕರುಂಟು.
ಉದಾ– ಬುದ್ಧದೇವನು ಪ್ರಪಂಚವನ್ನು ಉಪೇಕ್ಷಿಸಿ, ಪರಮಾತ್ಮನ ಮಾರ್ಗ
ವನ್ನು ಶೋಧಿಸಬೇಕೆಂದು ಅನೇಕ ವರ್ಷ ತಪಸ್ಸು ಮಾಡಿದನು. ಆದರೆ
ಅವನಿಗೆ ಅದರಲ್ಲಿ ಶಾಂತತೆಯು ದೊರೆಯಲಿಲ್ಲ. ಮತ್ತು ಕಡೆಗೆ ಅವನು
ಆ ಮಾರ್ಗವನ್ನು ತ್ಯಜಿಸಿ ಕಡೆಗೆ ತನ್ನ ಬೌದ್ಧ ಧರ್ಮವನ್ನು ನೈತಿಕ ವಿಶಾಲ
ತತ್ತ್ವಗಳನ್ನು ಅವಲಂಬಿಸಿ ಪ್ರಸ್ಥಾಪಿಸಿದನು. ಆಗ ಅದು ಬಹುಜನ ಸಮಾಜ
ದಲ್ಲಿ ಬಹು ನಿಬಿಡವಾಗಿ ಹಬ್ಬಿತು. ಇದರಂತೆ ವೀರಶೈವರು ಯೋಗಾಭ್ಯಾ
ಸದ ತಪ್ಪು ಪ್ರವೃತ್ತಿಗಳ ಮೂಲಕ ಅದನ್ನು ನಿರಾಕರಿಸಿದರೂ, ಅದರಲ್ಲಿ
ಅಡಕವಾದ ಶ್ರೇಷ್ಠ ಮಾನಸಿಕ ಅಭ್ಯುದಯಕ್ಕೆ ಕಾರಣವಾಗುವ ಸಾಧನೆಗ
ಳನ್ನು ಮಾತ್ರ ಅವರು ತೊರೆದುಬಿಟ್ಟಿಲ್ಲ. ಅವರು ಹೀಗೆ ತೊರೆಯುವದರ
ಬದಲು ಅವುಗಳು ಶಿವಾನುಭವಕ್ಕೆ ಹ್ಯಾಗೆ ಸಹಾಯಕಾರಿಯಾಗುವವೆಂಬು
ದನ್ನು ಕಂಡುಹಿಡಿದು ಆ ರೀತಿ–ಷಟ್ಸ್ಥಲ ಮಾರ್ಗದ ರಚನೆಯನ್ನು ಮಾಡಿ
ರುವರು. ವೀರಶೈವಧರ್ಮತತ್ತ್ವಶೋಧ ಮಾಡಲಪೇಕ್ಷಿಸುವವರು ಶಿವಶರಣರು
ಈ ರೀತಿಯಾಗಿ ಹ್ಯಾಗೆ ತಮ್ಮ ಆಚರಣೆಗಳ ಸ್ವರೂಪವನ್ನು ಪಲ್ಲಟಿಸಿರುವರು
ಎಂಬುದನ್ನು ಕಂಡುಹಿಡಿಯುವದು ಅತ್ಯಂತ ಮಹತ್ವದ್ದಾಗಿದೆ.

ಯೋಗ ಸಾಧನೆಗಳು ಮನುಷ್ಯನ ಶಕ್ತಿಗಳನ್ನು ಪ್ರಬಲಗೊಳಿಸಿ ಅವ
ನಲ್ಲಿ ಅದ್ಭುತ ಕಾರ್ಯಗಳನ್ನು ಮಾಡುವ ಶಕ್ತಿಯನ್ನು ಉಂಟುಮಾಡುವ
ವೆಂದು ತೋರಿಬರುತ್ತದೆ. ಪಾಶ್ಚಿಮಾತ್ಯ ಮಾನಸ ಶಾಸ್ತ್ರಜ್ಞರು ಈ ಕಡೆಗೆ

ತಮ್ಮ ಲಕ್ಷ್ಯವನ್ನು ಇತ್ತಿತ್ತ ಹೊರಳಿಸಿ ಅವರೂ ಕೂಡ ತಮ್ಮ ಮನಸ್ಸಿನ ಪ್ರಾಬಲ್ಯದಿಂದ ಅನೇಕ ಅದ್ಭುತಗಳನ್ನು ಮಾಡುವದುಂಟು. ಆದರೆ ಯೋಗಾಭ್ಯಾಸದ ಈ ಪ್ರಯೋಗಗಳನ್ನು ಶಿವಶರಣರು ತಮ್ಮ ಉಕ್ತಿಗಳಲ್ಲಿ ಶೀಘ್ರವಾಗಿ ಖಂಡಿಸಿರುವರು. ಈ ಬಗೆಯ ಅಮಾನುಷ ಶಕ್ತಿಗಳ ವಿಕಾಸಕ್ಕೆ ಬಹು ಜನರು ಒಲಿದವರಾಗಿ ಅವುಗಳನ್ನು ಸಾಧಿಸಲಿಕ್ಕೆ ಪ್ರವೃತ್ತರಾಗುವದುಂಟು. ಇವರು ಈ ಉದ್ದಿಶ್ಯವಾಗಿ ತಮ್ಮ ಶರೀರವನ್ನು ಅನೇಕ ಅನೇಕ ಬಾಧೆಗಳಿಗೆ ಒಳಗು ಮಾಡುತ್ತಾರೆ. ಮತ್ತು ಅನೇಕ ವರ್ಷ ನಿರ್ಜನ ಪ್ರದೇಶದಲ್ಲಿದ್ದು ತಪಸ್ಸೆಂದು ಆಚರಿಸುವರು. ಆದರೆ ಈ ಬಗೆಯ ಮಾರ್ಗವನ್ನು ಮತ್ತು ರೀತಿಯನ್ನು ವೀರಶೈವ ವಚನಕಾರರು ಬಹು ಸ್ಪಷ್ಟ ರೀತಿಯಿಂದ ನಿರಾಕರಿಸಿರುವರು. ಗೋರಕ್ಷನು ಮೊದಲು ಈ ಮಾರ್ಗವನ್ನು ಆಚರಿಸಿ, ಅನೇಕ ಸಿದ್ಧಿಗಳನ್ನು ಮಾಡಿಕೊಂಡು ಕಡೆಗೆ ಅಲ್ಲಮ ಪ್ರಭುವಿನಿಂದ ಉಪದೇಶವನ್ನು ಹೊಂದಿ ಶಿವಯೋಗ ಮಾರ್ಗವನ್ನು ಅವಲಂಬಿಸಿದನೆಂಬ ಐತಿಹ್ಯವಿದೆ. ಅವನ ವಚನಗಳೂ ಉಪಲಬ್ಧವಿದ್ದು ಅವುಗಳೊಂದರಲ್ಲಿ ಅವನು ಅನ್ನುವದೇನಂದರೆ–

"ರಸವಾದಂಗಳು ಕಲಿತಲ್ಲಿ ಲೋಹ ಸಿದ್ಧಿಯಲ್ಲದೆ, ದೇಹಸಿದ್ಧಿಯಾದುದಿಲ್ಲ. ನಾನಾ ಕಲ್ಪಯೋಗ ಅದೃಶ್ಯ ಕರಣಂಗಳ ಕಲಿತಲ್ಲಿ ಕಾರ್ಯಸಿದ್ಧಿಯಲ್ಲದೆ, ಆತ್ಮಸಿದ್ಧಿಯಾದುದುಂಟೇ ? ನಾನಾ ವಾಗ್ವಾದಗಳಿಂದ ಹೋರಿ ಮಾತಿನ ಮಾಲೆಯಾಯಿತ್ತಲ್ಲದೆ, ಆತ್ಮ ವಿಹಿತವಾದುದಿಲ್ಲ. ನೀ ನಾ, ಎಂದಲ್ಲಿ, ನೀನು ನಾನಾದೆಯಲ್ಲದೆ, ನಾನು ನೀನಾದುದಿಲ್ಲ. ಗೋರಕ್ಷಪಾಲಕ ಮಹಾಪ್ರಭುಸಿದ್ಧ ಸೋಮನಾಥಲಿಂಗ ನೀನಾನಾದೆಯಲ್ಲದೆ ನಿಜವಾಗಿ ನಾ ಆ ಲಿಂಗವೆಯಾದುದಿಲ್ಲ."

ಈ ವಚನವು ಯೋಗಶಾಸ್ತ್ರ ಮತ್ತು ಶಿವಯೋಗ ತತ್ವಗಳಲ್ಲಿಯ ಮಹದಂತರವನ್ನು ಬಹು ಚೆನ್ನಾಗಿ ವಿವರಿಸುತ್ತದೆ. ಯೋಗಶಾಸ್ತ್ರದ ಅಭ್ಯಾಸದ ಮೂಲಕ ಕಾಯದ ಗುಣಗಳು ಪ್ರಕಟವಾಗಬಹುದು, ಅದರ ಮೂಲಕ ಅನೇಕ ಶಕ್ತಿಗಳು ಬಲಗೊಳ್ಳಬಹುದು. ಆದರೆ ಇವೆಲ್ಲಕ್ಕೂ

ಸ್ಥಾನವಾದ ಧ್ಯಾನ ಆತ್ಮಪ್ರೀ ಅದರ ಸಿದ್ಧಿಯು ಮಾತ್ರ ದೊರೆಯಲಾರದು. ಮತ್ತು ಯೋಗಾಭ್ಯಾಸದ ಮೂಲಕ "ನೀನು ನಾನಾದೆಯಲ್ಲದೆ, ನಾನು ನೀನಾದುದಿಲ್ಲ" ಎಂದು ಭಾವಗರ್ಭಿತವಾಗಿ ಗೋರಕ್ಷನು ನುಡಿದು ಈ ಬಗೆಯ ಯೋಗಾಭ್ಯಾಸದ ದುರುಪಯೋಗವನ್ನು ವರ್ಣಿಸಿರುತ್ತಾನೆ.

ಶಿವಯೋಗಾಭ್ಯಾಸವನ್ನು ನಡಿಸುವ ರೀತಿಯನ್ನು ವೀರಶೈವ ವಚನಕಾರರು ತಮ್ಮ ಅಸಂಖ್ಯ ವಚನಗಳಲ್ಲಿ ವಿವರಿಸಿರುವರು. ಮನುಷ್ಯನ ಶಿಕ್ಷಣದ ನಡೆ, ನುಡಿ, ಕ್ರಿಯೆಯಲ್ಲಿ ಅದರ ಪ್ರಕಾಶವನ್ನು ಹೊರಗೆಡವುತ್ತ ಅವನು ವ್ಯವಹರಿಸುವದೇ ನಿಜವಾದ ಯೋಗವು. ಇದೇ ಶಿವಯೋಗವು ಎಂದು ಅವರ ಮುಖ್ಯ ವಿಚಾರವು. ಬಾಹ್ಯ ಲೌಕಿಕ ಅದ್ಭುತ ಕ್ರಿಯೆಗಳಿಗೆ ಅವರು ಮಹತ್ವವಿತ್ತಿಲ್ಲ. ಬ್ರಾಹ್ಮಣ ಧರ್ಮಶಾಸ್ತ್ರಗಳು ಷೋಡಶ ಸಂಸ್ಕಾರಗಳು, ಯಜ್ಞ ಕರ್ಮಾದಿಗಳು, ಹೋಮ ಹವನಾದಿಗಳು, ಈ ಬಗೆಯ ಅಸಂಖ್ಯ ಕರ್ಮಗಳಿಗೆ ಮಹತ್ವವನ್ನು ಕೊಟ್ಟು ಧರ್ಮ ಗ್ರಂಥಗಳ ಸಂಖ್ಯೆಯನ್ನು ಅಪಾರವಾಗಿ ಹೆಚ್ಚಿಸಿರುವವು. ಯೋಗಾಭ್ಯಾಸವು ಅಲೌಕಿಕ ಸಾಧನೆಗಳಿಗೆ ಮನುಷ್ಯನ ಮನಸ್ಸನ್ನು ಎಳೆಸಿರುತ್ತದೆ. ಆಗಮ ಗ್ರಂಥಗಳಾದರೂ ಮೂರ್ತಿಸ್ಥಾಪನೆ ಅವುಗಳ ಪೂಜಾದಿ ಕರ್ಮಗಳು, ಇನ್ನೂ ಇತರೇ ಅನೇಕ ಆಚಾರ ವಿಚಾರಗಳನ್ನು ಬಹುವಾಗಿ ಬೆಳೆಸಿವೆ. ಈ ಎಲ್ಲ ಪ್ರವೃತ್ತಿಗಳು ಧರ್ಮದ ಹೆಚ್ಚುಗೆ ಎಂದು ಅನ್ನಲಿಕ್ಕೆ ಬರಲಾರದು. ಆದರೆ ಬಸವಾದಿ ಪ್ರಮಥರ ಕಾಲಕ್ಕೆ ಈ ಬಗೆಯ ಬಾಹ್ಯ ವರ್ತನೆಗಳಿಗೆ ಮಹತ್ವವಿರಲಿಲ್ಲ. ಆಗ ನಿಜವಾದ ಉಚ್ಚ ಧಾರ್ಮಿಕ ಭಾವವು ಉಕ್ಕಿಗೊಂಡಿತು. ಮತ್ತು ಮನುಷ್ಯನ ಮಾನಸಿಕ ಮತ್ತು ನೈತಿಕ ಜಾಗ್ರತೆಗೆ ಕಾರಣವಾದ ಧರ್ಮಾಚರಣೆ ಯಾವುದೆಂಬುದರ ಬಗ್ಗೆ ಸಮಾಜದಲ್ಲಿ ಚರ್ಚೆಯು ಹುಟ್ಟಿತು ಇದಕ್ಕೋಸ್ಕರವೇ ಶಿವಾನುಭವ ಮಂಟಪ ಸ್ಥಾಪನೆಯು ಆಯಿತು. ಆ ಕಾಲಕ್ಕೆ ಪೂರ್ವದ ಆಗಮ ಶಾಸ್ತ್ರ ಮತ್ತು ವೈದಿಕ ಶಾಸ್ತ್ರ ಇವುಗಳಲ್ಲಿಯ ಶ್ರೇಷ್ಠ ತತ್ವಗಳಾವವೆಂಬುದು ಶೋಧಿತವಾಗಿ ಅವುಗಳ ಮೇಲೆ ಶಿವಾನುಭವವು ನಿಲ್ಲಿಸಲ್ಪಟ್ಟಿತು.

ಈ ಶಿವಯೋಗವು ಷಟ್‌ಸ್ಥಲಾತ್ಮಕವಾಗಿದೆ. ಇದರ ಪ್ರಕಾರ ದೇಹವನ್ನು ಕ್ಲೇಶಪಡಿಸುವ ಕಾರಣವಿಲ್ಲ. ಇಂದ್ರಿಯಗಳನ್ನು ಕಷ್ಟಪಡಿಸುವದನ್ನು ವಚನಕಾರರು ಬಹಳ ಹಳಿದಿರುವರು. ಆದರೆ ನೈತಿಕಾಚಾರಕ್ಕೆ ಬಹಳ ಮಹತ್ವ ಕೊಟ್ಟಿರುವರು. ಬಸವೇಶ್ವರನು ಒಂದು ಕಡೆಗೆ ಅನ್ನುವದೇನೆಂದರೆ

"ಇಂದ್ರಿಯ ನಿಗ್ರಹ ಮಾಡಿದರೆ ಹೊಂದುವವು ದೋಷಂಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು. ಸತಿ ಪತಿ ರತಿ ಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು ? ಸತಿ ಪತಿ ರತಿ ಸುಖಭೋಗೋಪಭೋಗ ಬಿಟ್ಟರೆ ಸಿಂಧು ಬಲ್ಲಾಳರು ? ನಿಮ್ಮ ಮುಟ್ಟಿ ಪರಧನ ಪರಸ್ತ್ರೀಗಳಿಗಳುಪಿದಡೆ ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವಾ."

ಹೀಗೆ ಶಿವಯೋಗ ಸಂಪನ್ನರು ಇಂದ್ರಿಯರ ದಮನ ಮಾಡಬೇಕೆಂದೂ ಅವುಗಳನ್ನು ಹಿಂಸೆ ಮಾಡದೆ ಪ್ರಸಾದ ರೂಪವಾಗಿ ಅವುಗಳ ಕಾರ್ಯಗಳನ್ನು ಪ್ರವೃತ್ತಿಗೊಳಿಸಿ "ಲಿಂಗ ಭೋಗೋಪಭೋಗಿಗಳಾಗಿರತಕ್ಕದ್ದು." ವೀರಶೈವರು ಕಂಡು ಹಿಡಿದಿರುವ ಇದರ ವಿವರಗಳು ಬಹು ಮಹತ್ತರವಾಗಿವೆ. ಈ ತತ್ವ ಅಥವಾ ಮಾರ್ಗವನ್ನು ಅನುಸರಿಸಿದ್ದರ ಮೂಲಕ ಅವರು ನೀತಿ ನಡತೆ ಎಂಬುವದಕ್ಕೆ ಬಹಳ ಮಹತ್ವ ಕೊಟ್ಟಿದ್ದಾರೆ. ಜನರೊಡನೆ ಹ್ಯಾಗೆ ವರ್ತಿಸಬೇಕು, ಇಂದ್ರಿಯಗಳ ವ್ಯಾಪಾರವನ್ನು ಹ್ಯಾಗೆ ಸಾಗಿಸಬೇಕು ಎಂಬುವದನ್ನು ಅವರು ನಿರ್ಧರಿಸಬೇಕಾಯಿತು. ಆದ್ದರಿಂದ ವಚನಕಾರರಲ್ಲಿ ನೀತಿಯು ವಚನಗಳಿಗೆ ಬಹು ಮಹತ್ವದ ಸ್ಥಾನವು ಕೊಡಲ್ಪಟ್ಟಿದೆ. ಈ ಒಂದು ಮಹತ್ವದ ವಾಙ್ಮಯವೇ ಹುಟ್ಟಿತೆಂದು ಹೇಳಬಹುದು.

ನೈತಿಕಾಚಾರಯುಕ್ತ ಶಿವಯೋಗದ ಮೂಲಕ ಮನುಷ್ಯನ ಶಕ್ತಿಗಳು ತಾವಾಗಿಯೇ ಪ್ರಕಟವಾಗುತ್ತವೆಂದು ವಚನಕಾರರ ತಿಳುವಳಿಕೆ ಇದೆ. ಆದ್ದರಿಂದ ಪ್ರಪಂಚವನ್ನು ಬಿಟ್ಟುಕೊಟ್ಟು ಸಾಧಕನು ಅರಣ್ಯವಾಸಿಯಾಗಿ ಕಠಿಣ ತಪಸ್ಸನ್ನು ಆಚರಿಸುವದು ಅವಶ್ಯವಿಲ್ಲ. ಮನುಷ್ಯನು ಜಗತ್ತಿನಲ್ಲಿದ್ದು ತನ್ನ ಕಾಯಕವನ್ನು ಸರಿಯಾಗಿ ಜರುಗಿಸುತ್ತ ಹೋದಲ್ಲಿ ಯಾವ ಪ್ರತ್ಯವಾಯ

ವಿಲ್ಲ. ಇದರಲ್ಲಿಯೇ ಶಿವಯೋಗವಿದೆಂದು ಅವರು ತಿಳಿಯುತ್ತಾರೆ. ಮಹಾ ಜ್ಞಾನಿಯಾದ ಕಾಡಸಿದ್ಧೇಶ್ವರರು ಈ ಬಗ್ಗೆ ಹೇಳಿರುವದೇನೆಂದರೆ—

"ಇಂತಪ್ಪ ಭೇದವ ತಿಳಿಯದೆ ಪುರಾತನ ಪುರಾತನರ ವಚನವ ನೋಡಿ, ಕೇಳಿ ಹೊನ್ನು, ಹೆಣ್ಣು, ಮಣ್ಣನು ಬಿಟ್ಟು ಪ್ರಪಂಚ ಬಿಟ್ಟೆವು ಎಂಬಿರಿ. ಬಿಟ್ಟ ಪರಿಯ ಹೇಳಿರಯ್ಯ. ಹೊನ್ನಲ್ಲವೇ ಆತ್ಮನು ? ಹೆಣ್ಣಲ್ಲವೇ ಮನಸ್ಸು? ಮಣ್ಣಲ್ಲವೇ ಪೃಥ್ವಿ? ತತ್ವಂಶಿಕವಾದ ದೇಹವು? ಇಂತಪ್ಪ ತ್ರಿವಿಧ ಹೊನ್ನು, ಹೆಣ್ಣು, ಮಣ್ಣು, ಮಣ್ಣನೆ ಒಳಗಿಟ್ಟುಕೊಂಡು ಬಾಹ್ಯದ ಹೊನ್ನು, ಹೆಣ್ಣು, ಮಣ್ಣನೆ ಬಿಟ್ಟರೆ ಬಿಟ್ಟಂತಾಯಿತ್ತೆ ಎಲಾ ಮರುಳು ಮಾನವರಿರಾ ? ದೇಹವ ದಗ್ಧವ ಮಾಡಬೇಕೆಂದು ಅನ್ನ ಉದಕವ ಬಿಟ್ಟು ಅರಣ್ಯದಲ್ಲಿಗೆ ಹೋಗಿ ಕಂದಮೂಲ ಪರ್ಣಾಹಾರವ ಭಕ್ಷಿಸಿ ತನುವ ಒಣಗಿಸಿದರೇನು ? ದೇಹ ದಗ್ಧವಾದಂತಾಯಿತ್ತೆ ? ಆಗದು. ಹುತ್ತದ ಮೇಲೆ ಬಡಿದು ಸರ್ಪವ ಕೊಂದಂತಾಯಿತಲ್ಲದೆ ದೇಹದಗ್ಧವಾಗಲರಿಯದು. ಎಲೆ ಮರುಳು ಮಾನವರಿರಾ, ಅದೇತೆಂದೊಡೆ ಸುಜ್ಞಾನೋದಯವಾಗಿ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಯಾದ ಶಿವಶರಣರ ದೇಹವು ಜ್ಞಾನಾಗ್ನಿಯಲ್ಲಿ ದಗ್ಧವಾಯಿತ್ತಲ್ಲದೆ ಉಳಿದ ಜೀವಾತ್ಮರ ದೇಹವು ದಗ್ಧವಾಗಲರಿಯದು. ದೇಹದ ಗುಣವ ಬಿಡಬೇಕೆಂಬಿರಿ. ಬಿಡಲಿಕ್ಕೇನು ಕಟ್ಟಿದ ಪಶುಗಳೇ ? ಬಿಡಲಿಕ್ಕೇನು ಪಕ್ಷಿಯ ಮರಿಗಳೇ ? ಕಣ್ಣಿಗೆ ಕಾಣಿಸದ ಕೈಗೆ ಸಿಕ್ಕದ ಗುಣಂಗಳಂ ಬಿಡಬೇಕೆಂಬಿರಿ. ಇದಕ್ಕೆ ದೃಷ್ಟ. ಸೂರ್ಯನ ಬಿಂಬ ಜಲದಲ್ಲಿ ಕಾಣುವದು. ಆ ಬಿಂಬ ಹಿಡಿಯಬಲ್ಲರೆ ಗುಣಬಿಟ್ಟರೆಂಬೆ. ಜ್ಯೋತಿಯ ಪ್ರಭೆಯ ಕಡೆಯಿಕ್ಕಿ ತೆಗೆದು ಹಿಡಿಯಬಲ್ಲರೆ ಗುಣಬಿಟ್ಟರೆಂಬೆ. ದೇಹದೊಳಗಣ ಪ್ರಾಣವ ಬಹಿಷ್ಕರಿಸಿ ಹಿಡಿಯಬಲ್ಲರೆ, ಗುಣಬಿಟ್ಟರೆಂಬೆ. ಇಂತೀ ಭೇದವ ತಿಳಿಯದೆ ತನು ಮನವ ಬಳಲಿಸಿ ಭವದತ್ತ ಮುಖವಾಗಿ ಹೋಗುವ ಹೇಸಿ ಮೂಳರ ಕಂಡು ನಾಚಿತ್ತಯ್ಯ ಎನ್ನ ಮನವು ಕಾಡಿನೊಳಗಾದ ಶಂಕರ ಪ್ರಿಯ ಚೆನ್ನ ಕದಂಬಲಿಂಗ ನಿರ್ಮಾಯ ಪ್ರಭುವೆ."

ಇದರಲ್ಲಿ ಕಾಡಸಿದ್ಧೇಶ್ವರರು ಅತ್ಯಂತ ಸ್ಪಷ್ಟ ಶಬ್ದಗಳಿಂದ ಶಿವಯೋಗದ ಮರ್ಮವನ್ನು ವಿಸ್ತರಿಸಿರುವರು. ಹೀಗೆ ಶಿವಶರಣರು ಶಿವಯೋಗದಲ್ಲಿ ಆತ್ಮಜ್ಞಾನ ಸಾಧನೆ ಎಂಬುದನ್ನು ಮುಖ್ಯವಾಗಿಟ್ಟುಕೊಂಡು ಷಟಸ್ಥಲ ಅಷ್ಟಾವರಣ, ಏಕೋತ್ತರ, ನೈತಿಕಾಚಾರ ಮೊದಲಾದ ವಿಷಯಗಳನ್ನು ಜಗತ್ತಿನಲ್ಲಿ ಸ್ಫುಟವಾದ ಶಬ್ದಗಳಿಂದ ಬೋಧಿಸಿರುವರು. ಮತ್ತು ಅದರಂತೆ ಆಚರಿಸಿ ತೋರಿಸಿರುವರು. ಇವುಗಳ ಮರ್ಮವನ್ನು ಕಂಡುಹಿಡಿಯುವದೇ ವೀರಶೈವರ ಈಗಿನ ಮುಖ್ಯ ಕಾರ್ಯವಾಗಿರುತ್ತದೆ.

(ಶಿವಾನುಭವ ಸಂಪುಟ ೫ ಸಂಚಿಕೆ ೧೧ ಮತ್ತು ೧೨ರಿಂದ)

# ಕಾಯಕದ ಉಗಮ

ಮನುಷ್ಯನು ತನ್ನ ಮನಸ್ಸು ಬುದ್ಧಿ, ಆಚರಣೆ ಇವುಗಳನ್ನು ಹೇಗೆ ವಿಕಾಸಮಾಡಿಕೊಳ್ಳಬೇಕೆಂಬ ವಿಷಯವಾಗಿ ಶಿವಶರಣರು ಆಳವಾಗಿ ವಿಚಾರ ಮಾಡಿದ್ದು ಕಂಡುಬರುತ್ತದೆ. ಭಾರತದ ಯಾವ ಧರ್ಮಪದ್ಧತಿಯೂ ಕೂಡ ಈ ವಿಷಯಗಳ ಬಗ್ಗೆ ಇವರಷ್ಟು ದೀರ್ಘ ವಿಚಾರಮಾಡಿದ್ದು ತೋರಿ ಬರುವದಿಲ್ಲ. ಉಪನಿಷತ್ಕಾರರು ಕೇವಲ ಆಧ್ಯಾತ್ಮಿಕವಾಗಿಯೂ ಭಕ್ತಿ ಪಂಥದವರು ಕೇವಲ ಭಾವನೆಯ ಉಚ್ಚಸ್ಥಿತಿಯನ್ನು ಉಂಟುಮಾಡಿಕೊಳ್ಳು ವದಕ್ಕಾಗಿಯೂ ಯೋಗವಿದರು ಸ್ಥಿರ ಮನಸ್ಸನ್ನುಂಟು ಮಾಡುವದಕ್ಕಾ ಗಿಯೂ ದೀರ್ಘವಾಗಿ ಚರ್ಚೆಗಳನ್ನು ನಡಿಸಿದ್ದು ಕಂಡುಬರುತ್ತದೆ. ಆದರೆ ಶಿವಶರಣರು ನಿತ್ಯದ ಕಾರ್ಯಗಳನ್ನು ಮಾಡುವಲ್ಲಿ ಜನರಕೂಡ ಹೇಗೆ ವರ್ತಿಸಬೇಕು, ನೀತಿಯಿಂದ ತಾವು ಹೇಗೆ ನಡೆಯಬೇಕು, ಇವೇ ಮೊದ ಲಾದ ವಿಷಯಗಳನ್ನು ಕುರಿತು ಹೆಚ್ಚಾಗಿ ವಿವೇಚಿಸಿ ಅವುಗಳ ಬಗ್ಗೆ ವಚನಗಳನ್ನು ರಚಿಸಿದ್ದಾರೆ. ಇವು ಮುಖ್ಯವಾಗಿ ಭಕ್ತ ಮಹೇಶ್ವರ ಸ್ಥಳ ಗಳಲ್ಲಿರುವದು ಕಂಡುಬರುತ್ತದೆ. ಈ ತರದ ವಚನಗಳು ಪ್ರಸಾದಿ ಪ್ರಾಣ ಲಿಂಗ ಮೊದಲಾದವುಗಳಲ್ಲಿ ಕಂಡುಬಂದರೂ ಇವು ಆಗ ಅಂತರ್ಯ ಉಚ್ಚ ತರವಾದ ಆಚರಣೆಗಳನ್ನು ನಿರೂಪಿಸುತ್ತವೆ. ಹೀಗೆ ಶಿವಶರಣರು ನೀತಿ ವ್ಯವಹಾರ ಇವುಗಳ ವಿಷಯವಾಗಿ ಬಹು ಆಳವಾಗಿ ವಿವೇಚನೆ ಮಾಡಿದ್ದು ಕಂಡು ಬರುತ್ತದೆ.

ಇಂಥ ಆಚರಣೆಗಳಲ್ಲಿ ಶಿವಶರಣರು ಕಾಯಕಕ್ಕೆ ಬಹು ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ನೀತಿ ವ್ಯವಹಾರ ಈ ವಿಷಯಗಳ ಬಗ್ಗೆ ಇತರ ಮತಸ್ಥರು ಲಕ್ಷಿಸಿದ್ದು ಕಂಡು ಬಂದರೂ ಅವರಲ್ಲಾರೂ ಕಾಯ ಕದ ವಿಷಯವಾಗಿ ವಿವೇಚಿಸಿಲ್ಲ. ಇದಕ್ಕೆ ಒಂದು ಬಲವತ್ತರ ಕಾರಣವೂ ಇರುತ್ತದೆ.

ಕಾಯಕವೆಂದರೆ ಕೆಳಗಿನ ವರ್ಣದವರು ಮಾಡುತ್ತಿರುವ ಉದ್ಯೋಗವೆಂದು ಉಚ್ಚವರ್ಣದವರು ಭಾವಿಸಿರುತ್ತಾರೆ. ಬ್ರಾಹ್ಮಣ ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಿದ್ದು ಕಾಯಕವನ್ನು ಶೂದ್ರರು ಮಾಡತಕ್ಕದ್ದೆಂದು ಬ್ರಾಹ್ಮಣ ಧರ್ಮಶಾಸ್ತ್ರಕಾರರು ತಿಳಿಸಿದ್ದಾರೆ. ಒಂದುವೇಳೆ ಬ್ರಾಹ್ಮಣರು ಕಾಯಕವನ್ನು ಮಾಡಿದ್ದಾದರೆ ಅವರು ಬ್ರಾಹ್ಮಣತ್ವದಿಂದ ಚ್ಯುತಿಯನ್ನು ಹೊಂದುವರು. ಒಕ್ಕಲುತನ, ಕೈಗಾರಿಕೆ ಇವುಗಳನ್ನು ಶೂದ್ರರು ಮಾತ್ರ ಮಾಡಬೇಕೇ ಹೊರತು ಮೇಲಿನ ಮೂರು ವರ್ಣದವರು ಮಾಡಕೂಡದೆಂಬ ನಿರ್ಬಂಧಗಳು ಅವರಲ್ಲಿರುತ್ತವೆ.

ವೀರಶೈವರ ಆಗಮ ಗ್ರಂಥಗಳಲ್ಲಿಯೂ ಕೂಡ ಇದೇ ತರದ ನಿಯಮಗಳಿರುವದು ಕಂಡುಬರುತ್ತದೆ. ಪಾರಮೇಶ್ವರಾಗಮದಲ್ಲಿ ವೀರಶೈವನಾದವನು ಒಕ್ಕಲುತನ ಮಾಡಕೂಡದೆಂಬ ಆಜ್ಞೆ ಇದೆ. ಈ ಆಗಮವು ವೀರಶೈವರಿಗೆ ಆಧಾರ ಗ್ರಂಥವೆಂದು ತಿಳಿಯಲ್ಪಟ್ಟಿದೆ.

ಇದೇ ಪ್ರಕಾರ ಬೌದ್ಧ, ಜೈನ, ಸನ್ಯಾಸಿಗಳೂ ಕೂಡ ಜನತೆಯಿಂದ ದೂರಾಗಿ ಭಿಕ್ಷೆಯನ್ನು ಬೇಡುತ್ತ ತಮ್ಮ ನಿರ್ವಾಹ ಸಾಗಿಸಬೇಕೆಂದು ಅವರಲ್ಲಿ ನಿಯಮಗಳಿವೆ. ಅವರು ವ್ಯಾಪಾರೊದ್ಯೋಗಗಳಲ್ಲಿ ಎಂದೂ ತೊಡಗಬಾರದೆಂದಿದೆ. ಭಾರತದಲ್ಲಿರುವ ಉಳಿದ ಎಲ್ಲ ತರದ ವಿರಕ್ತಾಶ್ರಮಿಗಳೂ, ಸನ್ಯಾಸಿಗಳೂ, ವೈರಾಗಿಗಳೂ ಕಾಯಕಗಳನ್ನು ಮಾಡುತ್ತಿರುವದು ಕಂಡು ಬರುವದಿಲ್ಲ.

ಈ ಸ್ಥಿತಿಯು ಭಾರತದಲ್ಲಿರುವದರಿಂದ ಇಲ್ಲಿ ನಿರುದ್ಯೋಗಿಗಳ ವರ್ಗವು ಬಹಳ ದೊಡ್ಡದಾಗಿರುತ್ತದೆ. ಆದರೆ ಇದಕ್ಕೆ ಅಪವಾದವಾಗಿರುವವರು ವೀರಶೈವರು ಮಾತ್ರ ಇರುತ್ತಾರೆ.

ಈ ಸ್ಥಿತಿಯೂ ಪುರಾತನಕಾಲದಲ್ಲಿ ಗ್ರೀಕ, ರೋಮ ಮೊದಲಾದ ದೇಶಗಳಲ್ಲಿಯೂ ಕೂಡ ರೂಢವಾಗಿತ್ತು. ಆ ಕಾಲದಲ್ಲಿ ಕೈ ಕೆಲಸಗಳಿಗೆ

ಈ ದೇಶಗಳಲ್ಲಿ ಧನಕ್ಕೂ ಮಹತ್ವವು ಇರಲಿಲ್ಲ. ಗ್ರೀಸದೇಶದಲ್ಲಿ ಕೈಗಾರಿಕೆಗಳನ್ನು ಮಾಡುವವರು 'ಹೆಲೆಟ್' ಎಂದರೆ ಗುಲಾಮರಾಗಿದ್ದರು. ಅಲ್ಲಿಯ ಮೇಲಿನ ವರ್ಗದವರು ಯುದ್ಧಕಾರ್ಯಗಳಲ್ಲಿ ತೊಡಗುವರು. ರೋಮ ಶಹರದಲ್ಲಿ ಮೊದಲಿನ ಕಾಲದಲ್ಲಿ ಇದೇ ಪರಿಸ್ಥಿತಿಯು ಇತ್ತು. ಅಲ್ಲಿ ಉಚ್ಚತರಗತಿಯ ಜನರು "ಪ್ಯಾಟ್ರಿಶಿಯನ್" ರೆಂತಲೂ ಕೆಳಗಿನವರಿಗೆ "ಪ್ಲೇಬಿಯನ್ನರೆಂತ"ಲೂ ಕರೆಯುತ್ತಿದ್ದರು. ವ್ಯಾಪಾರೋದ್ಯೋಗಗಳು ಪ್ಲೇಬಿಯನ್ನರ ಕಡೆಗೆ ಇರುತ್ತಿದ್ದವು.

ಯುರೋಪಖಂಡದಲ್ಲಿ, ರಶಿಯಾ, ಜರ್ಮನಿ, ಇಂಗ್ಲಂಡ ಇಂಥ ದೇಶಗಳಲ್ಲಿ ಸಹ ಇದೇ ಸ್ಥಿತಿಯು ಬಹುಕಾಲದಿಂದಲೂ ಇದ್ದಿತು. ಆದರೆ ಹೊಟ್ಟೆಯ ಅಡಚಣೆಗಾಗಿ ಇಂಗ್ಲಂಡ, ಹಾಲಂಡ, ಪೋರ್ತುಗಾಲಗಳಲ್ಲಿ ಹೊಸ ಬದಲಾವಣೆಯಾಗಿ ಇಲ್ಲಿಯವರು ವ್ಯಾಪಾರಕ್ಕೋಸ್ಕರ ಪರದೇಶಗಳಿಗೆ ಹೋಗಿ ವ್ಯಾಪಾರವನ್ನು ಆರಂಭಿಸಿದರು. ೧೬ನೇ ಶತಮಾನದಲ್ಲಿ ಈ ದೇಶದವರು ಬೇರೆ ಬೇರೆ ದೇಶಗಳಲ್ಲಿ ವಸಾಹತುಗಳನ್ನು ಮಾಡಲಾರಂಭಿಸಿದರು. ಅಂದಿನಿಂದ ಹೊಸಯುಗವು ಯುರೋಪಖಂಡದಲ್ಲಿ ಪ್ರಾರಂಭವಾಯಿತು.

ಆದರೆ ನಮ್ಮ ದೇಶದಲ್ಲಿ ಧನ ಸಂಪಾದನೆಗೆ ಮಹತ್ವದ ಸ್ಥಾನವಿರಲಿಲ್ಲ. ಬ್ರಾಹ್ಮಣರೂ, ಬೌದ್ಧರೂ ಉತ್ಪಾದನೆಯ ಉದ್ಯೋಗಗಳನ್ನು ಮಾಡುವದನ್ನು ನಿರಾಕರಿಸಿದರು. ಜೈನರು ದೇಹವನ್ನು ಕ್ಲೇಶಪಡಿಸುವದು ಮಹತ್ವದ್ದೆಂದು ಭಾವಿಸಿದರು. ಅವರು ದಿಗಂಬರಿಗಳಾದರು. ಇದರಿಂದ ನಮ್ಮ ದೇಶದಲ್ಲಿ ವ್ಯಾಪಾರೋದ್ಯೋಗಗಳು ನಿಂತವು. ಇದು ದೇಶಕ್ಕೆ ಹಾನಿಕರವಾಗಿ ಪರಿಣಮಿಸಿತು.

ಆದರೆ ಇದನ್ನು ಶೈವ ಧರ್ಮೀಯರೂ ವೀರಶೈವರೂ ಒಪ್ಪದೆ ಉದ್ಯೋಗಗಳಲ್ಲಿ ತೊಡಗಿದವರಾಗಿದ್ದರಿಂದ ದಕ್ಷಿಣ ದೇಶವು ಆರ್ಥಿಕ ದೃಷ್ಟಿಯಿಂದ ಉನ್ನತ ಸ್ಥಾನವನ್ನು ಹೊಂದಿತು. ದ್ರಾವಿಡ ಶೈವರು ಸಿಂಹಲ ದ್ವೀಪ, ಜಾವಾ, ಸುಮಾತ್ರಗಳಲ್ಲಿ ವಸಾಹತು ಮಾಡಿದರು. ಇದರಿಂದ

ದಕ್ಷಿಣ ದೇಶದಲ್ಲಿಯು ಜನರು ಸಿರಿವಂತರಾಗಿ ಮಹತ್ವದ ದೇವಾಲಯಗಳನ್ನು ಕಟ್ಟಿಸಲಿಕ್ಕೆ ಸಾಧ್ಯವಾಯಿತು. ಕರ್ನಾಟಕದಲ್ಲಿಯೂ ಇದೇ ಪರಿಸ್ಥಿತಿಯು ಉಂಟಾಯಿತು. ಇಲ್ಲಿಯ ಹಿಂದೂ ಧರ್ಮದವರು ಇಲ್ಲಿ ಅನೇಕ ಸುಂದರವಾದ ದೇವಾಲಯಗಳನ್ನು ಕಟ್ಟಿಸಿದರು. ಕಾರ್ಲಾ ಅಜಂತಾ ವೇರೂಳದಲ್ಲಿಯ ದೇವಾಲಯಗಳು ಕರ್ನಾಟಕಸ್ಥರ ಧನಸಹಾಯದಿಂದ ಉಂಟಾಗಿರುತ್ತವೆ. ಆದರೆ ಉತ್ತರ ಹಿಂದುಸ್ಥಾನದಲ್ಲಿ ವ್ಯಾಪಾರೋದ್ಯೋಗಗಳು ಇಲ್ಲದ್ದರಿಂದ ಅಲ್ಲಿ ಮಹತ್ವದ ಕಟ್ಟಡಗಳು ಕೆಲವು ಮಾತ್ರ ಆಗಿರುತ್ತವೆ.

ಶಿವಶರಣರು ಜೈನ, ಬೌದ್ಧರಂತೆ ದೇಹದಂಡನೆಯಿಂದ ಮೋಕ್ಷವೆಂದು ತಿಳಿಯಲಿಲ್ಲ, ಅವರು ತ್ರಿಲಿಂಗಗಳ ವಿಚಾರಕ್ಕೆ ಮಹತ್ವವನ್ನು ಕೊಟ್ಟರು. ಬಾಹ್ಯಕ್ರಿಯೆಗಳನ್ನು ನಿರ್ಬಂಧಿಸಕೂಡದೆಂದು ಸ್ಪಷ್ಟ ಅಭಿಪ್ರಾಯ ಪಟ್ಟವರಾಗಿದ್ದಾರೆ.

ಮನುಷ್ಯನ ವಿಕಾಸಕ್ಕೆ ಇಷ್ಟ ಪ್ರಾಣ ಭಾವ ಈ ಮೂರು ಲಿಂಗಗಳು ಬೇಕೆಂದು ಅವರು ಅಭಿಪ್ರಾಯ ಪಟ್ಟಿದ್ದಾರೆ. ಸರಿಯಾದ ರೀತಿಯಿಂದ ಬಾಹ್ಯ ಕ್ರಿಯೆಗಳನ್ನು ಮನುಷ್ಯನು ಮಾಡಿದ್ದಾದರೆ ಅವನ ಮಾನಸಿಕ ವೃತ್ತಿಗಳು ಪರಿಪಕ್ವವಾಗುವವು. ಈ ವೃತ್ತಿಗಳು ಸೂಕ್ಷ್ಮ ಶರೀರಕ್ಕೆ ಸಂಬಂಧಿಸಿದವುಗಳು ಇರುತ್ತವೆ, ಸ್ಥೂಲ ಶರೀರ ಮತ್ತು ಸೂಕ್ಷ್ಮ ಶರೀರಗಳು ವಿಕಾಸಹೊಂದಿದ ಹಾಗೆ ಕಾರಣ ಶರೀರವೂ ಕೂಡ ಬೆಳವಣಿಗೆ ಹೊಂದುತ್ತದೆ. ಕಡೆಯದಾದ ಕಾರಣ ಶರೀರದಲ್ಲಿ ಜ್ಞಾನವು ಹುದುಗಿಕೊಂಡಿರುತ್ತದೆ. ಹೀಗೆ ಈ ಮೂರು ಶರೀರಗಳ ವಿಕಾಸಕ್ಕೆ ಬಾಹ್ಯ ಕ್ರಿಯೆಗಳು ಬಹು ಅವಶ್ಯಕವಾದವುಗಳು. ಈ ಕಾರಣದ ಸಲುವಾಗಿ ಷಟ್‌ಸ್ಥಲ ಶಾಸ್ತ್ರಜ್ಞರು ಕ್ರಿಯೆಗಳಿಗೆ ಉಚ್ಚ ಮತ್ತು ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ಈ ಕ್ರಿಯೆಗಳಲ್ಲಿ ಮನುಷ್ಯನು ನಿತ್ಯ ಮಾಡುವ ಕ್ರಿಯೆಗಳೆಲ್ಲ ಸಮಾವೇಶವಾಗುತ್ತವೆ. ಅವು ಉದರ ಪೋಷಣ ವಿದ್ಯೆ ಎಂದು ಅವುಗಳನ್ನು ಅವರು ತಿರಸ್ಕರಿಸುವದಿಲ್ಲ. ಈ ಉದರ ಪೋಷಣೆಯ ಕ್ರಿಯೆ

ಗಳಿಗೆ ಶಿವಶರಣರು ಮಹತ್ವದ ಸ್ಥಾನವನ್ನು ಕೊಟ್ಟು ಅವುಗಳನ್ನು ಅವರು ಕಾಯಕವೆಂದು ಕರೆದಿರುವರು. ಅವುಗಳಿಗೆ ಅವರು ಧಾರ್ಮಿಕ ಉಚ್ಚ ಸ್ಥಾನವನ್ನು ಕೊಟ್ಟಿರುವರು.

ಮನುಷ್ಯನು ಈ ಕಾಯಕಗಳನ್ನು ಸತ್ಯ, ಶುದ್ಧ ರೀತಿಯಿಂದ ಮಾಡತಕ್ಕದ್ದೆಂದು ಶಿವಶರಣರ ಉಕ್ತಿಗಳಿವೆ. ಅವರು ಇಂಥ ಆಚರಣೆಗೆ ಷಟ್‌ಸ್ಥಲಶಾಸ್ತ್ರದಲ್ಲಿ ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ಅವರು ಹೀಗೆ ಆಚರಿಸುವದೇ ಲಿಂಗಪೂಜೆ ಎಂದು ಸಹ ಹೇಳಿದ್ದಾರೆ. ಅವರು "ಕಾಯಕವೇ ಕೈಲಾಸ" ವೆಂದು ಹೇಳಿದ್ದಾರೆ.

ಕಾಯಕಗಳನ್ನು ಮಾಡುವಲ್ಲಿ ಲಿಂಗಾರ್ಪಣ ಭಾವದಿಂದ ಮಾಡಬೇಕೆಂದು ವಚನಕಾರರ ಅಭಿಪ್ರಾಯವಿರುತ್ತದೆ. ಮನುಷ್ಯನಿಗೆ ಶ್ರೋತ್ರ, ತ್ವಕ್ಕ, ರೂಪ, ರಸ, ಗಂಧ ಎಂಬವುಗಳು, ಇದ್ದು ಇವುಗಳು ಶ್ರೋತ್ರೇಂದ್ರಿಯ ತ್ವಗಿಂದ್ರಿಯ, ನೇತ್ರೇಂದ್ರಿಯ ರಸನೇಂದ್ರಿಯ, ಘ್ರಾಣೇಂದ್ರಿಯ, ಇವುಗಳಿಗೆ ಅನುಕ್ರಮವಾಗಿ ಸಂಬಂಧಪಟ್ಟಿರುತ್ತವೆ. ಈ ಇಂದ್ರಿಯಗಳಲ್ಲಿ ಅನುಕ್ರಮವಾಗಿ ಜಂಗಮಲಿಂಗ, ಪ್ರಸಾದಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗ, ಇವುಗಳಿರುತ್ತವೆ. ಕಾಯಕವನ್ನು ಮಾಡುವಲ್ಲಿ ಈ ಲಿಂಗಗಳಿಗೆ ಆಯಾ ಅನುಭವಗಳನ್ನು ಅರ್ಪಣ ಮಾಡುತ್ತ ಅವುಗಳನ್ನು ನಿರ್ವಹಿಸಬೇಕು, ಎಂದರೆ ಅವುಗಳ ಪರಿಣಾಮಗಳನ್ನು ಅರ್ಪಣ ಮಾಡಬೇಕು, ಎಂದು ಷಟ್‌ಸ್ಥಲ ಶಾಸ್ತ್ರಜ್ಞರು ಹೇಳುವದುಂಟು. ಈ ಲಿಂಗಾರ್ಪಣ ಕ್ರಮಗಳು ವೀರಶೈವರ ವಿಶಿಷ್ಟ ಕಾರ್ಯಗಳಾಗಿರುತ್ತವೆ. ಅವರು ಇವುಗಳ ರೀತಿಯನ್ನು ಅರಿತುಕೊಂಡು ಆಚರಿಸಿದಲ್ಲಿ ಇಂದ್ರಿಯಗಳು ತಪ್ಪುದಾರಿಯನ್ನು ಹಿಡಿಯುವದಿಲ್ಲ. ಹಾಗೂ ಮನುಷ್ಯನಿಂದ ಯಾವ ದೋಷಗಳೂ ಆಗುವದಿಲ್ಲೆಂದು ವಚನಕಾರರು ತಿಳಿದಿರುತ್ತಾರೆ. ಇದೇ ಲಿಂಗಾನುಭವವು. ಈ ಅನುಭವವುಳ್ಳವನಾಗಿ ನಡೆದರೆ ಅವನು ಸದ್‌ವೃತ್ತಿಯುಳ್ಳವನಾಗುವನು. ಸದ್‌ವೃತ್ತಿಯಿಂದ ಜೀವನ ನಡಿಸುವದೇ ಕಾಯಕವೆನಿಸಿಕೊಳ್ಳುತ್ತದೆ. ಈ ಪ್ರಕಾರ ಕಾಯಕಗಳು ಮನುಷ್ಯನ ಪ್ರಗತಿಯನ್ನು ಉಂಟು ಮಾಡುತ್ತವೆಯೋ ಹೊರತು ಅವನಿಗೆ ಅವು

ಹಾನಿಯನ್ನು ಉಂಟು ಮಾಡಲಾರವೆಂದು ಶಿವಶರಣರ ದೃಢವಾದ ಅಭಿಪ್ರಾಯವಿರುತ್ತದೆ.

ಮೇಲಿನ ವಿಷಯಗಳು ವಾಚಕರಿಗೆ ದುರ್ಬೋಧವಾಗಿ ತೋರಬಹುದು. ಆದರೂ ವಚನಶಾಸ್ತ್ರದ ಪರಿಶೀಲನೆ ಮಾಡುತ್ತಿರುವವರಿಗೆ ಈ ತತ್ವಗಳು ಕೂಡಲೇ ಅವರ ಅವಗಾಹನೆಗೆ ಬರುವಂತೆ ಇವೆ. ಈ ಪ್ರಕಾರ ಶಿವಶರಣರು ಕಾಯಕಕ್ಕೆ ಉಚ್ಚಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆ. ನಿತ್ಯದ ಉಪಜೀವನದ ಸೊರೆಗಳ ಬಗ್ಗೆ ಈ ತರದ ವಿಚಾರಗಳು ಭಾರತ ದೇಶದಲ್ಲಿರುವ ಯಾವ ಧರ್ಮದಲ್ಲಿಯೂ ಇದ್ದುದು ಕಂಡು ಬರುವದಿಲ್ಲ.

ಶಿವಶರಣರು ಕಾಯಕಕ್ಕೆ ಇಷ್ಟು ಮಹತ್ವದ ಸ್ಥಾನವನ್ನು ಕೊಡಲಿಕ್ಕೆ ಬೇರೊಂದು ಕಾರಣವಿದೆ. ಬಸವಾದಿ ಪ್ರಮುಖರ ಕಾಲದಲ್ಲಿ ಕಾಯಕಮಾಡುವಂಥ ದೊಡ್ಡ ದೊಡ್ಡ ಸಮಾಜಗಳು ವೀರಶೈವ ಧರ್ಮದಲ್ಲಿ ಸೇರ್ಪಡೆ ಹೊಂದಿ ಪತ್ತಿಪ್ಪತ್ತು ವರ್ಷಗಳಲ್ಲಿ ಲಕ್ಷಾವಧಿ ಜನರು ವೀರಶೈವ ಧರ್ಮವನ್ನು ಸ್ವೀಕರಿಸಿದರು. ಈ ಸಮಾಜದವರೆಲ್ಲರೂ ಒಕ್ಕಲುತನ, ನೇಕಾರಿಕೆ, ಸಿಂಪಿಗತನ ಬಣ್ಣಗಾರಿಕೆ ಇಂಥ ಅನೇಕ ಉದ್ಯೋಗಗಳನ್ನು ಮಾಡುವವರಾಗಿದ್ದರು. ವಚನಕಾರರು ತಮ್ಮ ಉಕ್ತಿಗಳಲ್ಲಿ ಈ ಉದ್ಯೋಗಗಳನ್ನು ಮಾಡಬಾರದು, ಇವುಗಳನ್ನು ಮಾಡುವವರು ಕಡಿಮೆಯವರೆಂದು ಭಾವಿಸಲಿಲ್ಲ. ಇಷ್ಟೇ ಅಲ್ಲ, ಈ ಉದ್ಯೋಗಗಳಲ್ಲಿ ಪರಮಾತ್ಮನ ಪೂಜೆ ಇದೆ, ಎಂತಲೂ ಪ್ರತಿಪಾದಿಸಿದರು. ಅವರಲ್ಲಿ ರೂಢವಾಗಿರುವ ಲಿಂಗಾರ್ಪಣದ ರೀತಿಗಳು ಅವರ ಈ ಅಭಿಪ್ರಾಯವನ್ನು ಸಮರ್ಥಿಸುವವು. ಆದ್ದರಿಂದ ಕಾಯಕಗಳೆಂದರೆ ಒಂದು ಬಗೆಯ ಲಿಂಗಾರಾಧನೆ ಇದೆ. ಈ ಆರಾಧನೆಯ ಮೂಲಕ ತನ್ನಲ್ಲಿ ಷಡ್ಲಿಂಗಗಳನ್ನು ಬಲಪಡಿಸಬಹುದು, ಇದರಿಂದ ಕಾಯಕಗಳ ಮೂಲಕ ಪರಮಾತ್ಮನನ್ನೂ ಕಾಣಬಹುದು. ಅವನಲ್ಲಿ ಸಾಮರಸ್ಯವನ್ನು ಹೊಂದಬಹುದು. ಅವು ಅವನ ಶ್ರೇಷ್ಠತೆಗೆ ಕಾರಣವಾದವುಗಳು ಎಂದು ಶಿವಶರಣರು ಪ್ರತಿಪಾದಿಸುತ್ತ ಬಂದಿದ್ದಾರೆ. ಇದರಿಂದ ವೀರಶೈವ ಸಮಾಜದಲ್ಲಿ ಅನೇಕ ವೃತ್ತಿಯವರು ಇದ್ದುಕೊಂಡು ತಮ್ಮ

ಲಿಂಗಾಚಾರಕ್ಕೆ ಭಂಗಬಾರದಂತೆ ವರ್ತಿಸುತ್ತ ಬಂದಿದ್ದಾರೆ. ಕಾಯಕದ ಈ ವಿಚಾರಗಳು ವೀರಶೈವ ಧರ್ಮದ ವೈಶಿಷ್ಟ್ಯವಾಗಿರುತ್ತವೆ.

ಲಿಂಗಾರ್ಚನೆಯಲ್ಲಿ ಈ ಕಾಯಕದ ತತ್ವವನ್ನು ವೀರಶೈವರು ಪಾಲಿಸುತ್ತ ಬಂದರು. ಇದರಿಂದ ಕಾಯಕದ ಮೂಲಕ ಯಾವನೂ ಹೀನಕುಲದವನಾಗಲಾರನು. ಶಿವಶರಣರು ಈ ವಿಚಾರಗಳನ್ನು ಮುಂದು ಮಾಡಿದ್ದರಿಂದ ಕರ್ನಾಟಕವು ವ್ಯಾಪಾರೋದ್ಯೋಗಗಳಲ್ಲಿ ಮುಂದುವರಿಯುತ್ತಿತ್ತು. ವೀರಶೈವರಲ್ಲಿ ಯಾರೂ ತಮ್ಮ ಉದ್ಯೋಗಗಳನ್ನು ಬಿಡಲಿಲ್ಲ. ಹೊಯ್ಸಳರು, ಚಾಲುಕ್ಯರು, ವಿಜಯನಗರದ ರಾಜರು, ವಿಜಾಪುರ ಬಾದಶಹರು ಇವರೆಲ್ಲರ ಕಾಲದಲ್ಲಿ ಕರ್ನಾಟಕದ ಕಲಾಕೌಶಲ್ಯಗಳು ಬೆಳೆದವು. ಆಗ ಮಹತ್ವದ ಕಟ್ಟಡಗಳೂ ಕೆರೆ ಕಾಲುವೆಗಳೂ ದೇಶದಲ್ಲಿ ಉದ್ಭವಿಸಿದವು. ಶಿವಶರಣರು ಕಾಯಕದ ತತ್ವಗಳನ್ನು ಉಪಜೀವನದ ಹೊರೆಗಳಿಗೆ ಅನ್ವಯಿಸಿದ್ದರಿಂದ ಎಲ್ಲ ವರ್ಗದವರಲ್ಲಿದ್ದ ಕೈಗಾರಿಕೆ ವ್ಯಾಪಾರೋದ್ಯೋಗಗಳು ಬೆಳೆಯತೊಡಗಿದವು. ಸತ್ಯ ಶುದ್ಧ ಕಾಯಕ ಮಾಡಬೇಕೆಂದು ಶಿವಶರಣರ ಬೋಧೆಗಳಿವೆ. ಅದ್ದರಿಂದ ವ್ಯಾಪಾರೋದ್ಯೋಗಗಳಲ್ಲಿ ನೀತಿವಂತಿಕೆಯು ಬೆಳೆಯಿತು. ಎಲ್ಲರೂ ಶ್ರಮವಹಿಸುವವರಾದರು. ಯಾರೂ ಸೋಮಾರಿಗಳಾಗಿರಲಿಲ್ಲ. ಶ್ರಮ ಮಾಡುವವರಲ್ಲಿ, ಸೋಮಾರಿಗಳಾದವರಲ್ಲಿ ಲಿಂಗ ಪೂಜೆಯು ತಪ್ಪುತ್ತದೆ. ಶಿವಶರಣರು ಪ್ರತಿಪಾದಿಸಿದ್ದು, ಲಿಂಗಪೂಜೆಯಲ್ಲಿ ಬೇಕು, ಲಿಂಗದಲ್ಲಿಯೇ ಇರಬೇಕು, ಈ ವಿಚಾರಗಳು ಅವರ ಕಾಯಕದ ವಿಚಾರಗಳಲ್ಲಿ ಅಡಕವಾಗಿರುತ್ತವೆ. ಅದ್ದರಿಂದ ವೀರಶೈವನು ಕಾಯಕ ಮಾಡುತ್ತ ಇದೇ ಜನ್ಮದಲ್ಲಿ ಮುಕ್ತಿಯನ್ನು ಸಾಧಿಸಬಹುದು.

( ಶಿವಾನುಭವ ಸಂಪುಟ ೨೭ ಸಂಚಿಕೆ ೭ ರಿಂದ )

# ಷಟ್‌ಸ್ಥಲ ಶಾಸ್ತ್ರದ ಧ್ಯೇಯ

ಷಟ್‌ಸ್ಥಲ ಶಾಸ್ತ್ರವು ವೀರಶೈವ ಧರ್ಮದ ವೈಶಿಷ್ಟ್ಯವಾಗಿರುತ್ತದೆ. ಈ ಷಟ್‌ಸ್ಥಲದ ತತ್ವಗಳನ್ನೇ ವೀರಶೈವರಲ್ಲಿರುವ ಕಾವ್ಯಗಳೂ, ವಚನಗಳೂ, ಪುರಾಣಗಳೂ, ಧಾರ್ಮಿಕ ತಾತ್ವಿಕ ಗ್ರಂಥಗಳೂ, ವಿವೇಚಿಸುತ್ತವೆ. ಯಾವನಿಗೆ ಷಟ್‌ಸ್ಥಲದ ತತ್ವಗಳ ಜ್ಞಾನವು ಚನ್ನಾಗಿ ಆಗಿದೆಯೋ ಅವನು ವೀರಶೈವರಲ್ಲಿ ಅತ್ಯಂತ ಗಣ್ಯನೆಂದೆನಿಸಿಕೊಳ್ಳುತ್ತಾನೆ. ಅವರಲ್ಲಿಯು ಶ್ರೇಷ್ಠ ಮಠಾಧಿಕಾರಿಗಳಿಗೆ ಷಟ್‌ಸ್ಥಲ ಬ್ರಹ್ಮಿಗಳೆಂತಲೂ ಅವರಲ್ಲಿಯು ಪೀಠಾಧಿಪತಿಗಳಿಗೆ ಷಟ್‌ಸ್ಥಲ ಸ್ಥಾಪನಾಚಾರ್ಯರೆಂತಲೂ ಬಿರುದುಗಳಿರುತ್ತವೆ. ಈ ಮೇರೆಗೆ ವೀರಶೈವ ಧರ್ಮದಲ್ಲಿ ಷಟ್‌ಸ್ಥಲಕ್ಕೆ ಅತ್ಯಂತ ಮಹತ್ವದ ಸ್ಥಾನವು ಕೊಡಲ್ಪಟ್ಟಿರುತ್ತದೆ.

ಈ ಷಟ್‌ಸ್ಥಲಗಳ ಉದ್ದೇಶವು ಮನುಷ್ಯನು ಜಗತ್ತಿನಲ್ಲಿ ಹ್ಯಾಗೆ ವ್ಯವಹರಿಸಿದರೆ ಲಿಂಗಾಂಗ ಸಾಮರಸ್ಯತ್ವವು ದೊರಕೊಂಬುದನ್ನು ವಿವೇಚಿಸುವುದೇ ಇರುತ್ತದೆ. ಇದರಲ್ಲಿ ಕೇವಲ ತಾರ್ಕಿಕ ಮತ್ತು ಬೌದ್ಧಿಕ ವಿಚಾರಗಳ ಪ್ರಾಗಲ್ಭ್ಯವು ಇರದೆ ಮನುಷ್ಯನ ಆಚರಣೆಯ ವಿವೇಚನೆಯೇ ಮುಖ್ಯವಾಗಿರುತ್ತದೆ. ಈ ಶಾಸ್ತ್ರದಲ್ಲಿ ಮನುಷ್ಯನು ಜಗತ್ತಿನಲ್ಲಿ ಹ್ಯಾಗೆ ಆಚರಿಸತಕ್ಕದ್ದು ಈ ವಿಷಯ ವಿವೇಚನೆಯೇ ಇದರಲ್ಲಿ ಬಂದಿರುತ್ತದೆ. ಧರ್ಮ ವಿಷಯದಲ್ಲಿ ಇಂಥ ವಿಷಯಗಳು ಕಡಿಮೆ ತರಗತಿಯವುಗಳೆಂದು ಎಂದೂ ತಿಳಿಯಲಿಕ್ಕೆ ಬರಲಾರದು. ಹಿಂದುಸ್ತಾನದಲ್ಲಿ ಅನೇಕ ತತ್ವಜ್ಞಾನಿಗಳು ಹುಟ್ಟಿ ಅವರು ವೇದಾಂತದ ಬಗ್ಗೆ ವಿದ್ವತ್ಪೂರ್ಣವಾದ ಗ್ರಂಥಗಳನ್ನು ಬರೆದಿರಬಹುದು. ಅಥವಾ ಶಂಕರಾಚಾರ್ಯ, ಮಧ್ವಾಚಾರ್ಯರಂತೆ ಅನೇಕರು ತಮ್ಮ ಉಚ್ಚ ಸಿದ್ಧಾಂತಗಳನ್ನು ಪ್ರತಿಪಾದಿಸಿರಬಹುದು. ಆದರೆ ಮನುಷ್ಯನ ಆಚರಣೆ, ರೀತಿ ನಡತೆ ಇವುಗಳ ಬಗ್ಗೆ ತಾತ್ವಿಕ ರೀತಿಯಿಂದ ವಿಚಾರ ಮಾಡಿ ಅವನು ಜಗತ್ತಿನಲ್ಲಿ ಹ್ಯಾಗೆ ವರ್ತಿಸಬೇಕೆಂಬುದನ್ನು ವಿವೇ

ಚಿಸಿದಂಥವರ ಯೋಗ್ಯತೆಯು ಕಡಿಮೆ ತರದ್ದಲ್ಲ. ಈ ದೃಷ್ಟಿಯಿಂದ ಷಟ್‌ಸ್ಥಲ ಶಾಸ್ತ್ರವು ಅತ್ಯಂತ ಮಹತ್ವದ್ದಿರುತ್ತದೆ.

ಆಚರಣೆಗಳು ಧಾರ್ಮಿಕ ತತ್ತ್ವಗಳ ಮೇಲೆ ಅವಲಂಬಿಸಿದ್ದು ಅವು ಆ ತತ್ತ್ವಗಳನ್ನು ಕೂಡಲೆ ಮನಸ್ಸಿಗೆ ತರುವಂಥವಿರಬೇಕು. ಹೀಗೆ ಯಾವ ಆಚರಣೆಗಳು ಇರುತ್ತವೋ ಅವುಗಳೇ ಉಪಯುಕ್ತವಾದವುಗಳು. ವೀರಶೈವ ಷಟ್‌ಸ್ಥಲ ಸ್ಥಾಪಕರು ಈ ಬಗೆಯಾಗಿ ಅವುಗಳ ಸ್ವರೂಪವನ್ನು ನಿರ್ಮಿಸಿದ್ದು ತೋರಿಬರುತ್ತದೆ. ಆಚರಣೆಗಳ ಸ್ವರೂಪವು ಹೀಗೆ ಇರದೆ ಹೋದರೆ ಅವುಗಳ ಪರಿಣಾಮಗಳು ಮನುಷ್ಯನ ಮನಸ್ಸಿನ ಮೇಲೆ ಮತ್ತು ನಡತೆಯ ಮೇಲೆ ಏನೂ ಉಂಟಾಗಲಾರವು. ಆಜ್ಞ ಜನರು ಇಂಥವುಗಳನ್ನು ಬರೇ ಅಂಧ ಶ್ರದ್ಧೆಯಿಂದ ಆಚರಿಸುತ್ತ ಹೋಗುವರು. ಈ ಪ್ರಕಾರ ಆಚರಿಸುವವರು ಧಾರ್ಮಿಕ ವರ್ಗದವರ ಮೋಸಗಾರಿಕೆಗೆ ಮಾತ್ರ ಬಲಿಗಾಗಿ ಅವರಲ್ಲಿ ಧರ್ಮಮೂಢತೆಯು ಬೆಳೆಯುತ್ತ ಹೋಗುವದು. ಈ ಸ್ಥಿತಿಯು ಹಿಂದೂ ಧರ್ಮದ ಇತಿಹಾಸದಲ್ಲಿ ಬೇರೆ ಬೇರೆ ಕಾಲಗಳಲ್ಲಿ ಒದಗಿದ್ದು ತೋರಿಬರುತ್ತದೆ. ಹಿಂದೂ ಧರ್ಮದಲ್ಲಿ ವೇದಗಳೂ, ಉಪನಿಷತ್ತುಗಳೂ ಬಹು ಮಹತ್ತ್ವವಾದವುಗಳಿದ್ದು ಅವುಗಳು ಹಿಂದೂ ಧರ್ಮದ ತಿರುಳನ್ನು ಬಹು ಸ್ಪಷ್ಟವಾದ ರೀತಿಯಿಂದ ವಿವರಿಸಿದರೂ ಆ ಕಾಲದಲ್ಲಿ ರೂಢವಾದ ಯಜ್ಞಾದಿ ಹಿಂಸಾಕರ್ಮಗಳು ಅದಕ್ಕೆ ಬರುಬರುತ್ತ ಗ್ಲಾನಿಯನ್ನು ತಂದವು. ಹೀಗೆಯೇ ಆರಂಭದಲ್ಲಿ ಹಿಂದೂ ಸಮಾಜದಲ್ಲಿ ಗುಣ ಕರ್ಮಗಳ ಪ್ರಕಾರ ಸಮಾಜದ ರಚನೆಯು ಉತ್ಪನ್ನವಾದರೂ ಹಿಂದುಗಡೆ ಇದರಲ್ಲಿ ಜಾತಿಯ ಕೃತ್ರಿಮತನವೂ, ಪುರೋಹಿತ ವರ್ಗದವರ ಸ್ವಾರ್ಥತೆಯೂ ಕೂಡಿಕೊಂಡಿದ್ದರಿಂದ ಇಲ್ಲದ ಭೇದಗಳು ಉತ್ಪನ್ನವಾಗಿ ಸಮಾಜದ ಅವ್ಯವಸ್ಥೆಗೆ ಕಾರಣವಾಯಿತು. ಇದೇ ಪ್ರಕಾರ ಜೈನ, ಬೌದ್ಧರ ಕಾಲದಲ್ಲಿ ನೀತಿ ಮತ್ತು ಭಕ್ತಿಗೆ ಪ್ರಾಧಾನ್ಯವು ಕೊಡಲ್ಪಟ್ಟಿದ್ದರೂ ಇದರೊಡನೆ ಮೂರ್ತಿಪೂಜೆಯು ಉದ್ಭವಿಸಿದ್ದರಿಂದ ಸಮಾಜದಲ್ಲಿ ಹುರುಳಿಲ್ಲದ ಪೂಜಾದಿ ಕರ್ಮಗಳು ಬಹುದೊಡ್ಡ ಪ್ರಮಾಣದಿಂದ ಪ್ರಾರಂಭವಾದವು. ಮತ್ತು ಈ ಸ್ಥಿತಿಯು ಹಿಂದೂ ಸಮಾಜದಲ್ಲಿ ಈಗ್ಗೆಯೂ ಸಹ ಕಂಡು ಬರುತ್ತದೆ.

ಈ ಬಗೆಯ ಅವ್ಯವಸ್ಥೆಯು ಧಾರ್ಮಿಕ ತತ್ವ ಮತ್ತು ಆಚರಣೆ ಇವುಗಳಲ್ಲಿರತಕ್ಕ ಪರಸ್ಪರ ಸಂಬಂಧವು ತಪ್ಪಿ ಹೋಗುವದರಿಂದ ಉಂಟಾಗುತ್ತದೆ. ಇದೇ ಧರ್ಮದ ಮತ್ತು ಸಮಾಜದ ಅವನತಿಗೆ ಕಾರಣವಾಗುತ್ತದೆ.

ಷಟ್‌ಸ್ಥಲ ಶಾಸ್ತ್ರಜ್ಞರು ಮೇಲ್ಕಂಡ ಬಗೆಯಾಗಿ ಅವ್ಯವಸ್ಥೆಯಾಗಬಾರದೆಂದು ಷಟ್‌ಸ್ಥಲದ ಯೋಜನೆಯನ್ನು ಮಾಡಿದ್ದು ತೋರಿ ಬರುತ್ತದೆ. ಈ ಯೋಜನೆಯು ಅಪೂರ್ವವಾದದ್ದದೆ. ಇವರಂತೆ ಬೇರೆ ಯಾವ ಒಂದೂ ಸಮಾಜದಲ್ಲಿಯೂ ತೋರಿ ಬರುವದಿಲ್ಲ. ಈ ಷಟ್‌ಸ್ಥಲವೇ ವೀರಶೈವ ಧರ್ಮದ ವೈಶಿಷ್ಟ್ಯವಾಗಿರುತ್ತದೆ.

ಷಟ್‌ಸ್ಥಲ ಶಾಸ್ತ್ರದಲ್ಲಿ ಸಾಮಾನ್ಯವಾಗಿ ಮೂರು ಭಾಗಗಳನ್ನು ಮಾಡಬಹುದಾಗಿದೆ. (೧) ಕರಣ ಹಸಿಗೆಯ ಜ್ಞಾನ (೨) ಷಟ್‌ಸ್ಥಲದ ಮೂಲ ತತ್ವಗಳು (೩) ಅಷ್ಟಾವರಣಗಳ ಜ್ಞಾನ. ಷಟ್‌ಸ್ಥಲಗಳ ವಾಙ್ಮಯವು ಬಹುತರವಾಗಿ ಈ ಮೂರು ವಿಷಯಗಳನ್ನು ಒಳಗೊಂಡಿರುತ್ತದೆ.

ಇವುಗಳಲ್ಲಿ ಕರಣಹಸಿಗೆಯು ಮನುಷ್ಯನ ಇಂದ್ರಿಯಗಳ ವ್ಯಾಪಾರಗಳ ಜ್ಞಾನವನ್ನು ವಿವರಿಸುತ್ತದೆ. ಇದರಲ್ಲಿ ದೇಹದ ಉತ್ಪತ್ತಿಯು ಹೇಗೆ, ಅದರ ಭಾಗಗಳಾವವು, ೩೬ ತತ್ವಗಳಾವವು, ಶಕ್ತಿಗಳು, ಚಕ್ರಗಳು ಯಾವ ಯಾವವು ಎಲ್ಲಿ ಇರುತ್ತವೆ ಮನುಷ್ಯನ ಸ್ವಭಾವದ ವಿವರಣೆ ಇವೇ ಮೊದಲಾದ ಅನೇಕ ವಿಷಯಗಳು ಬರುತ್ತವೆ. ಷಟ್‌ಸ್ಥಲಗಳ ಮೂಲ ತತ್ವಗಳನ್ನು ಆಚಾರ ವಿಷಯಗಳನ್ನೂ ತಿಳಿಯಲಿಕ್ಕೆ ಮೇಲ್ಕಂಡ ವಿಷಯಗಳ ಜ್ಞಾನವು ಮನುಷ್ಯನಿಗೆ ಅತ್ಯಾವಶ್ಯಕವಿರುತ್ತದೆ. ಇವುಗಳ ನಿಜಸ್ವರೂಪವನ್ನು ಅರಿತಾಗಲೇ ಅವನು ತನ್ನ ವಿಕಾಸತೆಯನ್ನು ಹ್ಯಾಗೆ ಮಾಡಿಕೊಳ್ಳಬೇಕೆಂಬುದನ್ನು ತಿಳಿಯಲಿಕ್ಕೆ ಶಕ್ಯವಾಗುತ್ತದೆ. ಈ ವಿಷಯಗಳ ಬಗ್ಗೆ ವೀರಶೈವ ವಾಙ್ಮಯದಲ್ಲಿ ಅನೇಕ ಗ್ರಂಥಗಳಿದ್ದು ಅವುಗಳಿಗೆ ನಾವು ಒಂದು ಬಗೆಯ ಮಾನಸ ಶಾಸ್ತ್ರಗಳೆಂತಲೇ ಅನ್ನಬಹುದು.

ಷಟ್‌ಸ್ಥಲದ ತತ್ವಗಳೆಂದು ನಾವು ಎರಡನೆಭಾಗ ಮಾಡಿದ್ದು ಇವು ಗಳು ಮನುಷ್ಯನಲ್ಲಿರುವ ಶಕ್ತಿಗಳನ್ನೂ ಅವನ ಒಳಹೊರಗಿರುವ ಶರೀರ ಗಳನ್ನೂ ಹ್ಯಾಗೆ ವಿಕಾಸಗೊಳಿಸಬೇಕೆಂಬುದನ್ನು ವಿವರಿಸುತ್ತವೆ. ಮನು ಷ್ಯನ ಶಕ್ತಿಗಳು ಆರಂಭಸ್ಥಿತಿಯಲ್ಲಿ ಬಹು ಅಪೂರ್ಣಾವಸ್ಥೆಯಲ್ಲಿರುತ್ತವೆ. ಆಗ ಅವನ ಮನಸ್ಸು, ಬುದ್ಧಿ, ಜ್ಞಾನ ಮೊದಲಾದವುಗಳು ಉತ್ತಮ ಪಾದುವನ್ನು ಗ್ರಹಿಸಿಕೊಂಡು ಅದನ್ನು ಒಳಕೊಳ್ಳುವ ಸ್ಥಿತಿಯಲ್ಲಿರ.ವದಿಲ್ಲ. ಅವು ಅಪಕ್ವವಾಗಿದ್ದು ಕೆಡಕಾದದ್ದನ್ನು ದೂರೀಕರಿಸಲು ಅಸಮರ್ಥವಾ ಗಿರುತ್ತವೆ. ಆದರೆ ಷಟ್‌ಸ್ಥಲವು ಈ ಅಪಕ್ವ ಸ್ಥಿತಿಯನ್ನು ದೂರಮಾಡಿ ಪಕ್ವಸ್ಥಿತಿಯನ್ನು ಹ್ಯಾಗೆ ಬರಮಾಡಿಕೊಳ್ಳಬೇಕೆಂಬುದನ್ನು ತಿಳಿಸುತ್ತದೆ. ಆದ್ದರಿಂದ ಈ ಶಾಸ್ತ್ರದಲ್ಲಿ ಪ್ರಗತಿಯ ಕಾಲಕ್ಕೆ ಮನುಷ್ಯನಲ್ಲಿ ಯಾವ ಯಾವ ಬದಲಾವಣೆಗಳಾಗುತ್ತವೆ, ಈ ಬದಲಾವಣೆಗಳಲ್ಲಿ ಅವನು ಯಾವ ಯಾವ ಬದಲಾವಣೆಗಳಾಗುತ್ತವೆ, ಈ ಬದಲಾವಣೆಗಳಲ್ಲಿ ಅವನು ಯಾವ ಯಾವ ಸ್ಥಿತಿಯಲ್ಲಿರುತ್ತಾನೆ ಇದೇ ಮೊದಲಾದವುಗಳ ತಾತ್ವಿಕ ವಿವೇಚನೆಯು ಇರುತ್ತದೆ. ಈ ಬದಲಾವಣೆಗಳ ಮುಖ್ಯ ಭಾಗಗಳು ಆರು ಇದ್ದರೂ ಅವುಗಳಲ್ಲಿ ಅನೇಕ ಅವಾಂತರ ಕಾರಣಗಳಿಂದ ಅವುಗಳಕಿಂತಲೂ ಹೆಚ್ಚು ಭಾಗಗಳು ಉಂಟಾಗುತ್ತವೆ. ಈ ಭಾಗಗಳು ಮೂಲದಲ್ಲಿ ಅಂಗ, ಲಿಂಗವೆಂದೂ, ಆ ಮೇಲೆ ಈ ಎರಡು ಭಾಗಗಳು ಲಿಂಗಕ್ಕೋಸ್ಕರ ಇಷ್ಟ ಪ್ರಾಣ, ಭಾವಗಳೆಂದೂ ಅಂಗಕ್ಕೋಸ್ಕರ ತ್ಯಾಗಾಂಗ, ಭೋಗಾಂಗ, ಯೋಗಾಂಗವೆಂದೂ, ಈ ಮೂರು ಭಾಗಗಳು ಪುನಃ ಆದಾರಾಗಿ ಅಂಗ ಕ್ಕೋಸ್ಕರ ಭಕ್ತ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂದೂ ಲಿಂಗಕ್ಕೋಸ್ಕರ ಆಚಾರ, ಗುರು, ಶಿವ, ಚರ ಮಹತೆ ಎಂದೂ ಮಾಡ ಲ್ಪಟ್ಟು ಇವುಗಳು ವಿವೇಚಿಸಲ್ಪಡುತ್ತವೆ. ಈ ೬ ಅಂಗಗಳು ಮತ್ತು ೬ ಲಿಂಗಗಳು ಪುನಃ ೩೬ ಆಮೇಲೆ ಅವು ೨೧೬, ಈ ಮೇರೆಗೆ ಭಾಗ ಗಳು ಮಾಡಲ್ಪಡುತ್ತವೆ. ಈ ಎಲ್ಲ ಭಾಗಗಳ ಜ್ಞಾನವೇ ಷಟ್‌ಸ್ಥಲ ಶಾಸ್ತ್ರದ ಮುಖ್ಯ ವಿಷಯವಾಗಿರುತ್ತದೆ. ಇದರಲ್ಲಿ ಮೇಲ್ಕಂಡ ಎಲ್ಲ ಭಾಗ ಗಳ ಪರಸ್ಪರ ಸಂಬಂಧವನ್ನು ಅರಿತುಕೊಂಡು ಆಯಾಯ ಕಾಲದಲ್ಲಿ ಮನಸ್ಸು ಜ್ಞಾನ, ಬುದ್ಧಿ, ಶಕ್ತಿ, ಭಕ್ತಿ, ಮೊದಲಾದ ಗುಣಗಳ ವಿಕಾಸತೆಯು

ಅಂದರೆ ಲಿಂಗ ಚೈತನ್ಯದ ಒಳಕೊಳ್ಳುವಿಕೆಯು ಹ್ಯಾಗೆ ಹ್ಯಾಗೆ ಆಗುತ್ತ ದೆಂಬುದು ವಿವೇಚಿಸಲ್ಪಡುತ್ತಿದೆ. ಇದೇ ಷಟ್‌ಸ್ಥಲ ಜ್ಞಾನವೆನಿಸಿಕೊಳ್ಳುತ್ತದೆ.

ಮೂರನೆಯ ಭಾಗವಾದ ಅಷ್ಟಾವರಣವು ಆಚಾರವಿಷಯುಕವಾಗಿದೆ. ವೀರಶೈವನು ಮೇಲ್ಕಂಡ ರೀತಿಯಿಂದ ಷಟ್‌ಸ್ಥಲ ಜ್ಞಾನವನ್ನು ಹೊಂದಿ ಈ ಜ್ಞಾನವನ್ನು ತನ್ನ ನಡತೆಯಲ್ಲಿ ತರಲು ಈ ಅಷ್ಟಾವರಣಗಳು ಅವ ನಿಗೆ ಉತ್ತಮ ಸಾಧನಗಳಾಗಿವೆ. ಈ ಅಷ್ಟಾವರಣಗಳ ಜ್ಞಾನದಿಂದ ಮನು ಷ್ಯನು ತನ್ನ ಮೂರೂ ಶರೀರಗಳಲ್ಲಿ ಅಂದರೆ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಲ್ಲಿ ಲಿಂಗದ ಪ್ರಕಾಶವನ್ನು ಬರಮಾಡಿಕೊಳ್ಳತಕ್ಕದ್ದು ಈ ಪ್ರಕಾಶವು ಅವನಲ್ಲಿ ಒಡಮೂಡಿದ ಹಾಗೆ ಅವನ ಹೊರಗೂ ಒಳಗೂ ಲಿಂಗವೆಯಾಗಿ ಅವನು ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಹೊಂದಹತ್ತು ವನು. ಇದೇ ಅಷ್ಟಾವರಣಗಳ ಜ್ಞಾನ ಅಥವಾ ಶಿವಯೋಗವೆಂದೆನ್ನಿಸಿ ಕೊಳ್ಳುವದು. ಗುರು ಲಿಂಗ ಜಂಗಮದಲ್ಲಿ ಆಯಾ ಸ್ಥಲಗಳ ಪ್ರಕಾರ ಅನೇಕ ಭೇದ ವಿಭೇದಗಳಿವೆ. ಅವುಗಳನ್ನು ವೀರಶೈವನಾದವನು ತಿಳಿದು ಕೊಳ್ಳತಕ್ಕದ್ದು. ಅವನಿಗೆ ಇವುಗಳ ಜ್ಞಾನವಾದ ಹಾಗೆ ಅವನ ಕ್ರಿಯಾ ದಿಗಳಲ್ಲಿಯೂ ಹೆಚ್ಚೆಚ್ಚು ಉತ್ಕೃಷ್ಟತೆಯು ತೋರಿ ಬರಹತ್ತುವದು. ಪಾದೋ ದಕ ಪ್ರಸಾದವಲ್ಲಿಯೂ ಅನೇಕ ಭೇದ ವಿಭೇದಗಳಿದ್ದು ಇವುಗಳು ಈ ಉತ್ಕೃಷ್ಟತೆಯ ಪರಿಣಾಮವನ್ನು ಅವನಲ್ಲಿ ವ್ಯಕ್ತಪಡಿಸುತ್ತವೆ. ವಿಭೂತಿ, ರುದ್ರಾಕ್ಷಿ, ಮಂತ್ರಗಳಾದರೂ ಲಿಂಗಾಗ ಸಾಮ್ರಸ್ಯಜ್ಞಾನವನ್ನು ಅವನಲ್ಲಿ ದೃಢಪಡಿಸಲಿಕ್ಕೆ ಸಹಾಯಕಗಳಾಗಿರುತ್ತವೆ. ಈ ಎಲ್ಲ ಕ್ರಿಯೆಗಳಲ್ಲಿ ಷಟ್ ಸ್ಥಲದ ತತ್ವಗಳು ಬಹು ಸ್ಪುಟವಾಗಿ ಮೂಡಿಕೊಂಡಿರುತ್ತವೆ. ಈ ಕ್ರಿಯೆ ಗಳಂತೆ ಆಚರಿಸಿದ್ದಾದರೆ ವೀರಶೈವನಲ್ಲಿ ಷಟ್‌ಸ್ಥಲದ ಮರ್ಮಗಳು ಚನ್ನಾಗಿ ಒಳಕೊಂಡು ಅವನು ವಿಕಾಸತೆಯನ್ನು ಹೊಂದುತ್ತ ಹೋಗುತ್ತಾನೆ. ಈ ವಿಷಯದ ಬಗ್ಗೆ ಮಂತ್ರ ಗೋಪ್ಯ, ಶಿವಯೋಗ, ಪ್ರಸಾದ ಈ ಬಗೆ ಯಾಗಿ ಹೆಸರುಳ್ಳ ಅನೇಕ ಮಹತ್ವದ ಗ್ರಂಥಗಳು ಷಟ್‌ಸ್ಥಲ ವಾಙ್ಮಯ ದಲ್ಲಿ ಉತ್ಪನ್ನವಾಗಿರುತ್ತದೆ.

ಈ ಮೇರೆಗೆ ಷಟ್ಸ್ಥಲ ಶಾಸ್ತ್ರದಲ್ಲಿ ಮೇಲ್ಕಂಡ ಮೂರು ಮುಖ್ಯ ವಿಷಯಗಳಿದ್ದು ಇವುಗಳ ತತ್ವಗಳನ್ನು ಅರಿಯುವದೇ ವೀರಶೈವನ ಮುಖ್ಯ ಕಾರ್ಯವಾಗಿದೆ. ಆದರೆ ಈ ತತ್ವಗಳಿಗೆ ಅನುಸಾರವಾಗಿ ನಡೆಯುವದನ್ನು ಬಿಟ್ಟುಕೊಟ್ಟು ಇತರ ಶೈವ ಅಥವಾ ಸ್ಮಾರ್ತ ಮಾರ್ಗದಂತೆ ನಡೆಯುವದು ವೀರಶೈವ ಮಾರ್ಗಕ್ಕೆ ವಿರೋಧವಾದುದು. ಷಟ್ಸ್ಥಲ ಶಾಸ್ತ್ರದ ಅಭ್ಯಾಸವು ಈಚೀಚೆಗೆ ವೀರಶೈವ ಸಮಾಜದಲ್ಲಿ ನಿಂತುಹೋದ್ದರಿಂದ ಅದಕ್ಕೆ ಹೊರತಾದ ಕ್ರಿಯಾ ಕರ್ಮಗಳೂ ಆಚಾರ ವಿಚಾರಗಳೂ ಎಂದರೆ ಮೂರ್ತಿಗಳ ಪೂಜೆ, ಸ್ಥಾವರ ಲಿಂಗಗಳ ಪೂಜೆ, ಕ್ರಿಯಾ ಕರ್ಮಗಳಲ್ಲಿ ಹೋಮ ಹವನಗಳನ್ನು ಮಾಡುವದು, ಸೂತಕಾದಿಗಳನ್ನು ಪಾಲಿಸುವದು, ವರ್ಣಗಳನ್ನು ಪಾಲಿಸುವದು ಇವೇ ಮೊದಲಾದ ಸಂಬಂಧವಲ್ಲದ ವಿಷಯಗಳ ಸೇರ್ಪಡೆಯಾಗಹತ್ತಿರುತ್ತದೆ. ಇವುಗಳನ್ನು ಈ ಕಾಲಕ್ಕೆ ಷಟ್ಸ್ಥಲ ಶಾಸ್ತ್ರದ ನಿಜವಾದ ಜ್ಞಾನದ ಮೂಲಕ ಹೊರಗಟ್ಟುವದು ಪ್ರತಿಯೊಬ್ಬ ವೀರಶೈವನ ಕಾರ್ಯವಾಗಿರುತ್ತದೆ.

ಇದರ ಮೇಲಿಂದ ಷಟ್ಸ್ಥಲವೆಂದರೆ ಪ್ರಗತಿಯ ಒಂದು ಮಾರ್ಗವೆಂದು ತಿಳಿದುಬರುತ್ತದೆ. ಈ ಶಾಸ್ತ್ರವು ಮನುಷ್ಯನು ಹ್ಯಾಗೆ ವರ್ತಿಸಿವರೆ ಅವನಲ್ಲಿ ಲಿಂಗದ ಕಳೆಯು ಉತ್ಪನ್ನವಾಗುತ್ತದೆಂಬುದನ್ನು ಅರಹುವಂಥದಿರುತ್ತದೆ. ಈ ದೃಷ್ಟಿಯಿಂದ ವಿವೇಚಿಸುವ ಶಾಸ್ತ್ರಗಳು ಇತರ ಹಿಂದೂ ಮತಗಳಲ್ಲಿ ಬಹು ಕಡಿಮೆ ಇರುತ್ತವೆ. ಆದರೆ ಷಟ್ಸ್ಥಲವು ಈ ವಿಷಯವನ್ನೇ ಹೆಚ್ಚಾಗಿ ಬೋಧಿಸುತ್ತದೆ. ಇದರ ಮೂಲಕ ಭಕ್ತನು ಮೆಲ್ಲ ಮೆಲ್ಲಗೆ ಉಚ್ಚ ಉಚ್ಚ ಸ್ಥಿತಿಯನ್ನು ಹೊಂದುತ್ತ ಹೋಗುತ್ತಾನೆ. ಮತ್ತು ಆತನು ಕಡೆಗೆ ಲಿಂಗದಲ್ಲಿ ಲೀನನಾಗುತ್ತಾನೆ. ಬಸವೇಶ್ವರನು ಅನ್ನುವುದೇನೆಂದರೆ :-

ಭಕ್ತನೆನಿಸುವೆನಯ್ಯ ಮೆಲ್ಲ ಮೆಲ್ಲನೆ. ಯುಕ್ತನೆನಿಸುವೆನಯ್ಯ ಮೆಲ್ಲ ಮೆಲ್ಲನೆ. ಮಾರಿ ಶರಣನೆನಿಸುವೆನಯ್ಯ ಮೆಲ್ಲನೆ. ವಿಷಯವಗುಣಗಳ ದಾಟಿ ಬರ ಬರ ಲಿಂಗೈಕ್ಯನೆನಿಸುವೆನಯ್ಯ ಕೂಡಲಸಂಗಮದೇವಾ ನಿಮ್ಮಿಂದಧಿಕನೆನಿಸುವೆನಯ್ಯ

ಎಂದು ಹೇಳಿರುವನು. ಈ ಪ್ರಗತಿಯ ಕಾರ್ಯದಲ್ಲಿ ಭಕ್ತನಿಗೆ ಅಸಂಖ್ಯ ತೊಂದರೆಗಳು ಬಂದರೂ ಅವನು ಅವುಗಳನ್ನು ತೊಲಗಿಸಿ ಕಡೆಗೆ ಪರಮಾತ್ಮನಲ್ಲಿ ಲೀನನಾಗುವನೆಂದು ಶ್ರೀ ಬಸವೇಶ್ವರನು ಹೇಳಿರುವನು ಆದರೆ ಈ ಕಾರ್ಯವು ಕೇವಲ ಹೇಳಿಕೆ ಕೇಳಿಕೆಯಿಂದಾಗದೆ ತನ್ನ ಸ್ವಂತ ಆಚರಣೆಯಿಂದ ಸಾಧಿತಕ್ಕ ಕಾರ್ಯವಾಗಿದೆ. ಈ ವಿಷಯದ ಬಗ್ಗೆ ದೇವರದಾಸಿಮಯ್ಯನು ಈ ಕೆಳಗಿನ ಸುಂದರವಾದ ವಚನವನ್ನು ನುಡಿದಿದ್ದಾನೆ. ಏನೆಂದರೆ :—

ಸಣ್ಣ ನನೆಯೊಳಗಣ ಪರಿಮಳವ ಹೊರಸೂಸಿ ಇದಿರಿಂಗೆ ಅರುಹಿಸಬಲ್ಲುದೆ ವಾಯು ? ಕೊಡಗೂಸಿನೊಳಗಣ ಮೊಲೆ ಮುಡಿಯ ಪಡೆದ ತಾಯಿತಂದೆಗಳೆಂದಡೆ ಕಾಣಿಸಿಕೊಡಬಲ್ಲರೇ ಕಾಂಬವರ ಕಣ್ಣಿಗೆ ? ಪಕ್ವಕ್ಕಲ್ಲದೆ ಪರಿಣಾಮ ಕಾಣಿಸದು ಕಾಣಾ ರಾಮನಾಥಾ. ನನೆ = ಮೊಗ್ಗು. ಕೊಡಗೂಸು = ಮದುವೆಗೆಯೋಗ್ಯಳಾದಕನ್ನೆ, ಮುಡಿ = ತುರುಬು, ಪರಿಣಾಮ = ಸುಖ;

ಇದರ ಮೇಲಿಂದ ಮನುಷ್ಯನ ಮನಸ್ಸು ಪಕ್ವವಾದಲ್ಲದೆ ಅವನಲ್ಲಿ ಲಿಂಗಸುಖವು ತಲೆದೋರದು. ಮನಸ್ಸನ್ನು ಹ್ಯಾಗೆ ಪಕ್ವವನ್ನಾಗಿ ಮಾಡಬೇಕೆಂಬುದನ್ನು ಅರಹುವದೇ ಷಟ್‌ಸ್ಥಲ ಶಾಸ್ತ್ರದ ಮುಖ್ಯಧ್ಯೇಯವಾಗಿದೆ

(ಶಿವಾನುಭವ ಸಂಪುಟ ೫ ಸಂಚಿಕೆ ೨ ರಿಂದ)

# ವೀರಶೈವರು ಮತ್ತು ಕಾಳಾಮುಖರು

೧೦ ನೇ ಶತಮಾನದಿಂದ ೧೨ನೇ ಶತಮಾನಗಳ ವರೆಗಿನ ಕಾಲವು ಕರ್ನಾಟಕದ ಇತಿಹಾಸದಲ್ಲಿ ಅತ್ಯಂತ ಉಜ್ವಲವಾದದ್ದಿರುತ್ತದೆ. ಈ ಕಾಲಕ್ಕೆ ಅನೇಕ ಮತೋದ್ಧಾರಕರೂ, ಸಾಧು ಸತ್ಪುರುಷರೂ, ಗ್ರಂಥಕರ್ತರೂ ಕನ್ನಡ ನಾಡಿನಲ್ಲಿ ಉದ್ಭವಿಸಿ ಅದರ ಸಂಸ್ಕೃತಿಯನ್ನು ಉನ್ನತಸ್ಥಿತಿಗೆ ತಂದರು. ಈ ಕಾಲಕ್ಕೆ ರಾಮಾನುಜಾಚಾರ್ಯನು ಹೊಯಿಸಳ ವಿಷ್ಣುವರ್ಧನನ ಆಶ್ರಯದಿಂದ ಶ್ರೀ ವೈಷ್ಣವ ಧರ್ಮವನ್ನು ನೆಲೆಗೊಳಿಸಿದನು. ಇದೇ ಸಮಯದಲ್ಲಿ ಮಾಧ್ವಾಚಾರ್ಯನು ದ್ವೈತ ಮತ ಸ್ಥಾಪನೆಯನ್ನು ಮಾಡಿ ದೇಶದಲ್ಲಿ ಬಲವಾದ ಧರ್ಮ ಜಾಗ್ರತೆಯನ್ನುಂಟು ಮಾಡಿದನು. ಈ ಎರಡೂ ಧರ್ಮಗಳು ಹಿಂದೂ ಮತಕ್ಕೆ ಹೊಸ ಸ್ವರೂಪವನ್ನು ತಂದುಕೊಟ್ಟವು.

ಹೀಗೆ ಈ ಉಭಯ ಮತಗಳು ಕರ್ನಾಟಕದಲ್ಲಿ ಪ್ರಧುರ್ಭಾವ ಹೊಂದುತ್ತಿರಲು ಇದೇ ಕಾಲಕ್ಕೆ ವೀರಶೈವ ಮತವು ಕರ್ನಾಟಕದಲ್ಲಿ ಪಸರಿಸಿ ಎಲ್ಲ ತರಗತಿಯ ಜನರಲ್ಲಿ ಒಂದು ವಿಲಕ್ಷಣ ಕ್ರಾಂತಿಯನ್ನುಂಟುಮಾಡಿತು. ಈ ಕ್ರಾಂತಿಯ ಮೂಲಕ ಕರ್ನಾಟಕ ದೇಶದ ಸಾಮಾಜಿಕ ರಾಜಕೀಯ ಮತ್ತು ಧಾರ್ಮಿಕ ಸ್ಥಿತಿಯಲ್ಲಿ ಹೊಸ ಸ್ವರೂಪವೇ ಬಂದೊದಗಿತು. ಇದರ ಇತಿಹಾಸವು ಭೋಧನಪ್ರದವೂ ಮನೋವೇಧಕವೂ ಇರುತ್ತದೆ. ಈ ಇತಿಹಾಸವನ್ನು ಕನ್ನಡ ಸಂಸ್ಕೃತಿ ಶೋಧಕರು ಕಂಡುಹಿಡಿಯುವದು ಈಗಿನ ಕಾಲಕ್ಕೆ ಅತ್ಯಂತ ಮಹತ್ವದ್ದಿರುತ್ತದೆ.

ಆದರೆ ಕರ್ನಾಟಕದ ದುರ್ದೈವದಿಂದ ಈ ಇತಿಹಾಸವನ್ನು ಕಂಡು ಹಿಡಿಯುವದು ಮಾತ್ರ ಅಷ್ಟು ಹಗುರಾದದ್ದಿರುವದಿಲ್ಲ. ಯಾಕಂದರೆ ವೀರಶೈವ ಧರ್ಮದ ಉಗಮ ಮತ್ತು ಪ್ರಸಾರ ಇವುಗಳ ಬಗ್ಗೆ ಅನೇಕ ದಂತ ಕಥೆಗಳು ಉದ್ಭವಿಸಿದ್ದು, ಇವುಗಳ ಮೂಲಕ ಈ ಕಾರ್ಯವು ದುಸ್ತರವಾಗಿರುತ್ತದೆ. ಅದರ ರಾಜಕೀಯ ಇತಿಹಾಸದ ಸ್ಥಿತಿಯಾದರೂ ಹೀಗೆಯೇ

ಆಗಿರುತ್ತದೆ. ಇದರಿಂದ ಕರ್ನಾಟಕದಲ್ಲಿ ಅತ್ಯಂತ ಮಹತ್ವದ ಪರಿಣಾಮವನ್ನುಂಟು ಮಾಡಿದ ಒಂದು ಸಮಾಜದ ಇತಿಹಾಸವೇ ಹಿಂದುಸ್ತಾನದಲ್ಲಿ ಇನ್ನೂ ಅಜ್ಞಾತಾವಸ್ಥೆಯಲ್ಲಿ ಉಳಿದಿರುತ್ತದೆ.

ವೀರಶೈವ ಸಮಾಜದ ನಿಜವಾದ ಇತಿಹಾಸವನ್ನು ಪರಿಶೋಧಿಸಲಿಕ್ಕೆ ಕೆಲವು ಮಾರ್ಗಗಳಿದ್ದು ಅವುಗಳಲ್ಲಿ ೧೧,೧೨,೧೩ ನೇ ಶತಮಾನಗಳ ಕಾಲಕ್ಕೆ ಕರ್ನಾಟಕದಲ್ಲಿದ್ದ ಬೇರೆ ಬೇರೆ ಸಮಾಜಗಳ ಪರಿಸ್ಥಿತಿಯ ಅಭ್ಯಾಸವು ಒಂದಾಗಿರುತ್ತದೆ. ಈ ಕಾಲಕ್ಕೆ ಕರ್ನಾಟಕದಲ್ಲಿ ಯಾವ ಯಾವ ಸಮಾಜಗಳಿದ್ದವು, ಅವುಗಳು ಪಾಲಿಸುತ್ತಿದ್ದ ಆಚಾರ ವಿಶೇಷಗಳಾವವು ಮತ್ತು ಈ ಸಮಾಜಗಳು ಮುಂದೆ ಯಾವ ಸ್ಥಿತಿಯನ್ನು ಹೊಂದಿದವು ಎಂಬುದನ್ನು ನಾವು ಪರಿಶೋಧಿಸಿದರೆ ವೀರಶೈವ ಸಮಾಜದ ಉಗಮ ಮತ್ತು ಅಭಿವದ್ಧಿ ಇವುಗಳ ವಿಷಯವಾಗಿ ವಿಶೇಷ ಪ್ರಕಾಶವು ಬೀಳಬಹುದಾಗಿದೆ. ಈ ಸಮಾಜಗಳ ಪರಿಸ್ಥಿತಿಯನ್ನು ಕೆಲಮಟ್ಟಿಗೆ ಶಿಲಾಶಾಸನಗಳ ಮೂಲಕ ನಾವು ಕಂಡು ಹಿಡಿಯಬಹುದಾಗಿದೆ. ಇಂಥ ಸಮಾಜಗಳಲ್ಲಿ ಕಾಳಾಮುಖ ಸಮಾಜವು ಒಂದಾಗಿದೆ.

ಈ ಕಾಳಾಮುಖರ ಶಿಲಾಲಿಪಿಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ವಿಪುಲವಾಗಿ ಉಪಲಬ್ಧವಿರುತ್ತವೆ. ಅವುಗಳ ಮೇಲಿಂದ ಕೆಳಗಿನ ಸಂಗತಿಗಳು ತಿಳಿದು ಬರುತ್ತವೆ.

ವೀರಶೈವರು ಹ್ಯಾಗೆ ಆಗಮಗಳನ್ನು ಮನ್ನಿಸುತ್ತಾರೋ ಹಾಗೆಯೇ ಈ ಕಾಳಾಮುಮುಖರೂ ಅವುಗಳನ್ನು ಮನ್ನಿಸುತ್ತಿದ್ದ ಹಾಗೆ ಕಂಡು ಬರುತ್ತದೆ. ಅವರು ಈ ಶಿಲಾಲಿಪಿಗಳಲ್ಲಿ "ಶಿವಾಗಮ ನಿರತ" ರೆಂತಲೂ, "ಶಿವಧರ್ಮ ಪರಿಪಾಲಕ" ರೆಂತಲೂ ವರ್ಣಿಸಲ್ಪಟ್ಟಿರುವರು. ಅದರಂತೆಯೇ ಅವರು ಶಿವಾರಾಧನ, ಶಿವಪೂಜಾದಿ ಕರ್ಮಗಳಲ್ಲಿ ಅಸಕ್ತರೆಂತಲೂ ಶಿವಕಥೆಗಳಲ್ಲಿ ಲಾಲಸೆಯುಳ್ಳವರೆಂತಲೂ ಶೈವರೆಂತಲೂ ಉಲ್ಲೇಖಿಸಲ್ಪಟ್ಟಿದ್ದಾರೆ. ಇದರಿಂದ ಇವರು ಆಗಮಧರ್ಮಿಗಳಾಗಿದ್ದದ್ದು ಸ್ಪಷ್ಟವಾಗುತ್ತದೆ.

ಹೀಗೆ ಇವರು ಆಗಮಧರ್ಮಿಗಳಾಗಿದ್ದರೂ ವೀರಶೈವರಂತೆ ಷಟಸ್ಥಲ ಶಾಸ್ತ್ರವನ್ನು ಅವಲಂಬಿಸಿದಂತೆ ತೋರುವದಿಲ್ಲ. ಅದರಂತೆ ಅವರಿಗೆ ಅಷ್ಟಾವರಣಗಳೂ ಪಂಚಾಚಾರಗಳೂ ಇರಲಿಲ್ಲ. ಹ್ಯಾಗೆ ವೀರಶೈವ ಜಗದ್ಗುರುಗಳ ಮತ್ತು ಅವರ ಇತರ ಧಾರ್ಮಿಕ ವರ್ಗದವರ ಬಿರುದುಗಳಲ್ಲಿ ಈ ಶಬ್ದಗಳು ಉಪಲಬ್ದವಾಗುತ್ತವೆಯೋ ಹಾಗೆ ಈ ಕಾಳಾಮುಖರ ಬಿರುದುಗಳಲ್ಲಿ ಇವು ಉಪಲಬ್ದವಾಗುವದಿಲ್ಲ. ಹಿಂದುಸ್ಥಾನದಲ್ಲಿ ಆಗಮ ಧರ್ಮಗಳು ಬೇರೆ ಬೇರೆ ಕಾಲಗಳಲ್ಲಿ ಮತ್ತು ದೇಶಗಳಲ್ಲಿ ಬೇರೆ ಬೇರೆ ಅನೇಕವಿದ್ದ ಹಾಗೆ ತೋರಿಬರುತ್ತದೆ. ಧರ್ಮಿಗಳಲ್ಲಿ ಈಗ ಶಿವಸಿದ್ಧಾಂತಿಗಳು ದಕ್ಷಿಣ ದೇಶದಲ್ಲಿ ಕಾಶ್ಮೀರಿ ಶೈವರು ಕಾಶ್ಮೀರದಲ್ಲಿ. ಆರಾಧ್ಯರು ತೆಲುಗಾಣ್ಯದಲ್ಲಿ ಮತ್ತು ವೀರಶೈವರು ಕರ್ನಾಟಕದಲ್ಲಿ ಉಳಿದಿರುತ್ತಾರೆ. ಆದರೆ ಮೊದಲಿನ ಕಾಲದಲ್ಲಿ ಈ ಧರ್ಮಗಳಲ್ಲದೆ ಕಾಳಾಮುಖ ಪಾಶುಪಥ ಮೊದಲಾದ ಇನ್ನೂ ಕೆಲವು ಆಗಮ ಧರ್ಮಗಳು ಅಸ್ತಿತ್ವದಲ್ಲಿ ಇದ್ದಹಾಗೆ ತಿಳಿದು ಬರುತ್ತದೆ, ಈ ಧರ್ಮಗಳು ೧೦-೧೨ ಶತಮಾನಗಳಲ್ಲಿ ಕರ್ನಾಟಕದಲ್ಲಿ ಇದ್ದವೆಂಬುದು ಶಿಲಾ ಶಾಸನಗಳಿಂದ ತಿಳಿದುಬರುತ್ತದೆ. ಆದರೆ ಮುಂದೆ ಈ ಧರ್ಮಿಯರೆಲ್ಲರೂ ವೀರಶೈವ ಸಮಾಜದಲ್ಲಿ ಸೇರ್ಪಡೆಯಾದಂತೆ ತೋರುತ್ತದೆ.

ಸದ್ಯದ ಕಾಲದಲ್ಲಿ ಕರ್ನಾಟಕದಲ್ಲಿ ಅಸಂಖ್ಯ ಮಹತ್ವದ ದೇವಾಲಯುಗಳಲ್ಲಿ ಹ್ಯಾಗೆ ಜಂಗಮರು ಪೂಜಾದಿಕಾರ್ಯಗಳನ್ನು ನಿರ್ವಹಿಸುತ್ತಾರೋ ಹಾಗೆ ೧೧ ರಿಂದ ೧೩ ನೇ ಶತಮಾನದಲ್ಲಿ ಕಾಳಾಮುಖರು ಅನೇಕ ಶಿವಾಲಯುಗಳಲ್ಲಿದ್ದುಕೊಂಡು ಅಲ್ಲಿ ಪೂಜಾರ್ಚನಾದಿಗಳನ್ನು ತೀರಿಸುತ್ತಿದ್ದುದು ತಿಳಿದುಬರುತ್ತದೆ. ಈ ಕಾಳಾಮುಖರ ಮಹತ್ವದ ದೇವಾಲಯುಗಳಲ್ಲಿ ಬಳ್ಳಿಗಾವಿಯಲ್ಲಿಯ ಪಂಚಲಿಂಗನ ದೇವಾಲಯುವು ಪ್ರಖ್ಯಾತವಾಗಿದ್ದಿತು. ಅವರ ಶಿಲಾಶಾಸನಗಳು ವಿಜಾಪೂರ ಮತ್ತು ಬೆಳಗಾವ ಜಿಲ್ಲೆಗಳಲ್ಲಿಯು ದೇವಾಲಯುಗಳಲ್ಲಿ ಅನೇಕ ಕಡೆಗೆ ದೊರೆಯುತ್ತವೆ. ಇದರ ಮೇಲಿಂದ ಈ ಸಮಾಜದ ವಿಸ್ತಾರವು ಎಷ್ಟು ದೂರದವರೆಗೆ ಕರ್ನಾಟಕದಲ್ಲಿ ಹಬ್ಬಿತ್ತೆಂಬುದು ತಿಳಿದು ಬರುತ್ತದೆ.

ಈ ಕಾಳಾಮುಖರು ಕಾಲಕ್ಕೆ ಬಹಳ ವರ್ಚಸ್ಸುಳ್ಳವರಾಗಿದ್ದರೆಂತಲೂ ಕಂಡುಬರುತ್ತದೆ. ಅವರ ದೇವಾಲಯುಗಳಿಗೆ ಅನೇಕ ಚಾಲುಕ್ಯ

ಮತ್ತು ಕಲಚೂರ್ಯವಂಶದ ರಾಜರುಮಹತ್ವದ ದೇಣಿಗೆಗಳನ್ನು ಕೊಟ್ಟಿದ್ದಾರೆ. ೧೨ ನೇ ಶತಮಾನದಲ್ಲಿ ಬಹು ಪ್ರಸಿದ್ಧಿಗೆ ಬಂದ ಮಂಡಳಾಧೀಶ್ವರರಾದ ಬನವಾಸಿಯ ಕೇಶಿ ರಾಜನೂ ಪುಲಿಗೇರಿಯ ಬೊಮ್ಮರಸನೂ ಈ ಕಾಳಾಮುಖರ ಅನುಯಾಯಿಗಳಾಗಿದ್ದರು, ಅವರು ಈ ಕಾಳಾಮುಖರ ದೇವಾಲಯಗಳಿಗೆ ಬೆಲೆಯುಳ್ಳ ದೇಣಿಗೆಗಳನ್ನು ಕೊಟ್ಟಿರುವರು. ಇದಲ್ಲದೆ ಆಗಿನ ಪ್ರಸಿದ್ಧ ವರ್ತಕರಾದ ವೀರಬಣಂಜುಗಳೂ ಕೂಡ ಈ ಕಾಳಾಮುಖರಿಗೆ ಅನುಯಾಯಿಗಳಾಗಿ ಅನೇಕ ಬೆಲೆಯುಳ್ಳ ದಾನಗಳನ್ನು ಕೊಟ್ಟಿರುವರು ಇದರಿಂದ ಇವರ ದೇವಾಲಯಗಳು ಆ ಕಾಲಕ್ಕೆ ಅತ್ಯಂತ ವೈಭವದಿಂದ ಶೋಭಿಸುತಿದ್ದವು. ಆದರೆ ಆಗಿನ ಶಿವಾಲಯಗಳಲ್ಲಿ ಈ ಕಾಲಕ್ಕೆ ಕಾಳಾಮುಖರಂತೆ ಜಂಗಮರು ಅರ್ಚಕರಾಗಿದ್ದುದು ಕಂಡುಬರುವುದಿಲ್ಲ. ಆದರೆ ಈ ಅವಧಿಯ ತರುವಾಯ ಅವರು ಕಂಡು ಬರುತ್ತಾರೆ, ಆದ್ದರಿಂದ ಈ ಮೇಲಿನ ಕಾಳಾಮುಖ ಪೂಜಕರೆಲ್ಲರೂ ಹಿಂದುಗಡೆ ವೀರಶೈವ ಸಮಾಜದಲ್ಲಿ ಸೇರ್ಪಡೆಯಾಗಿರಬಹುದೆಂಬ ಊಹೆಗೆ ಆಸ್ಪದವಾಗುತ್ತದೆ.

ವೀರಶೈವ ಸಮಾಜದಲ್ಲಿ ಈಗ ಅನೇಕ ಮಠಾಧಿಪತಿಗಳಿರುವಷ್ಟೇ, ಹಾಗೆಯೇ ಈ ಕಾಳಾಮುಖ ಸಮಾಜದಲ್ಲಿ ಅನೇಕ ಮಠಾಧಿಪತಿಗಳು ಇದ್ದರು ಮತ್ತು ಇವರ ಮಠಗಳು ಕರ್ನಾಟಕದಲ್ಲಿ ಅನೇಕ ಕಡೆಗೆ ಅನೇಕವಿದ್ದ ಹಾಗೆ ಕಂಡು ಬರುತ್ತದೆ. ಇವರ ಹೆಸರುಗಳು ರುದ್ರಶಕ್ತಿ ದೇವ, ಜ್ಞಾನ ಶಕ್ತಿ ದೇವಜ್ಞಾನ ಶಿವದೇವ, ಮಧುಕೇಶ್ವರದೇವ, ಧರ್ಮಶಿವದೇವ,ಕ್ರಿಯಾ ಶಕ್ತಿದೇವ, ಎಂದು ಮೊದಲಾಗಿ ಇದ್ದವು. ಹ್ಯಾಗೆ ವೀರಶೈವರಲ್ಲಿ ಹಿರಿಯ ಮಠಗಳು ಉಂಟೋ ಹಾಗೆಯೇ ಈ ಕಾಳಾಮುಖರಲ್ಲಿಯೂ ಈ ಹಿರೇಮಠಗಳು ಇದ್ದವು. ಇವುಗಳ ಅಧಿಪತಿಗಳು ಹಿರಿಯ ಮಠದಾಚಾರ್ಯರ್ ಎಂದು ಕರೆಯಲ್ಪಟ್ಟಿರುತ್ತಾರೆ. ಇದಲ್ಲದೆ ಈ ಕಾಳಾಮುಖರು "ಮಾಹೇಶ್ವರ" ರೆಂತಲೂ "ಅಸಾಂಖ್ಯಾತ ಮಹಾಗಣಂ" ಗಳೆಂತಲೂ ಅನೇಕ ಕಡೆಗೆ ಕರೆಯಲ್ಪಟ್ಟಿರುತ್ತಾರೆ. ಆದರೆ ಇವೇ ಹೆಸರುಗಳಿಂದ ನಾವು ವೀರಶೈವರ ಜಂಗಮ ವರ್ಗವನ್ನು ಈಗ ಕರೆಯುವದುಂಟು. ಈ ಯಾವತ್ತು ಸಂಗತಿಗಳ ಮೇಲಿಂದ

ವೀರಶೈವ ಸಮಾಜಕ್ಕೂ ಕಾಳಾಮುಖಿ ಸಮಾಜಕ್ಕೂ ಎಷ್ಟು ನಿಕಟ ಸಂಬಂಧ ವಿತ್ತೆಂಬುದು ಗೊತ್ತಾಗುತ್ತದೆ.

ವೀರಶೈವರಲ್ಲಿರುವ ಈಗಿನ ಸಮಾಜದ ರಚನೆಯು ಪಂಚಾಚಾರ್ಯ ರಿಂದಲೇ ನಿರ್ಮಿಸಲ್ಪಟ್ಟಿರುತ್ತದೆಂದು ಬಹು ಜನರ ತಿಳುವಳಿಕೆ ಇದೆ. ಇನ್ನು ಬೇರೆ ಕೆಲವರು ಈ ಮಠಗಳ ಸಂಸ್ಥೆಯು ಬಸವೇಶ್ವರನ ತರುವಾಯ ಉದ್ಭವಿ ಸಿತೆಂದು ಪ್ರತಿಪಾದಿಸುವುದುಂಟು. ಆದರೆ ಕಾಳಾಮುಖ ಮಠಗಳ ಮೇಲ್ಕಂಡ ಉಲ್ಲೇಖನಗಳನ್ನು ವಿಚಾರಮಾಡಿ ನೋಡಿದರೆ ಹೀಗೆ ಪ್ರತಿಪಾದಿಸು ವವರು ತಮ್ಮ ಅಭಿಪ್ರಾಯಗಳನ್ನು ಬದಲು ಮಾಡಬೇಕಾಗುತ್ತದೆಂದು ತೋರದೆ ಇರಲಾರದು.

ಕಾಳಾಮುಖರು ಹೀಗೆ ಆಗಮ ಧರ್ಮಾನುಯಾಯಿಗಳಾಗಿದ್ದರೂ ಅವರು ಬ್ರಾಹ್ಮಣ ವಿರೋಧಿಗಳಾಗಿದ್ದುದು ಶಿಲಾಲೇಖಗಳಿಂದ ತಿಳಿದು ಬರುವದಿಲ್ಲ. ಈ ಲೇಖಗಳಲ್ಲಿ ಕಟ್ಟಕಡೆಗೆ ಬ್ರಾಹ್ಮಣರಿಗೆ ಸ್ತುತಿಪರವಾಗಿ ರುವ ಉಲ್ಲೇಖಗಳು ಯಾವಾಗಲೂ ಬರುವದುಂಟು. ಅಂದರೆ ಧರ್ಮ ಶಾಸನಕ್ಕೆ ವಿರೋಧವಾಗಿ ವರ್ತಿಸುವವರು ಬ್ರಾಹ್ಮಣರನ್ನೂ ಗೋವೃಂದ ವನ್ನೂ ಕೊಂದು ಹಾಕಿದ ಪಾಪಕ್ಕೆ ಒಳಗಾಗುವರೆಂದು ಬಹುಶ ಹೇಳಲ್ಪಟ್ಟಿ ರುತ್ತದೆ. ಆದರೆ ಇಂಥ ವಾಕ್ಯಗಳಲ್ಲಿ ಜಂಗಮರ ಉಲ್ಲೇಖವಿರುವದಿಲ್ಲೆಂಬು ದನ್ನು ನಾವು ಲಕ್ಷಿಸತಕ್ಕದ್ದಾಗಿದೆ.

ಈ ಕಾಳಾಮುಖರ ಆಚರಣೆಗಳಲ್ಲಿ ಬ್ರಾಹ್ಮಣರ ಕರ್ಮಗಳು ವಿಶೇಷ ವಾಗಿರುವದು ಕಂಡುಬರುತ್ತದೆ. ಅವರು "ಶ್ರುತ್ಯರ್ಥಾಲಂಕಾರ ಸುವಾಕ್ಯಂ" ಸ್ನಾನ ಜಪ ಹೋಮ ನಿಯಮ ಧ್ಯಾನಾನುಷ್ಠಾನ ಶೀಲ ತತ್ಪ ರನಂ' ಎಂದು ಮೊದಲಾಗಿ ವರ್ಣಿಸಲ್ಪಟ್ಟಿರುವದು. ಅಂದರೆ ಅವರು ಸ್ಮೃತಿಧರ್ಮವನ್ನು ಜಪಹೋಮ ಮೊದಲಾದ ಕಾರ್ಯಗಳನ್ನೂ ಜರುಗಿ ಸುತ್ತಲಿದ್ದುದು ತೋರಿಬರುತ್ತದೆ. ಅಂದರೆ ಕಾಳಾಮುಖರು ಆಗಮ ಧರ್ಮಾನುಯಾಯಿಗಳಾಗಿದ್ದರೂ ಹ್ಯಾಗೆ ವೀರಶೈವ ಧರ್ಮಕ್ಕೆ ಶಿವಶರಣರ ಕಾಲದಲ್ಲಿ ಬ್ರಾಹ್ಮಣ ಕರ್ಮವಿರಹಿತವಾದ ಒಂದು ವಿಶಿಷ್ಟ ಸ್ವರೂಪವು ಬದ

ಗಿತ್ತೋ ಆ ಬಗೆಯಾಗಿ ಕಾಳಾಮುಖ ಧರ್ಮದ ಸ್ವರೂಪವು ಇರಲಿಲ್ಲೆಂದು ತೋರಿಬರುತ್ತದೆ.

ಶ್ರೀ ಚನ್ನಮಲ್ಲಪ್ಪ ಗಲಗಲಿಯವರು ಜಯಕರ್ನಾಟಕದಲ್ಲಿ ತಮ್ಮ "ಲಿಂಗಿಗಳು" ಎಂಬ ಲೇಖದಲ್ಲಿ ಈ ಕಾಳಾಮುಖ ಮುನಿಗಳಿಗೆ ಗೊರವರೆಂದೂ ಅವರಲ್ಲಿಯ ಪೂಜಾರಿಗಳಿಗೆ ಜೀಯರೆಂದೂ ಮೊದಲು ಉಪನಾಮಗಳಿದ್ದದ್ದನ್ನು ಉಲ್ಲೇಖಿಸಿರುವರು. ಮತ್ತು ಈಗ ದಕ್ಷಿಣ ಕರ್ನಾಟಕದಲ್ಲಿರುವ ಜೀಯರು ಈ ಕಾಳಾಮುಖರಿಗೆ ಸಂಬಂಧಪಟ್ಟವರಿರಬಹುದೆಂತಲೂ ಅವರು ಊಹಿಸಿರುವರು. ಇದು ವಿಚಾರಾರ್ಹವಾಗಿದೆ. ಈ ಗೊರವರು ಮತ್ತು ಜೀಯರು ದೇವಾಲಯಗಳಲ್ಲಿ ಈಗಲೂ ಇದ್ದು ಇವರು ಕೆಲವೆಡೆಗಳಲ್ಲಿ ವೀರಶೈವ ಸಮಾಜದ ಅನುಯಾಯಿಗಳಾಗಿಯೂ ಬೇರೆ ಕೆಲವೆಡೆಗಳಲ್ಲಿ ಜನಿವಾರ ಧಾರಣ ಮಾಡಿ ಬ್ರಾಹ್ಮಣ ವೀರಶೈವರ ಮಿಶ್ರ ಕರ್ಮಗಳನ್ನು ಆಚರಿಸುವದಾಗಿ ತೋರಿಬರುತ್ತವೆ.

ಆಗಮ ಧರ್ಮಗಳು ಪೂರ್ವ ಕಾಲದಲ್ಲಿ ಅನೇಕವಿದ್ದು ಅವುಗಳ ಅನುಯಾಯಿಗಳನೇಕರು ವರ್ಣಾಶ್ರಮ ಧರ್ಮಕ್ಕೆ ಸಂಬಂಧಪಟ್ಟು ಬ್ರಾಹ್ಮಣರಂತೆ ಆಚರಿಸುತ್ತಿದ್ದ ಹಾಗೆ ತೋರುತ್ತದೆ. ಆದರೆ ಹಿಂದುಗಡೆ ಬಸವೇಶ್ವರನ ಕಾಲಕ್ಕೆ ಶುದ್ಧವಾದ ಷಟ್‌ಸ್ಥಳದ ಆಚರಣೆಗಳಿಗೆ ಅನುಸಾರವಾಗಿ ಮೊದಲಿನ ಆಗಮ ಧರ್ಮಗಳ ಸ್ವರೂಪವು ಬದಲಾಯಿಸಿ ಹೊಸದೊಂದು ತರದ ಆಗಮ ಧರ್ಮವು ಪ್ರಕಟವಾದಂತೆ ತೋರುತ್ತದೆ. ಇದು ಕಾಳಾಮುಖದ ವೃತ್ತಾಂತಗಳಿಂದ ಊಹಿಸಲ್ಪಡಬಹುದಾಗಿದೆ. ಹೀಗೆ ಮೊದಲಿನ ಆಗಮ ಧರ್ಮಗಳು ಹೋಗಿ ಬಸವೇಶ್ವರನ ಕಾಲಕ್ಕೆ ಹೊಸಸ್ವರೂಪದ ಆಗಮ ಧರ್ಮವು ಪ್ರಕಾಶಿತವಾಗಿ ಅದರಲ್ಲಿ ಮೊದಲಿನ ಆಗಮ ಧರ್ಮಗಳು ಅಡಗಿ ಹೊಸದೊಂದು ಸಮಾಜದ ರಚನೆಯಾಯಿತೆಂದು ತೋರುತ್ತದೆ. ಈ ಹೊಸ ಆಗಮ ಧರ್ಮವೆಂದರೆ ವಚನಶಾಸ್ತ್ರದಲ್ಲಿ ಕಂಡುಬರುವ ಶಿವಶರಣರ ಮಾರ್ಗವೇ ಸರಿ.

೮ ನೇ ಶತಮಾನದಿಂದ ೧೨ ನೇ ಶತಮಾನಗಳ ವರೆಗೆ ಕರ್ನಾಟಕದಲ್ಲಿ ಇದ್ದ ಪ್ರಮುಖ ಸಮಾಜಗಳಲ್ಲಿ ಕಂಡುಬರುವ ಮತ್ತೊಂದು ವಿಶೇಷ ಸಂಗತಿ ಎಂದರೆ ಅವು ಸ್ವತಂತ್ರ ಜಾತಿಗಳಂತೆ ಬಿನ್ನತೆಯಿಂದ ವರ್ತಿಸುತ್ತಿದ್ದಿಲ್ಲ ಅಂದರೆ ಅವುಗಳ ಅನುಯಾಯಿಗಳಲ್ಲಿ ಪರಸ್ಪರ ಲಗ್ನಾದಿ ವ್ಯವಹಾರಗಳೂ ಊಟ ಉಪಚಾರಗಳೂ ನಿರಾಂತಕವಾಗಿ ಸಾಗುತ್ತಿದ್ದವು. ಕಾಳಾಮುಖ ಬ್ರಾಹ್ಮಣರಾದದ್ದೂ ಬ್ರಾಹ್ಮಣರು ಜೈನರಾದದ್ದೂ, ಜೈನರು ವೀರಶೈವರಾದದ್ದು ಆಗಿಂದಾಗ್ಗೆ ಶಿಲಾಲೇಖಗಳಲ್ಲಿ ಮತ್ತು ಅವರವರ ಗ್ರಂಥಗಳಲ್ಲಿ ತೋರಿಬರುತ್ತದೆ. ಇದೇ ಪ್ರಕಾರಊಟ ಉಪಚಾರಗಳ ಸ್ಥಿತಿ ಆಗಿತ್ತು. ಈ ಪ್ರಕಾರ ಆಗಿನ ಕರ್ನಾಟಕದ ಪ್ರಮುಖ ಸಮಾಜಗಳಲ್ಲಿ ದ್ವೇಷಾಸೂಯ ಭಾವಗಳು ಇದ್ದದ್ದು ಕಂಡು ಬರುವದಿಲ್ಲ. ಈ ಸ್ಥಿತಿಯು ಇದ್ದ ಮೂಲಕ ವೀರಶೈವ ಧರ್ಮದ ಪ್ರಸಾರಕ್ಕೆ ಆಗಿನ ಕಾಲದಲ್ಲಿ ಬಹಳ ಅನುಕೂಲತೆಯು ಉಂಟಾದಂತೆ ತೋರುತ್ತದೆ.

ಈಗಿನ ಕಾಲಕ್ಕೆ ವೀರಶೈವ ಧರ್ಮದ ಉತ್ಪತ್ತಿಗೆ ಇಂಥವರೇ ಕಾರಣರಾದರೆಂತಲೂ ಸಮಾಜ ರಚನೆಯು ಇಂಥವರಿಂದಲೇ ಆಯಿತೆಂತಲೂ ಭಾವಿಸಲ್ಪಟ್ಟು ಅನೇಕ ವಿವಾದಗಳೂ ಚಳವಳಿಗಳೂ ಹುಟ್ಟುತ್ತಲಿವೆ. ಉದಾಹರಣಾರ್ಥವಾಗಿ ವೀರಶೈವ ಧರ್ಮಸ್ಥಾಪನೆಗೆ ರೇಣುಕ ದಾರುಕ ಮೊದಲಾದ ಪಂಚಾಚಾರ್ಯರು ಕಾರಣರಾದರೆಂದು ಕೆಲವರು ತಿಳಿಯುತ್ತಾರೆ. ಮತ್ತೆ ಕೆಲವರು ಬಸವೇಶ್ವರನಿಂದಲೇ ವೀರಶೈವ ಸಮಾಜದ ರಚನೆಯಾಯಿತೆಂದು ಪ್ರತಿಪಾದಿಸುತ್ತಾರೆ. ಆದರೆ ಸಮಾಜ ಶಾಸ್ತ್ರದ ಪ್ರಕಾರ ಕೇವಲ ಹೀಗೆ ಒಬ್ಬ ವ್ಯಕ್ತಿಯು ಕಡೆಯಿಂದ ಅವರ ಸಂಸ್ಕರಣ ಕಾರ್ಯಗಳು ನಿರ್ವಹಿಸಲ್ಪಡದೆ ಸಮಾಜದ ವಿಕಾಸವು ಕ್ರಮೇಣ ಪರಿಸ್ಥಿತಿಗೆ ಅನುಸಾರವಾಗಿ ಹೊಂದುತ್ತ ಹೋಗುತ್ತದೆಂದು ತಿಳಿಯಲ್ಪಡುತ್ತದೆ. ಹಿಂದೂ ಧರ್ಮದ ಅಭಿವೃದ್ಧಿಯು ಮತ್ತು ಪ್ರಸಾರವು ಮೊದಲಿನಿಂದ ಈವರೆಗೆ ಹೀಗೆಯೇ ಇದ್ದು ವೀರಶೈವ ಧರ್ಮವಾದರೂ ಇದಕ್ಕೆ ಅಪವಾದವಾಗಿರುವುದಿಲ್ಲ. ನಾವು ೧೦ ನೇ ಶತಮಾನದಿಂದ ೧೩ ನೇ ಶತಮಾನದವರೆಗೆ ಇದ್ದ ಕರ್ನಾಟಕ ಸಮಾಜದ ಸ್ಥಿತಿಯನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಮೇಲ್ಕಂಡ ವಿಧಾನವೇ ದೃಢವಾಗುವದಾಗಿ ತೋರುತ್ತದೆ. ಇದಕ್ಕೆ ಕಾಳಾಮುಖ ಸಮಾಜದ ಉದಾಹರಣೆಯೇ ಅತ್ಯುತ್ತಮವಾಗಿರುತ್ತದೆ.

# ಜೈನ, ವೀರಶೈವ, ಬ್ರಾಹ್ಮಣ ಸಂಸ್ಕೃತಿಗಳು

ಕನ್ನಡ ವಾಙ್ಮಯವು ಈಗಿನಕಾಲಕ್ಕೆ ಜೈನ, ವೀರಶೈವ, ಬ್ರಾಹ್ಮಣ ಎಂದು ಮೂರು ವಿಭಾಗಗಳಾಗಿ ವಿಂಗಡಿಸಲ್ಪಡುವದುಂಟು. ಈ ವಿಭಾಗಗಳಿಗನುಗುಣವಾಗಿ ಕನ್ನಡ ಗ್ರಂಥಕಾರರೂ ಕೂಡಾ ಬೇರೆ ಬೇರೆಯಾಗಿ ಹೇಳಲ್ಪಡುತ್ತಲಿದ್ದಾರೆ. ಹೀಗೆ ವಿಭಾಗಿಸುವದರಿಂದ ಈ ಮೂರೂ ಸಂಸ್ಕೃತಿಗಳ ಅಭ್ಯಾಸಕ್ಕೋಸ್ಕರ ಅನುಕೂಲವಾಗುವದೆಂಬುದು ನಿಜವು. ಆದರೆ ಇಂಥ ವಿಭಾಗಗಳ ಮೂಲಕ ಈ ಮೂರೂ ಸಮಾಜಗಳ ಪರಸ್ಪರ ಸಂಬಂಧದ ವಿಷಯವಾಗಿ ತಪ್ಪು ಅಭಿಪ್ರಾಯಗಳುಂಟಾಗಲು ಕಾರಣವಾಗಿರುತ್ತದೆ. ಅವುಗಳಲ್ಲಿ ಕೆಲವುಗಳನ್ನು ನಾವು ಇಲ್ಲಿ ವಿವರಿಸುತ್ತೇವೆ.

ಜೈನ, ವಾಙ್ಮಯದಲ್ಲಿ ಕೆಲವೊಂದು ಕಾಲದಲ್ಲಿ ಬಹುಜನ ಗ್ರಂಥಕಾರರಾದರು. ಹಾಗೆಯೇ ವೀರಶೈವ ಮತ್ತು ಬ್ರಾಹ್ಮಣ ವಾಙ್ಮಯಗಳಲ್ಲಿಯೂ ಅನೇಕರು ಉಂಟಾಗಿದ್ದಾರೆ. ಇಷ್ಟೇ ಅಲ್ಲ, ಈ ವಾಙ್ಮಯಗಳ ಕಾಲಗಳೂ ಕೂಡಾ ನಿರ್ಧರಿಸಲ್ಪಟ್ಟಿದ್ದು ಅವು ೯ನೇ ಶತಮಾನದಿಂದ ೧೨ನೇ ಶತಮಾನದ ವರೆಗೆ ಜೈನ ವಾಙ್ಮಯ ಕಾಲವೆಂತಲೂ, ೧೨ನೇ ಶತಮಾನದಿಂದ ೧೫ನೇ ಶತಮಾನದ ವರೆಗೆ ವೀರಶೈವ ವಾಙ್ಮಯವೆಂತಲೂ, ೧೫ನೇ ಶತಮಾನದ ತರುವಾಯ ಬ್ರಾಹ್ಮಣ ವಾಙ್ಮಯವೆಂತಲೂ ಹೇಳಲ್ಪಡುತ್ತದೆ. ಈ ಪ್ರಕಾರ ಕಾಲಗಳು ಉಂಟಾದ್ದರ ಕಾರಣಗಳನ್ನು ಕೂಡಾ ನಮ್ಮ ವಾಙ್ಮಯ ತಜ್ಞರು ಹೇಳುವದುಂಟು. ಕರ್ನಾಟಕದಲ್ಲಿ ಜೈನರು ಮೊದಲು ಸುಧಾರಣೆಯನ್ನು ಮಾಡಿದರೆಂತಲೂ ಆದ್ದರಿಂದ ಅವರಲ್ಲಿ ಬಹುಜನ ವಿದ್ವಾಂಸರಾದರೆಂತಲೂ, ಅವರು ಕನ್ನಡ ಸಂಸ್ಕೃತಗಳಲ್ಲಿ ಬಹು ಪಂಡಿತರಾದ್ದರಿಂದ ಅವರು ನಿರ್ಮಾಣ ಮಾಡಿದ ವಾಙ್ಮಯವು ಬಹು ಕ್ಲಿಷ್ಟವಾದುದಾಯಿತೆಂತಲೂ ಅದು ಜನರಿಗೆ ತಿಳಿಯದ್ದರಿಂದ ವೀರಶೈವ ಗ್ರಂಥಕಾರರು ಉಂಟಾಗಿ ಅವರು ಬಲು ಸುಲಭವಾದ ವಾಙ್ಮಯವನ್ನು ರಚಿಸಿದರೆಂತಲೂ ಹೇಳಲ್ಪಡುತ್ತದೆ. ಈ ವೀರಶೈವ ಗ್ರಂಥಕಾರರು ಸಂಸ್ಕೃತದ ರೀತಿಯನ್ನು ಅನುಸರಿಸದೆ ಅವರು ತಮ್ಮದೇ ಆದ

ಕೆಲವೊಂದು ಸುಲಭ ಶೈಲಿಯನ್ನು ಕಂಡು ಹಿಡಿದರು. ಇವು ವಚನ, ರಗಳೆ, ಷಟ್ಪದಿಗಳೇ ಇವೆ. ಇದರಿಂದ ಬಹು ಜನ ಸಮಾಜವು ಅವರನ್ನು ಹಿಂಬಾಲಿಸ ಹತ್ತಿದ್ದರಿಂದ ಬ್ರಾಹ್ಮಣರ ಪೂರ್ವದ ವರ್ಚಸ್ಸು ನಾಡಿನಲ್ಲಿ ಕಡಿಮೆಯಾಗ ಹತ್ತಿತೆಂತಲೂ ಆಗ ಬ್ರಾಹ್ಮಣರು ಸುಲಭ ಶೈಲಿಯನ್ನು ಅಂಗೀಕರಿಸಿ ಜನರಿಗೆ ಪ್ರಿಯವಾಗಿರುವ ರಾಮಾಯಣ ಮಹಾಭಾರತಗಳನ್ನು ಕನ್ನಡದಲ್ಲಿ ಭಾಷಾಂತರಿಸಿದರೆಂತಲೂ ಹೀಗೆ ಕನ್ನಡ ನಾಡಿನ ವಾಙ್ಮಯದ ಕತೆಯನ್ನು ನಮ್ಮ ಕರ್ನಾಟಕ ವಿದ್ವಾಂಸರು ಈ ವರೆಗೂ ಹೇಳುತ್ತ ಬಂದಿದ್ದಾರೆ. ಆದರೆ ಈ ವಿವರಣೆಗಳು ತಪ್ಪೆಂದು ನಮಗೆ ತೋರುತ್ತದೆ.

ಕೆಲವೊಂದು ಸಮಾಜದ ವಾಙ್ಮಯವು ಹೀಗೆ ಒಂದು ಕಾಲದಲ್ಲಿ ಹೆಚ್ಚಾಗುತ್ತ ಬಂದರೂ ಆಗ ಬೇರೆ ಸಮಾಜಗಳ ವಾಙ್ಮಯಗಳು ಎಷ್ಟು ಮಾತ್ರವೂ ಉಂಟಾಗಲಿಲ್ಲೆಂಬ ತಿಳುವಳಿಕೆಯು ತಪ್ಪಾದದ್ದಾಗಿದೆ. ಜೈನರು ತಮ್ಮ ವಾಙ್ಮಯವನ್ನು ಹೆಚ್ಚಿಸುತ್ತಿದ್ದ ಕಾಲದಲ್ಲಿಯೇ ಬ್ರಾಹ್ಮಣ ಸಮಾಜದಲ್ಲಿ ಗ್ರಂಥಕಾರರೂ ವಿದ್ವಾಂಸರೂ ಆಗಿ ಹೋಗಿದ್ದಾರೆ. ಆಗ ಬ್ರಾಹ್ಮಣರು ಕನ್ನಡ ವಾಙ್ಮಯವನ್ನು ಅನುಸರಿಸದೆ, ಅದರ ಬದಲು ಸಂಸ್ಕೃತವನ್ನು ಪೋಷಿಸುತ್ತ ಬಂದರು. ೧೧ನೇ ಶತಮಾನದಲ್ಲಿ ಹಿಂದೂ ಧರ್ಮಶಾಸ್ತ್ರಕಾರನಾದ ವಿಜ್ಞಾನೇಶ್ವರನು ಕಲ್ಯಾಣ ಪಟ್ಟಣದಲ್ಲಿ ವಾಸಿಸುತ್ತಿದ್ದನು. ಅವನು ರಚಿಸಿದ ಗ್ರಂಥವು ಹಿಂದೂ ಕಾಯಿದೆಯಲ್ಲಿ ಈಗಲೂ ಮನ್ನಣೆಯನ್ನು ಹೊಂದಿದೆ. ಇದೇ ಮೇರೆಗೆ ಅನೇಕ ಬ್ರಾಹ್ಮಣ ಪಂಡಿತರು ೧೪ನೆ ಶತಮಾನದಲ್ಲಿ ಆಗಿಹೋದ ವಿದ್ಯಾರಣ್ಯ ಸಾಯಣಾಚಾರ್ಯರ ವರೆಗೂ ಕಾಲಕಾಲಕ್ಕೆ ಪ್ರಸಿದ್ಧಿಗೆ ಬಂದಿದ್ದಾರೆ. ಹೀಗೆ ಬ್ರಾಹ್ಮಣ ಪಂಡಿತರು ಜೈನ ವೀರಶೈವ ಗ್ರಂಥಕಾರರ ಕಾಲದಲ್ಲಿಯೂ ಉಂಟಾಗಿದ್ದಾರೆ.

ಅದರಂತೆಯೇ ಜೈನ ಗ್ರಂಥಕಾರರ ಹೆಚ್ಚಳದ ಕಾಲದಲ್ಲಿ ಅನೇಕ ಶಿವಶರಣರೂ ಕೂಡಾ ಆಗಿ ಹೋಗಿದ್ದಾರೆ, ಅವರಲ್ಲಿ ಕೇಶಿರಾಜ, ದೇವರದಾಸಿಮಯ್ಯ, ಶಂಕರದಾಸಿಮಯ್ಯ, ಬಾಹೂರ ಬ್ರಹ್ಮಯ್ಯ ಮೊದಲಾದವರು ಮುಖ್ಯರು. ಅವರು ಕೆಲವರು ವಚನಕಾರರೂ ಕೆಲವ

ರು ಗ್ರಂಥಕಾರರೂ ಆಗಿದ್ದಾರೆ. ಮುಂದೆ ವೀರಶೈವರಲ್ಲಿ ಶ್ರೀ ಬಸವೇಶ್ವರನು ಪ್ರಸಿದ್ಧಿಗೆ ಬರಲಾಗಿ ಅವನ ಕಾಲದಲ್ಲಿ ಅಸಂಖ್ಯ ಶಿವಶರಣರು ಉಗಮ ಹೊಂದಿ ಉಚ್ಚ ಧಾರ್ಮಿಕ ವಾಙ್ಮಯವನ್ನು ಉಂಟು ಮಾಡಿದರು. ಈ ವಾಙ್ಮಯದಲ್ಲಿ ವಚನ ವಾಙ್ಮಯವೇ ಅತ್ಯಂತ ಮಹತ್ವವಾದದ್ದು, ಆಗ ಬಹುಜನ ವಚನಕಾರರು ಉದಯಹೊಂದಿ ವೀರಶೈವ ಧರ್ಮವನ್ನು ಎಲ್ಲ ಕಡೆಗೂ ಪಸರಿಸಿದರು, ಇವರ ಚಳುವಳಿಯ ಪರಿಣಾಮವಾಗಿ ನಾಡಿನಲ್ಲಿ ವೀರಶೈವ ಮತವು ಬಲಿಯಿತು. ಇದಕ್ಕೂ ಮೊದಲು ಜೈನ ವಾಙ್ಮಯವು ಅಸ್ತಿತ್ವದಲ್ಲಿದ್ದುದು ಕಂಡುಬರುತ್ತದೆ.

ವೀರಶೈವ ವಾಙ್ಮಯ ಪ್ರಸಾರದ ಮೂಲಕ ಜೈನ ಮತವು ನಷ್ಟವಾಯಿತೆಂದು ಅನೇಕರು ಭಾವಿಸಿರುತ್ತಾರೆ. ಇಷ್ಟೇ ಅಲ್ಲ, ಜೈನರು ವೀರಶೈವರಿಂದ ಬಹು ಹೆಚ್ಚಾಗಿ ಹಿಂಸಿಸಲ್ಪಟ್ಟವರಾಗಿ ವೀರಶೈವ ಮತಾವಲಂಬಿಗಳಾದರೆಂತಲೂ ಬಹು ಜನರು ತಿಳಿದಿದ್ದಾರೆ. ಆದರೆ ಜೈನ ಧರ್ಮ ಗ್ರಂಥಗಳನ್ನು ಸಂಶೋಧಿಸಿದಲ್ಲಿ ಅನೇಕ ಮಹತ್ವದ ಜೈನ ಧರ್ಮ ಗ್ರಂಥಕಾರರು ವೀರಶೈವ ಧರ್ಮವು ಪ್ರಚಾರಹೊಂದಿದ ಕಾಲದಲ್ಲಿಯೂ ಆಗಿದ್ದುದು ಕಂಡುಬರುತ್ತದೆ. ಅವರ ಹೆಸರುಗಳು ಕೆಳಗೆ ಕೊಡಲ್ಪಟ್ಟಿವೆ. ಒಂದುವೇಳೆ ಜೈನರು ವೀರಶೈವರಿಂದ ಘೋರವಾಗಿ ಹಿಂಸಿಸಲ್ಪಟ್ಟಿದ್ದರೆ ಹೀಗೆ ಅವರಲ್ಲಿ ಮಹತ್ವದ ಗ್ರಂಥಕಾರರು ಬಸವೇಶ್ವರನ ಕಾಲದಲ್ಲಿ ಅಥವಾ ಅವನ ತರುವಾಯ ಉಂಟಾಗುತ್ತಿದ್ದಿಲ್ಲ. ಬಸವೇಶ್ವರನು ಜನಿಸಿದ ವರ್ಷವು ೧೧೩೨ ಎಂತಲೂ ಅವನು ಲಿಂಗೈಕ್ಯವಾದದ್ದು ೧೧೭೦ ರಲ್ಲಿ ಎಂತಲೂ ಭಾವಿಸಲ್ಪಟ್ಟಿರುತ್ತದೆ. ಬಸವೇಶ್ವರನ ತರುವಾಯ ಸಹ ಬಹುಕಾಲದವರೆಗೆ ವೀರಶೈವ ಧರ್ಮವು ವಿಸ್ತಾರ ಹೊಂದುತ್ತಾ ಬಂದಿದೆ. ಈ ಅವಧಿಯಲ್ಲಿ ಕಾಲಕಾಲಕ್ಕೆ ಮಹತ್ವದ ಜೈನ ಪಂಡಿತರೂ ಧರ್ಮ ಗ್ರಂಥಕಾರರೂ ಕೂಡ ಆಗಿ ಹೋಗಿದ್ದಾರೆ. ಈ ಸಂಗತಿಯು ವೀರಶೈವರು ಜೈನರ ಮೇಲೆ ಧಾರ್ಮಿಕ ದಬ್ಬಾಳಿಕೆಯನ್ನು ಮಾಡಿದರೆಂಬುದನ್ನು ಸಿದ್ಧಗೊಳಿಸುವದಿಲ್ಲ.

ಈ ಕಾಲದಲ್ಲಿ ಪ್ರಸಿದ್ಧಿಗೆ ಬಂದ ಜೈನ ಗ್ರಂಥಕಾರರ ಹೆಸರುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

೧೧೪೦ ಕರ್ಣಪಾರ್ಯ, ನೇಮಿನಾಥ ಪುರಾಣದ ಕರ್ತೃವು.

೧೧೪೫ ಎರಡನೇ ನಾಗವರ್ಮ ಇವನು ಬರೆದ ಗ್ರಂಥಗಳು ೧) ಕಾವ್ಯಾವ್ಯ ಲೋಕನ ೨) ಕರ್ನಾಟಕ ಭಾಷಾ ಭೂಷಣ ೩) ವಸ್ತು ಕೋಶ.

೧೧೪೮ ಮೇಘಚಂದ್ರ. ಈತನು ಕೆಲವು ಶತಕಗಳ ವ್ಯಾಖ್ಯಾನಕಾರನಾಗಿದ್ದಾನೆ.

೧೧೫೦ ಉದಯಾದಿತ್ಯ, ಅಲಂಕಾರ ಗ್ರಂಥ ಬರೆದಿದ್ದಾನೆ

೧೧೫೦ ಸುಮನೋಬಾಣ.

೧೧೫೦ ಚಾವುಂಡರಾಯ. ಲೋಕೋಪಕಾರ ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ.

೧೧೫೩ ವೀರಣಂದಿ ಆಚಾರಸಾರ ಗ್ರಂಥ ಬರೆದಿದ್ದಾನೆ.

೧೧೬೦ ಶಾಂತಿವರ್ಮ. ಒಬ್ಬ ಮಹತ್ವದ ಜೈನ ಗ್ರಂಥಕಾರ.

೧೧೬೦ ವೃತ್ತ ವಿಲಾಸ. ಇವನು ಬರೆದ ಗ್ರಂಥ ಧರ್ಮ ಪರೀಕ್ಷೆ.

೧೧೭೦ ಬಾಲಚಂದ್ರ. ವ್ಯಾಖ್ಯಾನಕಾರನು.

೧೧೭೦ ನೇಮಿಚಂದ್ರ. ಲೀಲಾವತಿ, ನೇಮಿನಾಥ ಪುರಾಣಗಳನ್ನು. ಬರೆದಿದ್ದಾನೆ

೧೧೮೦ ಬೊಪ್ಪಣ ಪಂಡಿತ. ನೀತಿಬೋಧಕ ಪದ್ಯಗಳು.

೧೧೮೯ ಅಗ್ಗಳ. ಚಂದ್ರಪ್ರಭ ಪುರಾಣ.

೧೧೯೫ ಆಚಣ್ಣ. ವರ್ಧಮಾನ ಪುರಾಣ.

೧೨೦೦ ಬಂಧುವರ್ಮ. ನೇಮಿನಾಥ ಚರಿತೆ, ಜೀವ ಸಂಬೋಧನೆ.

೧೨೦೦ ದೇವೇಂದ್ರಮುನಿ. ಬಾಲಗ್ರಹ ಚಿಕಿತ್ಸೆ.

೧೨೦೫ ಪಾರ್ಶ್ವ ಪಂಡಿತ. ಪಾರ್ಶ್ವನಾಥ ಪುರಾಣ.

೧೨೦೫ ಜನ್ನ. ಯಶೋಧರ ಚರಿತೆ, ಅನಂತನಾಥ ಪುರಾಣ. ಕವಿಚಕ್ರವರ್ತಿ ಎಂಬ ಬಿರುದುಳ್ಳವ.

೧೨೩೩ ಶಿಶು ಮಾಯಣ. ಅಂಜನಾ ಚರಿತ್ರೆ

೧೨೩೫ ಎರಡನೇ ಗುಣವರ್ಮ. ಪುಷ್ಪದಂತ ಪುರಾಣ.

೧೨೩೫ ಕಮಲಭವ, ಶಾಂತೀಶ್ವರ ಪುರಾಣ

೧೨೩೫ ಅಂಡಯ್ಯ. ಕಬ್ಬಿಗರ ಕಾವ.

೧೨೪೫ ಮಲ್ಲಿಕಾರ್ಜುನ. ಸೂಕ್ತಿ ಸುಧಾರ್ಣವ.
೧೨೫೪ ಮಹಾಬಲ ಕವಿ. ನೇಮಿನಾಥ ಪುರಾಣ.
೧೨೬೦ ಕೇಶಿರಾಜ. ಶಬ್ದ ಮಣಿ ದರ್ಪಣ.
೧೨೬೦ ಮಾಘಣಂದಿ ಶಾಸ್ತ್ರಸಾರ ಸಮುಚ್ಚಯ.
೧೨೭೫ ಕುಮುದೇಂದು ರಾಮಾಯಣ.
೧೩೦೦ ಯಶಶ್ಚಂದ್ರ.
೧೩೦೦ ಪದ್ಮಪ್ರಭ ವಿಂಶತಿ ರೂಪಿಣೀ ಟೀಕೆ

ಈ ಪ್ರಕಾರ ಜೈನರ ಅನೇಕ ಮಹತ್ವದ ಗ್ರಂಥಕಾರರು ಶಿವಶರಣರ ಅಭ್ಯುದಯದ ಕಾಲದಲ್ಲಿಯೂ ಅದರ ತರುವಾಯವೂ ಕೂಡ ಪ್ರಸಿದ್ಧಿಗೆ ಬಂದಿದ್ದಾರೆ. ಆದ್ದರಿಂದ ಇದು ವೀರಶೈವ ಧರ್ಮದ ಕಾಲ, ಇದು ಜೈನ ಧರ್ಮದ ಕಾಲ, ಎಂದು ಸ್ಪಷ್ಟವಾಗಿ ವಿಂಗಡಿಸುವದು ತಪ್ಪು ತಿಳುವಳಿಕೆಯಾಗಿದೆ.

ಎಲ್ಲ ಕಾಲಗಳಲ್ಲಿಯೂ ಜೈನ, ಲಿಂಗಾಯತ ಮತ್ತು ಬ್ರಾಹ್ಮಣ ಸಮಾಜಗಳಲ್ಲಿ ಪಂಡಿತರು ಉದ್ಭವಿಸಿ ತಮ್ಮ ತಮ್ಮ ಮತಗಳನ್ನು ಕುರಿತು ಉದ್ಗ್ರಂಥಗಳನ್ನು ಬರೆಯುತ್ತ ಬಂದಿದ್ದಾರೆ. ಒಂದುವೇಳೆ ಅವರಲ್ಲಿ ಪರಸ್ಪರ ಹಿಂಸೆಗಳೂ ವಿರೋಧಗಳೂ ನಡೆದಿದ್ದರೆ ಈ ರೀತಿ ಒಂದೇ ಕಾಲಕ್ಕೆ ಇಂಥ ಮಹತ್ವದ ಗ್ರಂಥಗಳು ವೀರಶೈವ ಜೈನರಲ್ಲಿ ಏಕಕಾಲಕ್ಕೆ ಅನೇಕ ವರ್ಷ ಉಂಟಾಗುತ್ತಿದ್ದಿಲ್ಲ.

ಈ ಪುರಾತನ ಕಾಲದಲ್ಲಿ ಜೈನ ಸಮಾಜವು ಉಚ್ಚ ಸ್ಥಾನದಲ್ಲಿದ್ದಿತೆಂದು ಕರ್ನಾಟಕ ಇತಿಹಾಸದಿಂದ ತಿಳಿದುಬರುತ್ತದೆ. ಸವದತ್ತಿಯ ರಟ್ಟರು, ಉತ್ತರ ಮೈಸೂರಿನ ಸಾಂತರರು, ಪಾಂಡ್ಯರು ಇವರಲ್ಲದೆ ಅನೇಕ ಮಾಂಡಲಿಕರು ಜೈನ ಧರ್ಮವನ್ನು ಹೊಂದಿದವರಾಗಿದ್ದರು. ಅವರು ಜೈನ ಗ್ರಂಥಕಾರರನ್ನು ಚೆನ್ನಾಗಿ ಪೋಷಿಸುತ್ತ ಬಂದಿದ್ದಾರೆ. ಆದರೆ ಶಿವಶರಣರಲ್ಲಿ ಬಹು ಸ್ವಲ್ಪ ಜನರು ಇಂಥ ಉಚ್ಚ ಅಧಿಕಾರಿಗಳನ್ನು ಹೊಂದಿದವರಾಗಿದ್ದರು. ಅವರೆಲ್ಲರೂ ಬಹುತರ ಸಣ್ಣ ಕೈಗಾರಿಕೆಗಳನ್ನು ಮಾಡುವವರಾಗಿದ್ದರು.

ಅವರು ಬಹುತರವಾಗಿ ಬಡವರು. ಇಂಥವರು ಉಚ್ಚ ಅಧಿಕಾರ ಸ್ಥಾನಗಳಲ್ಲಿದ್ದ ಜೈನರನ್ನು ಹಿಂಸಿಸುವದು ಶಕ್ಯ ತೋರುವದಿಲ್ಲ.

ಆದರೆ ಈ ಶಿವಶರಣರು ಉಚ್ಚ ಮತ್ತು ಉದಾರ ವಿಚಾರಗಳನ್ನು ಅನುಸರಿರುವವರಾಗಿದ್ದರು. ಅವರು ಅವುಗಳನ್ನು ಉಚ್ಚ ನೀಚ ಎಲ್ಲ ವರ್ಗದವರಲ್ಲಿ ಪ್ರಸಾರ ಮಾಡುವದರಲ್ಲಿ ತೊಡಗಿದವರಾಗಿದ್ದರು. ಇದರಿಂದ ಬಹುಜನ ಸಮಾಜದಲ್ಲಿ ವೀರಶೈವ ಧರ್ಮವು ನೆಲೆಗೊಂಡಿತು. ಈ ಪ್ರಸಾರ ಕಾರ್ಯಗಳು ವಚನಗಳ ಮುಖಾಂತರವೇ ನಡೆದುಬಂದವು, ಅವುಗಳಲ್ಲಿಯ ಬೋಧೆಗಳಿಗೆ ಬಹುಜನ ಸಮಾಜವು ಒಲಿಯಿತು. ಈ ಪ್ರಸಾರ ಕಾರ್ಯವು ಬಸವೇಶ್ವರನ ಕಾಲದಲ್ಲಿ ಮಾತ್ರವಲ್ಲ, ಅವನ ತರುವಾಯ ೧೦೦ ವರ್ಷಗಳವರೆಗೂ ಕರ್ನಾಟಕದಲ್ಲೆಲ್ಲ ನಡೆದುಬಂದಿದೆ. ಇದರ ಪರಿಣಾಮವಾಗಿ ವೀರಶೈವ ಮತವು ನಾಡಿನಲ್ಲಿ ಬಲವಾಗಿ ಬೆಳೆಯಿತು. ಇದು ಬಹುಜನರು ತಿಳಿದಿರುವಂತೆ ಶರಣರ ಕೇವಲ ಪವಾಡಗಳಿಂದಲ್ಲ.

ಹೀಗೆ ವೀರಶೈವ ಧರ್ಮವು ಪ್ರಸಾರಹೊಂದಿದ್ದು ಪರಧರ್ಮಿಗಳನ್ನು ಹಿಂಸೆ ಮಾಡಿ ಅವರಿಗೆ ಬಲಾತ್ಕಾರದಿಂದ ಲಿಂಗಧಾರಣೆಮಾಡಿದ್ದರಿಂದಲ್ಲ; ಶರಣರ ಅಹಿಂಸೆಯ ಮಾರ್ಗವನ್ನು ಅನುಸರಿಸುತ್ತ ಉಚ್ಚ ವಿಚಾರಗಳನ್ನು ಸಮಾಜದಲ್ಲಿ ನೆಲೆಗೊಳಿಸಿದ್ಧರ ಮೂಲಕವಾಗಿದೆ.

ಮುಂದೆ ೧೩೦೦ ರ ತರುವಾಯ ಕರ್ನಾಟಕದಲ್ಲಿ ಮುಸಲ್ಮಾನರ ಹಾವಳಿಗಳು ಪ್ರಾರಂಭವಾದವು. ಆಗ ಮಹತ್ವದ ರಾಜ್ಯಗಳು ಕುಸಿದುಬಿದ್ದವು. ದೇವಗಿರಿ ಯಾದವರು, ಹೊಯಿಸಳರು, ಓರಂಗಲ್ಲಿನ ಕಾಕತೀಯರು ಪದಚ್ಯುತರಾದರು. ಆಗ ಎಲ್ಲೆಲ್ಲಿಯೂ ಹಿಂಸಾಚಾರಗಳೂ ಅನೀತಿಯ ಕೃತ್ಯಗಳೂ ನಡೆದವು. ಈ ಸಮಯದಲ್ಲಿ ಪ್ರಜೆಗಳನ್ನು ಪಾಲಿಸತಕ್ಕ ಅಧಿಕಾರಿಗಳು ಯಾರೂ ಉಳಿಯಲಿಲ್ಲ. ಈ ಸ್ಥಿತಿಯು ಉಂಟಾದಕೂಡಲೆ ಜೈನ ಧರ್ಮೀಯರು ಕಾರವಾರ ಮತ್ತು ಮಂಗಳೂರಿನ ಕಾಡು ಪ್ರದೇಶಗಳಿಗೆ ಹೋಗಿ ತಮ್ಮನ್ನು ರಕ್ಷಿಸಿಕೊಂಡರು. ವೀರಶೈವ ಧರ್ಮಾಧಿಕಾರಿಗಳು ಉತ್ತರ

ಕರ್ನಾಟಕವನ್ನು ಬಿಟ್ಟು ಕಾವೇರೀ ದಕ್ಷಿಣಕ್ಕೆ ತೆರಳಿ ಅಲ್ಲಿ ವಾಸ ಮಾಡಹತ್ತಿದರು. ಆದರೆ ವೀರಶೈವರು ಈ ಕಾಲಕ್ಕೆ ಉತ್ತರ ನಾಡಿನಲ್ಲಿ ಬಹುಸಂಖ್ಯಾತರಾದ್ದರಿಂದ ಅವರು ಈ ತಮ್ಮ ಪ್ರದೇಶದಲ್ಲಿಯೇ ಇದ್ದುಕೊಂಡು ತಮ್ಮ ರಕ್ಷಣೆಯನ್ನು ಮಾಡಿಕೊಂಡರು. ಅವರು ಕೆಲವು ಕಾಲ ವಿಜಯನಗರದ ರಾಜ್ಯದಲ್ಲಿ, ಕೆಲವು ಕಾಲ ವಿಜಾಪುರ ಅದಿಲ್‌ಶಾಹೀ ಮತ್ತು ಕಲಬುರ್ಗಿಯ ಬಹಾಮನೀ ಬಾದಶಹರ ರಾಜ್ಯಗಳಲ್ಲಿ ಇದ್ದರು. ಆದರೂ ಅವರು ತಮ್ಮ ವೀರಶೈವ ಧರ್ಮವನ್ನು ಬಿಡದೇ ಇಸ್ಲಾಮ ಧರ್ಮವನ್ನು ಸ್ವೀಕರಿಸದೆ ತಮ್ಮನ್ನು ಸಂರಕ್ಷಿಸಿಕೊಂಡರು. ಇಷ್ಟೇ ಅಲ್ಲ; ಈ ಮುಸಲ್ಮಾನ ರಾಜರಲ್ಲಿ ಅವರು ತಮ್ಮ ಶೌರ್ಯ ಧೈರ್ಯಗಳನ್ನು ತೋರಿಸುತ್ತ ದೊಡ್ಡ ದೊಡ್ಡ ಜಮೀನದಾರರೂ, ವತನದಾರರೂ ಆಗಿ ತಮ್ಮ ಶ್ರೇಷ್ಠತೆಯನ್ನು ಕಾಯ್ದುಕೊಂಡರು.

(ಶಿವಾನುಭವ ಸಂಪುಟ ೫ ಸಂಚಿಕೆ ೭ ರಿಂದ)

# ಹೆಂಡದ ಮಾರಯ್ಯ

ಶಿವಾನುಭವಿಗಳು ಸದಾಚಾರಿಗಳೂ ಸತ್ಶೀಲರೂ ವ್ಯಸನರಹಿತರೂ ಆಗಿ ತಮ್ಮಲ್ಲಿ ಲಿಂಗ ಕಳೆಯನ್ನು ಹೆಚ್ಚಿಸಲಿಕ್ಕೆ ಯಾವಾಗಲೂ ಪ್ರಯತ್ನಿಸುತ್ತಾರೆ. ಅವರಲ್ಲಿ ಸದಾಚಾರವು ನೆಲೆಗೊಳ್ಳದೆ ಹೋದರೆ ಅವರ ಈ ಪ್ರಯತ್ನಗಳು ಸಫಲವಾಗಲಾರವು. ಆದುದರಿಂದ ವಚನಕಾರರು ಸದಾಚಾರಕ್ಕೆ ಬಹಳ ಮಹತ್ವ ಕೊಟ್ಟಿರುತ್ತಾರೆ. ಅವರು ತಮ್ಮ ವಚನಗಳಲ್ಲಿ ಸುರಾಪಾನ, ಜಾರತನ, ಅಸತ್ಯ, ಹಿಂಸಾದಿ ಕರ್ಮಗಳನ್ನು ಅತ್ಯಂತವಾಗಿ ನಿಷೇಧಿಸಿದ್ದಾರೆ. ಈ ಪ್ರಕಾರ ಅವರು ಆಚರಿಸುತ್ತ ತಮ್ಮಲ್ಲಿ ತ್ರಿಲಿಂಗಗಳನ್ನು ಜಾಗ್ರುತಗೊಳಿಸುತ್ತ ಲಿಂಗಾಂಗ ಸಾಮರಸ್ಯವನ್ನು ಹೊಂದುವದೇ ಅವರ ಧ್ಯೇಯವಾಗಿರುತ್ತದೆ. ಇಂಥ ಶಿವಾನುಭವಿಗಳ ಸಾನ್ನಿಧ್ಯವು ಯಾವಾಗಲೂ ಪವಿತ್ರವಾದುದು. ಅವರಿದ್ದ ಸ್ಥಾನವು ಅವಿಮುಕ್ತ ಕ್ಷೇತ್ರ, ವಾರಣಾಸಿ ಎಂದು ವಚನಕಾರರು ಹೇಳುತ್ತಾರೆ. ಇಂಥವರ ಸುತ್ತಲೂ ಲಿಂಗಕಳೆಯು ಯಾವಾಗಲೂ ಪಸರಿಸಿರುತ್ತದೆ. ಅವರ ನೆರೆಯಲ್ಲಿದ್ದವರಲ್ಲಿ ಧಾರ್ಮಿಕ ಉಚ್ಚ ಭಾವನೆಗಳು ತಾವಾಗಿಯೇ ತಲೆದೋರುತ್ತವೆ. ಆದ್ದರಿಂದ ಶಿವಾನುಭವಿಗಳ ಸಹವಾಸಕ್ಕೆ ವಚನಕಾರರು ಬಹಳ ಮಹತ್ವ ಕೊಟ್ಟಿದ್ದಾರೆ.

ಶಿವಾನುಭವಿಗಳು ಪ್ರಪಂಚದಲ್ಲಿದ್ದರೂ ಅವರು ಅದರಲ್ಲಿ ನೀರು ತಾವರೆಯಂತಿರುತ್ತಾರೆಂಬ ವಚನಗಳುಂಟು. ಅಂದರೆ ಪ್ರಪಂಚದ ಪರಿಣಾಮಗಳು ತಮ್ಮ ಮೇಲೆ ಆಗದಂತೆ ಅವರು ವರ್ತಿಸುತ್ತಾರೆ. ಅವರ ಸುತ್ತಲೂ ಭವಿಗಳೂ ದುರಾಚಾರಿಗಳೂ ಇದ್ದರೂ ಇಂಥವರು ಅವರ ಮೇಲೆ ಯಾವ ದುಷ್ಪರಿಣಾಮಗಳನ್ನು ಮಾಡಲಾರರು. ಇಷ್ಟೇ ಅಲ್ಲ, ಇಂಥ ಶಿವಾನುಭವಿಗಳ ಸಾನ್ನಿಧ್ಯದ ಮೂಲಕ ಕೆಡುಕರು ಸನ್ಮಾರ್ಗವನ್ನು ಹಿಡಿದಿದ್ದು ಕಂಡು ಬಂದಿರುತ್ತದೆ.

ಶಿವಾನುಭವಿಗಳು ತಮ್ಮ ನೆರೆಯಲ್ಲಿದ್ದವರು ಭವಿಗಳಿರಲಿ ಅಥವಾ ಭಕ್ತರಿರಲಿ, ಸದಾಚಾರಿಗಳಿರಲಿ, ಅಥವಾ ದುರಾಚಾರಿಗಳಿರಲಿ, ವ್ಯಸನಿಗಳಿರಲಿ ಅಥವಾ ನಿರ್ವ್ಯಸನಿಗಳಿರಲಿ ಯಾರಿದ್ದರೂ ಅವರೊಡನೆ ಅವರು ಸ್ನೇಹ ದಿಂದಿರುತ್ತಾರೆ. ಅವರು ಯಾರನ್ನೂ ದ್ವೇಷ ಮಾಡುವದಿಲ್ಲ. ಅವರ ಈ ವೃತ್ತಿಯಿಂದ ಕೆಡಕು ಜನರ ಮನೋವೃತ್ತಿಯಲ್ಲಿ ಬದಲಾವಣೆ ಆಗುತ್ತದೆ. ಈ ತತ್ವಗಳನ್ನು ನಾವು ಹೆಂಡದ ಮಾರಯ್ಯನ ಚರಿತ್ರೆಯಲ್ಲಿ ಕಾಣಬಹುದು.

ಹೆಂಡದ ಮಾರಯ್ಯನು ಕಲ್ಯಾಣ ಪಟ್ಟಣದಲ್ಲಿ ವಾಸ ಮಾಡುತ್ತಿದ್ದನು. ಅವನು ಕೇವಲ ಶಿವಾನುಭವಿಯು ಮತ್ತು ಅತ್ಯಂತ ಸದಾಚಾರಿಯು. ಅವನಲ್ಲಿ ವ್ಯಸನಗಳೆಂಬುವು ಯಾವವೂ ಇರಲಿಲ್ಲ. ಅವನು ತನಗೆ ಭಕ್ತರು ಕೊಟ್ಟ ಹಣದಿಂದ ಒಂದು ಅರವಟಿಗೆಯನ್ನಿಟ್ಟು ದಾರಿಕಾರರಿಗೆ ನೀರನ್ನೆರೆಯುವ ಕಾಯಕವನ್ನು ಮಾಡುತ್ತಿದ್ದನು. ಇದರಿಂದ ತನಗೆ ಬಂದ ಹಣದಿಂದ ಅವನು ತನ್ನ ದಾಸೋಹ ಕಾರ್ಯಗಳನ್ನು ನಡೆಸುವನು. ಹೀಗಿರ್ಲುವಲ್ಲಿ ಅನೇಕರು ಅವನಿಗೆ ನೀನು ಅರವಟಿಗೆಯಲ್ಲಿ ತಣ್ಣನ್ನ ನೀರು ಇಟ್ಟಂತೆಯೇ- ಎಲ್ಲರಿಗೂ ಪ್ರಿಯಕರವಾದ ಬೆಲ್ಲದ ಹಾಲು, ಕಬ್ಬಿನಹಾಲು, ಅಂಬಲಿ, ಮಜ್ಜಿಗೆ ಇವುಗಳನ್ನೂ ಸಹ ಇಟ್ಟು ಅವುಗಳಿಂದ ಬೇಸಿಗೆಯ ತಾಪದಿಂದ ಬಳಲಿ ಬಂದವರನ್ನು ಶಾಂತಗೊಳಿಸಬೇಕೆಂದು ಸೂಚಿಸಿದರು. ಅದಕ್ಕೆ ಮಾರಯ್ಯನು ಒಪ್ಪಿ ಈ ಜಿನಸುಗಳನ್ನು ತನ್ನ ಅರವಟಿಗೆಯಲ್ಲಿಟ್ಟು ದಾರಿ ನಡೆದುಬಂದವರನ್ನು ಶಾಂತಗೊಳಿಸುವನು. ಕೆಲವು ವೇಳೆ ಅವರು ಕುಳಿತು ಅವನ ಶಿವಾನುಭವ ಸದ್ಗೋಷ್ಠಿಗಳನ್ನು ಕೇಳುವರು. ಇಂಥ ಸದ್ಗೋಷ್ಠಿಗಳು ಕಲ್ಯಾಣ ಪಟ್ಟಣದಲ್ಲಿ ಆಗ ಎಲ್ಲ ಕಡೆಗೂ ಯಾವಾಗಲೂ ನಡೆಯುತ್ತಾ ಇದ್ದವು.

ಹೀಗಿರಲು ಮಾರಯ್ಯನ ಅರವಟಿಗೆಗೆ ಭವಿ ಜನರು ಕೂಡಾ ಬರಹತ್ತಿದರು. ಅವರು ಬಂದಬಳಿಕ ಮಾರಯ್ಯನು ಅವರನ್ನು ತಾತ್ಸಾರ ಮಾಡುತ್ತಿದ್ದಿಲ್ಲ. ಅವರಿಗೂ ಕೂಡಾ ಅರವಟಿಗೆಯಲ್ಲಿರುವ ನೀರನ್ನೂ ಇತರ ತಂಪಾದ ಪಾನಕಗಳನ್ನೂ ಕೊಡುವನು. ಅವರು ಅವುಗಳನ್ನು ಸೇವಿಸಿ ತೃಪ್ತ

ರಾಗಿ ಹೋಗುವರು. ಹೀಗಿರುವಲ್ಲಿ ಅವರಲ್ಲಿ ಕೆಲವರು ಹೆಂಡ ಮತ್ತು ಸರಾಯಿಯನ್ನು ಕುಡಿಯುವ ಚಟವುಳ್ಳವರಾಗಿದ್ದರು. ಇವರು ಮಾರಯ್ಯನಿಗೆ— ನೀನು ಹೇಗೆ ಇತರರಿಗೆ ತಂಪಾದ ಮತ್ತು ಪ್ರಿಯಕರವಾದ ಪಾನಕಗಳನ್ನು ಇಟ್ಟಿರುವಿಯೋ ಹಾಗೆಯೇ ನಮ್ಮ ಪಾನಕಗಳನ್ನೂ ಇಡಬೇಕೆಂದು ಸೂಚಿಸಿದರು. ಅದಕ್ಕೆ ಮಾರಯ್ಯನು ಒಪ್ಪಿ ಅರವಟಿಗೆಯಲ್ಲಿ ಈಚಲ, ತೆಂಗು, ತಾಡವಾಲಿ, ಭಗಿನಿ, ಇಂಥ ಗಿಡಗಳಿಂದಾದ ಮಾದಕ ಪದಾರ್ಥಗಳನ್ನಿಟ್ಟು ಅವುಗಳನ್ನು ಸೇವಿಸಲಿಕ್ಕೆ ಇವರಿಗೆ ಕೊಡುವನು. ಅವರು ಅವುಗಳನ್ನು ಕುಡಿದು ತೃಪ್ತರಾಗಿ ಅಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಗಳನ್ನು ಕೇಳುತ್ತ ಕೆಲಹೊತ್ತು ಕುಳಿತು ಮಾರಯ್ಯನನ್ನು ಸ್ತುತಿಸುತ್ತ ಹೋಗುವರು.

ಈ ಗೋಷ್ಠಿಗಳ ಕಾಲದಲ್ಲಿ ಮಾರಯ್ಯನು ಈ ಹೆಂಡಗುಡುಕರಿಗೆ ಮಾದಕ ಪದಾರ್ಥಗಳನ್ನು ಸೇವಿಸದಿರಲು ಬೋಧಿಸುವನು ಮತ್ತು ಶಿವಾನುಭವದ ಉಚ್ಚ ವಿಚಾರಗಳನ್ನು ಅವರಿಗೆ ತಿಳಿಸಿ ಹೇಳುವನು. ಇದು ಅವನ ವಚನಗಳಿಂದ ತಿಳಿದುಬರುತ್ತದೆ.

ಹೀಗಿರಲು ಮಾರಯ್ಯನು ತನ್ನ ಅರವಟಿಗೆಯಲ್ಲಿ ಹೆಂಡವನ್ನಿಟ್ಟು ಜನರಿಗೆ ಮಾರುತ್ತಾನೆಂದು ಕೊಂಡೆಯರು ಬಿಜ್ಜಳನಿಗೆ ತಿಳಿಸಿದರು. ಆಗ ಅವನು ಬಸವೇಶ್ವರನನ್ನು ಕರಿಸಿ— ಶಿವಭಕ್ತರೆನಿಸಿಕೊಳ್ಳುವವರು ಕಲ್ಯಾಣದಲ್ಲಿದ್ದುಕೊಂಡು, ಪೊಚ್ಚಿಯ ಜೋಡುಗಳನ್ನು ಮಾಡುತ್ತಾರೆ. ಅವರು ಚರ್ಮವನ್ನು ಹದ ಮಾಡುತ್ತಾರೆ. ಕೆರವು, ಮಿಣಿ, ಹೆಂಡಗಳನ್ನಿಟ್ಟು ಮಾರುತ್ತಾರೆ. ಅವರಿಗೆ ಇವೆಂತಹ ಕಾಯಕಗಳು ? ಹೀಗೆ ಮಾಡುವದು ಶಿವಭಕ್ತರಿಗೆ ನೀತಿಯೇ ? ಎಂದು ಕೇಳಿದನು. ಅದಕ್ಕೆ ಬಸವೇಶ್ವರನು— ಕಾಯಕದ ರೀತಿಯು ಬೇರೆ ಇದೆ. ಅದರಲ್ಲಿ ಆತ್ಮೋನ್ನತಿಯು ಇರುವದರಿಂದ ಅದರಲ್ಲಿ ದೋಷವಿಲ್ಲ. ಕುಲವಂತನಾದ ಭಕ್ತನು ಹೊಲೆಯರ ಮನೆಯಲ್ಲಿ ಹೊಕ್ಕು ಅವರಲ್ಲಿ ಕೈಕೂಲಿ ಮಾಡಿದರೂ ಕೂಡಾ ಅವರು ಪರಮಾತ್ಮನ ನಿಲವನ್ನು ಹೊಂದಲು ತಮ್ಮ ಕಾಯಕ ಮಾಡುತ್ತಾರೆಯೇ ಹೊರತು ಅವರು

ತಪ್ಪು ಹೊಟ್ಟೆಯ ಪಾಡಿಗಾಗಿ ಮಾಡುವದಿಲ್ಲ. ಈ ರೀತಿ ಕಾಯಕ ಮಾಡುವದು ಶಾಸ್ತ್ರ ಸಮ್ಮತವು. ಇದಕ್ಕೆ ಆಗಮ ವಾಕ್ಯವಿದೆ. ಅದು ಯಾವದೆಂದರೆ– "ಸತ್ಯಂ ಜನವಿರುದ್ಧಂ ಚ । ಅಸತ್ಯಂ ಜನ ರಂಜನಂ ॥ ಯಾಸನಂ ಸುರಾ ವಿಕ್ರೇಣ । ದಧಿಕ್ಷೀರ ಗೃಹೇ ॥೧ ಆದ್ದರಿಂದ ಉತ್ತಮ ವಾದ ಆಹಾರದ ಜೀನಸುಗಳನ್ನು ಬಿಟ್ಟು ನಿಷೇಧ ರಸವನ್ನು ಈಂಟುವ ಮಾನವರಿಗೆ ಅದನ್ನು ಕೊಟ್ಟು ಅವರ ಉದ್ಧಾರಕ್ಕೋಸ್ಕರ ಅವರಿಗೆ ಉಪ ದೇಶ ಮಾಡುತ್ತ ಕಾಯಕ ನಡಿಸಿದಲ್ಲಿಅದು ದೋಷವಿಲ್ಲೆಂದು ಹೇಳಿದನು.

ಆದರೆ ಬಿಜ್ಜಳನಿಗೆ ಕಾಯಕದ ಈ ರೀತಿಯು ತಿಳಿಯದೆಹೋಯಿತು. ಆದ್ದರಿಂದ ಅವನು ಈ ಮಾತಿಗೆ ಒಪ್ಪದೆ ಬಸವೇಶ್ವರನಿಗೆ– ಇದು ಕಾಯಕ ವಲ್ಲ ಅಧರ್ಮವು. ಮಾರಯ್ಯನು ಶಿವಶರಣನೆಂದು ನೀನು ಹೇಳುತ್ತೀ– ಆದರೆ ಅವನು ಶಿವಶರಣನಾದರೆ, ಜನರಿಗೆ ಹೆಂಡವನ್ನು ಕುಡಿಸುವ ಅವನ ಕೈಗ ಳನ್ನು ನಾನು ಕಡಿದುಹಾಕಿಸುತ್ತೇನೆ. ಅವು ಒಂದು ವೇಳೆ ಪುನಃ ಚಿಗಿತು ಬಂದರೆ ಮಾತ್ರ ಅವನು ಶರಣನೆಂದೆನ್ನುತೇನೆ ಎಂದು ನುಡಿದನು. ಅದಕ್ಕೆ ಬಸವೇಶ್ವರನು– ಹಾಗೆಯೇ ಆಗಲಿ, ಅವನ ಕೈಗಳನ್ನು ಕಡಿಯಿಸಿ ನೋಡು ಎಂದು ಹೇಳಿದನು. ಆಗ ಬಿಜ್ಜಳನು ಕೂಡಲೇ ಮಾರಯ್ಯನಿದ್ದ ಅರವಟಿಗೆಗೆ ಬಂದು ಅವನ ಕೈಗಳನ್ನು ಕಡಿಸಿಹಾಕಿದನು. ಆದರೆ ಭಕ್ತ ಶಿರೋಮಣಿ ಯಾದ ಮಾರಯ್ಯನಿಗೆ ಇದರಿಂದೇನೋ ಅಪಾಯವಾಗಲಿಲ್ಲ. ಅವನು ಸನ್ಮಾ ರ್ಗಿಯು. ಆದ್ದರಿಂದ ಅವನ ಕೈಗಳು ಪುನಃ ಚಿಗಿತುಬಂದವು ಮತ್ತು ಅವು ಮೊದಲಿನಂತೆಯೇ ಆದವು ! ಆಗ ಬಿಜ್ಜಳನು ಆಶ್ಚರ್ಯ ಪಟ್ಟು ಮಾರ ಯ್ಯನ ಕಾಯಕವು ಅಗಾಧವಾದುದು ಎಂದು ಅವನನ್ನು ಕೊಂಡಾಡುತ್ತ ತನ್ನ ಅರಮನೆಗೆ ಹೋದನು. ಅಂದಿನಿಂದ ಮಾರಯ್ಯನು– "ಹೆಂಡದ ಮಾರಯ್ಯ"ನೆಂದು ಲೋಕದಲ್ಲಿ ಪ್ರಸಿದ್ಧನಾದನು.

---

೧ ಈ ಶ್ಲೋಕವು ಅಶುದ್ಧವಿದೆ.

## ಹೆಂಡದ ಮಾರಯ್ಯನ ಕಾಯಕದ ರೀತಿ

ಹೆಂಡದ ಮಾರಯ್ಯನ ಚರಿತ್ರೆಯಲ್ಲಿ ವಿಚಾರ ಮಾಡತಕ್ಕ ಅನೇಕ ಮಹತ್ವದ ವಿಷಯಗಳಿರುತ್ತವೆ. ಅವುಗಳನ್ನು ನಾವು ಇಲ್ಲಿ ಚರ್ಚಿಸುತ್ತೇವೆ.

### (೧) ಭವಿ ಜನಗಳ ಸಂಬಂಧ

ಭಕ್ತರಾದವರು ಭವಿ ಜನರೊಡನೆ ಸಂಬಂಧವಿಟ್ಟು ಅವರಿಗೆ ಸಹಾಯ ಮಾಡಬೇಕೋ ಹೇಗೆ ಎಂಬುದು ಮೊದಲನೆಯ ವಿಷಯವಾಗಿದೆ. ಮಾರ ಯ್ಯನ ಚರಿತ್ರೆಯನ್ನು ನಾವು ನಿರೀಕ್ಷಿಸಿದಲ್ಲಿ ಭಕ್ತ ಜನರಿಗೆ ಹೇಗೋ ಹಾಗೆಯೇ ಭವಿ ಜನರಿಗೂ ಸಹಾಯವನ್ನು ನೀಡಿದಂತೆ ಕಂಡುಬರುತ್ತದೆ. ಅನೇಕರು ಭಕ್ತರು ಭಕ್ತರಿಗೇ ಸಹಾಯ ಮಾಡಬೇಕು ಹಿಂದಿನ ಕಾಲದ ಶಿವ ಶರಣರು ಭವಿ ಜನರ ಕೂಡ ಯಾವ ಸಂಬಂಧವನ್ನು ಇಡುತ್ತಿದ್ದಿಲ್ಲ ಮತ್ತು ಅವರು ತಮ್ಮ ವ್ಯವಹಾರವನ್ನು ಭಕ್ತರೊಡನೆ ಮಾತ್ರ ನಡಿಸುತ್ತಿದ್ದರು ಎಂದು ಅಭಿಪ್ರಾಯವುಳ್ಳವರಿದ್ದಾರೆ. ವೀರಶೈವರಲ್ಲಿ ೬೪ ಶೀಲಗಳಿದ್ದು ಅವುಗಳನ್ನು ಪಾಲಿಸುವದು ಶರಣರ ಧರ್ಮವೆಂತಲೂ ಅವರು ತಿಳಿ ದಿದ್ದಾರೆ. ಕೆಲವು ಶೀಲಗಳಲ್ಲಿ ಭಕ್ತರು ಭವಿಜನರ ಸಂಪರ್ಕವನ್ನು ಪೂರ್ಣ ವಾಗಿ ಬಿಡಬೇಕೆಂಬ ಅಭಿಪ್ರಾಯವಿದೆ. ಆದರೆ ನಿಜಸ್ಥಿತಿಯು ಹೀಗಿರುವ ದಿಲ್ಲ. ಈ ತರದ ಶೀಲಗಳು ಅವ್ಯವಹಾರ್ಯವಾಗಿದ್ದು ಅವುಗಳನ್ನು ವಚನ ಕಾರರು ಅಲ್ಲಗಳೆದಿದ್ದು ಕಂಡುಬರುತ್ತದೆ. ಉದಾಹರಣಾರ್ಥವಾಗಿ ಚೆನ್ನ ಬಸವೇಶ್ವರನು ತನ್ನ ವಚನದಲ್ಲಿ ಹೇಳಿರುವದೇನಂದರೆ—

"ಸುಖವನರಿಯದೆ ಹೆಂಗಸು ಸೂಳೆಯಾದಳು. ಶಿವಲಿಂಗವನ್ನರಿಯದ ಕಾರಣ ಭಕ್ತನು ಶೀಲವಂತನಾದನು. ಈ ಉಭಯ ಕುಲಸ್ಥಲವಿರವು ನಿಷ್ಪತ್ತಿಯಾಗದನ್ನಕ್ಕರ ಕೂಡಲಚೆನ್ನಸಂಗಮದೇವನೆಂತೊಲಿವನು ?"

ಇದರಲ್ಲಿ ಚೆನ್ನಬಸವೇಶ್ವರನು ಶೀಲಗಳನ್ನು ಬಹು ಕಟುವಾಗಿ ಹಳಿ ದಿದ್ದು ಕಂಡುಬರುತ್ತತೆ.

ಶಿವಶರಣರಲ್ಲಿ ಅತ್ಯಂತ ಶ್ರೇಷ್ಠ ಸ್ಥಾನವನ್ನು ಹೊಂದಿದ ಮೋಳಿ ಗೆಯ ಮಾರಯ್ಯನು ಹೇಳಿರುವದೇನಂದರೆ

"ಶೀಲ ಶೀಲವೆಂತೆಂದಿರಯ್ಯ ! ಶೀಲದ ನೆಲೆಯ ಬಲ್ಲರೆ ಹೇಳಿರೋ, ಅರಿಯದಿರ್ದಡೆ ಕೇಳಿರೋ. ಕಾಮ ಒಂದನೇ ಭವಿ, ಕ್ರೋಧ ಎರಡನೇ ಭವಿ, ಲೋಭ ಮೂರನೇ ಭವಿ, ಮೋಹ ನಾಲ್ಕನೇ ಭವಿ, ಮದ ಐದನೇ ಭವಿ, ಮತ್ಸರ ಆರನೇ ಭವಿ, ಆಮಿಷ ಏಳನೇ ಭವಿ, ಇಂತೀ ಏಳು ಭವಿಗಳ ತಮ್ಮೊಳಗಿಟ್ಟುಕೊಂಡು ಲಿಂಗವಿಲ್ಲದವರ ಭವಿ ಎಂಬರು ತಮ್ಮಂತರಂಗದಲ್ಲಿರ್ದ ಲಿಂಗಾಂಗದ ಸುದ್ದಿಯನರಿಯದೆ ಅಚ್ಚ ಪ್ರಸಾದಿ, ನಿಚ್ಚ ಪ್ರಸಾದಿ, ಸಮಯ ಪ್ರಸಾದಿಗಳೆಂದು ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಕ್ಕೆ ಮಜ್ಜನಕ್ಕೆರೆವ ಪಗಲುಂಗಳ್ಳರಿಗೆ ಮೆಚ್ಚುವನೇ ನಿಃಕಳಂಕ ಚೆನ್ನಮಲ್ಲಿಕಾರ್ಜುನಾ ?"

ಇದೇ ಅಭಿಪ್ರಾಯವನ್ನು ಬಸವೇಶ್ವರನಾದರೂ ಕೆಳಗೆ ಕಾಣಿಸಿದ ವಚನದಲ್ಲಿ ಪ್ರಕಟಮಾಡಿದ್ದಾನೆ. ಅವನು ಅಂದಿರುವದೇನಂದರೆ—

"ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ ಎನ್ನ ಒಡಲಿಂಗೆ ಎನ್ನ ಒಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದಡೆ, ಎನ್ನ ಮನಕ್ಕೆ ಮನವೇ ಸಾಕ್ಷಿ. "ಆಸನೇ ಶಯನೇ ಯಾನೇ ಸಂಪರ್ಕೆ ಸಹಭೋಜನೇ। ಸಂಚರಂತಿ ಮಹಾಘೋರೇ ನರಕೆ ಕಾಲಮಕ್ಷಯಂ ॥ ಎಂಬ ಶ್ರುತಿಯ ಬಸವಣ್ಣ ನೋಡುವನು. ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯ ಪ್ರಮಥರು. ಕೊಡಬೇನುತ್ತರವನವರಿಗೆ, ಕೊಡಲೆಮ್ಮನು. ಹೊಲೆಯರ ಮನೆಯ ಹೊಕ್ಕಾದಡೆಯೂ ಸಲೆ ಕೈಕೂಲಿಯ ಮಾಡಿಯಾದಡೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದಡೆ ತಲೆದಂಡ ತಪೆದಂಡ ಕೂಡಲಸಂಗಮದೇವಾ"

ಇದರಲ್ಲಿ ಬಸವೇಶ್ವರನು ಭವಿಜನರೊಡನೆ ಹೇಗೆ ಇರಬೇಕೆಂಬುದನ್ನು ಬಹು ಚೆನ್ನಾಗಿ ನಿರೂಪಿಸಿದ್ದಾನೆ. ಅವನು ಹೇಳಿದಂತೆ ಭವಿಗಳ ಸೇವೆ ಮುನ್ನ ಭಕ್ತರು ಮಾಡಿದಲ್ಲಿ ಅವ ದೋಷವಿರುವದಿಲ್ಲ. ಆದರೆ ಅದನ್ನು ಪರಮಾತ್ಮನ ಸಲುವಾಗಿ ಮಾಡಬೇಕೆಂದು ಇದರಲ್ಲಿ ಅಭಿಪ್ರಾಯವಿದೆ. ಆದ್ದರಿಂದ ಹೆಂಡದ ಮಾರಯ್ಯನು ಭವಿಗಳನ್ನು ತನ್ನ ಅರಮನೆಯಲ್ಲಿ ಬರ ಮಾಡಿಕೊಂಡ ಮಾತ್ರದಲ್ಲಿ ಆವ ದೋಷವೂ ಇರುವದಿಲ್ಲ.

## (೨) ದುರಾಚಾರಿಗಳ ಸಂಬಂಧ

ಮಾರಯ್ಯನು ಕಾಯಕವನ್ನು ಮಾಡುವಲ್ಲಿ ದುರಾಚಾರಿಗಳ ಕೂಡ ಸಂಬಂಧವಿಟ್ಟದ್ದು ತಪ್ಪೆಂದು ಕೆಲವರು ಇನ್ನೊಂದು ಆಕ್ಷೇಪಣೆಯನ್ನು ಮುಂದು ಮಾಡಬಹುದು. ಆದರೆ ಈ ಆಕ್ಷೇಪಣೆಯು ಸರಿಯಾದದ್ದೆಂದು ಹೇಳಲಿಕ್ಕೆ ಬರಲಾರದು ಯಾಕಂದರೆ ಲೋಕೋದ್ಧಾರಕ್ಕೋಸ್ಕರ ಪ್ರಯತ್ನ ಪಡುವದು ಶಿವಾನುಭವಿಯ ಕರ್ತವ್ಯವಾಗಿದೆ. ಆದ್ದರಿಂದ ಅವನು ದುಷ್ಟರೊಡನೆಯೂ ಇದ್ದುಕೊಂಡು ಅವರನ್ನು ಸನ್ಮಾರ್ಗಕ್ಕೆ ಹಚ್ಚುವದು ಅವನ ಕಾಯಕವಾಗಿದೆ. ಒಂದು ವೇಳೆ ಇಂಥವರೊಡನೆ ಸಂಬಂಧವಿಡದೆ ಹೋದರೆ, ಅವನು ಅವರನ್ನು ಸುಧಾರಿಸುವ ಬಗೆ ಹೇಗೆ? ಆದ್ದರಿಂದ ಜನರ ಸಂಬಂಧವನ್ನು ಬಿಟ್ಟುಕೊಟ್ಟು ಅರಣ್ಯಗಳಲ್ಲಿ ವಾಸಿಸುವದೂ ಅಲ್ಲಿ ಯಾರನ್ನೂ ಕಾಣದೆ ಏಕಾಂತದಲ್ಲಿರುವದೂ ಯಾವಾಗಲೂ ಧ್ಯಾನಸ್ಥನಾಗಿರುವದೂ ಜನರ ಸುಧಾರಣೆಗೆ ಕಾರಣವಾಗಲಾರದು. ಹಿಂದಿನ ಕಾಲದಲ್ಲಿ ಬೌದ್ಧ ಮತ್ತು ಜೈನ ಸನ್ಯಾಸಿಗಳೂ ಯೋಗಾಭ್ಯಾಸಿಗಳೂ ಈ ರೀತಿ ಅಚರಿಸಿದ್ದಾರೆ. ಆದರೆ ವಚನಕಾರರು ಈ ಮಾರ್ಗವನ್ನು ಹಳಿದಿದ್ದಾರೆ. ಶಿವಶರಣರು ನಿರ್ಜನ ಪ್ರದೇಶಗಳಲ್ಲಿರುವದಿಲ್ಲ. ಅವರು ಕೊರೆದ ಗುಹೆಗಳಲ್ಲಿ ವಾಸಿಸುವದಿಲ್ಲ. ಅವರು ಗ್ರಾಮಗಳಲ್ಲಿ ಮಠಗಳನ್ನು ಕಟ್ಟಿಕೊಂಡು ಜನರಲ್ಲಿಯೇ ಇದ್ದುಕೊಂಡು ಅವರ ಸುಧಾರಣೆಗೋಸ್ಕರ ಪ್ರಯತ್ನ ಮಾಡುತ್ತಾರೆ. ಆದ್ದರಿಂದ ಅವರು ದುರಾಚಾರಿಗಳನ್ನೂ ದುಷ್ಟರನ್ನೂ ನೀತಿ ಇಲ್ಲದವರನ್ನೂ ಉಪೇಕ್ಷಿಸುವದಿಲ್ಲ. ಅವರು ಅವರಲ್ಲಿಯೇ ಇದ್ದು ಅವರ ಉದ್ಧಾರಕ್ಕೋಸ್ಕರ ಪ್ರಯತ್ನ ಮಾಡುತ್ತಾರೆ. ಆದ್ದರಿಂದ ಅವರು ಬೋಧೆ ಮಾಡಿದ್ದಾರೆ. ಅವರ ಉಕ್ತಿಗಳಲ್ಲಿ ನೀತಿಯ ವಾಕ್ಯಗಳು ತುಂಬಿಹೋಗಿರುತ್ತವೆ. ಆದ್ದರಿಂದ ಹೆಂಡದ ಮಾರಯ್ಯನು ತನ್ನ ಕಾಯಕವನ್ನು ಮಾಡುವಲ್ಲಿ ಹೆಂಡಗುಡಿಕರನ್ನು ದುರಾಚಾರಿಗಳನ್ನೂ ದುರ್ವ್ಯಸನಿಗಳನ್ನೂ ತನ್ನಲ್ಲಿ ಬರಮಾಡಿಕೊಂಡು ಅವರಿಗೂ ತನ್ನ ಶಿವಾನುಭವದ ರೀತಿಯನ್ನು ತಿಳಿಸಿಕೊಟ್ಟು ಅವರನ್ನು ಸನ್ಮಾರ್ಗಕ್ಕೆ ಹಚ್ಚಿದಲ್ಲಿ, ಅದು ದೋಷಯುಕ್ತ ವರ್ತನೆಯೆಂದು ಹೇಳಲು ಎಂದೂ ಬರಲಾರನು. ಅದು ಉಚ್ಚತಮ ನಡತೆಯಾಗಿರುತ್ತದೆ.

ಆದರೆ ಶಿವಾನುಭವಿಗಳಾದವರು ಇಂಥ ಕೆಡಕು ಪ್ರವೃತ್ತಿಯ ಜನರಲ್ಲಿ ಹೇಗೆ ಸಂಬಂಧವನ್ನಿಡಬೇಕೆಂಬುದನ್ನು ವಚನಕಾರರು ತಮ್ಮ ವಚನಗಳಲ್ಲಿ ಹೇಳಿದ್ದಾರೆ. ಅವರು ಅವರಲ್ಲಿ ಇದ್ದೂ ಇಲ್ಲದಂತಿರಬೇಕು. ಕಮಲವು ನೀರಿನಲ್ಲಿದ್ದರೂ ಹೇಗೆ ಅದಕ್ಕೆ ನೀರು ಹತ್ತುವದಿಲ್ಲವೋ ಹಾಗೆ ಅವರು ಇರಬೇಕು. ಹೀಗಿದ್ದರೆ ದುರಾಚಾರಿಗಳ ಪರಿಣಾಮವು ಅವರ ಮೇಲೆ ಏನೂ ಆಗದು ಈ ವಿಷಯವಾಗಿ ಒಬ್ಬ ವಚನಕಾರನು ಅನ್ನುವ ದೇನೆಂದರೆ-

"ಇಹಪರವೆಂಬ ಈ ದೆಸೆ ಆ ದೆಸೆಯಾದವರ ಪರಿ ಹೊಸತು. ನೆಯಿ ಹತ್ತದ ನಾಲಿಗೆಯಂತೆ ಹುಡಿ ಹತ್ತದ ಗಾಳಿಯಂತೆ ಕಾಡಿಗೆ ಹತ್ತದ ಆಲಿಯಂತಿರ್ದೆನಯ್ಯ. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಆಚರಿಸುತ್ತ ಆಚರಿಸವಂತಿರ್ದೆನಯ್ಯ"

ಈ ಪ್ರಕಾರ ಶಿವಾನುಭವಿಗಳು ಜಗತ್ತಿನಲ್ಲಿದ್ದುಕೊಂಡು ಜಗತ್ತಿನ ಉದ್ಧಾರವನ್ನು ಮಾಡುತ್ತಾರೆ. ಪೃಥ್ವಿಯಲ್ಲಿ ಆಗಿಹೋದ ಧರ್ಮಸ್ಥಾಪಕರೂ, ಧರ್ಮೋದ್ಧಾರಕರೂ, ಮಹಾತ್ಮರೂ ಸಾಧುಗಳೂ, ಶರಣರೂ ಹೀಗೆಯೇ ವರ್ತಿಸಿದ್ದಾರೆ.

## (೨) ಸುರಪಾನಿಗಳ ಸಂಬಂಧ

ಹೆಂಡದ ಮಾರಯ್ಯನು ತನ್ನ ಕಾಯಕವನ್ನು ಮಾಡುವಲ್ಲಿ ಸಿಂಧಿ ಸರಾಯಿಗಳನ್ನು ಅರವಟಿಗೆಯಲ್ಲಿಟ್ಟು ಅವುಗಳ ಚಟವಿದ್ದವರಿಗೆ ಅವುಗಳನ್ನು ಸೇವಿಸಲಿಕ್ಕೆ ಕೊಡುತ್ತಿದ್ದನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಇದು ಯೋಗ್ಯವೋ ಹೇಗೆ, ಎಂಬುದೊಂದು ಬಿಕ್ಕಟ್ಟಿನ ಪ್ರಶ್ನೆಯು ಇಲ್ಲಿ ಉಂಟಾಗುತ್ತದೆ. ಈ ವಿಷಯದಲ್ಲಿ ಮತ ಭೇದವಾಗುವಂತಿದೆ. ಆದರೆ ಇದು ದೋಷಯುಕ್ತವಲ್ಲವೆಂದು ನಮಗೆ ತೋರುತ್ತದೆ. ವ್ಯಸನಾಧೀನರನ್ನು ಸುಧಾರಿಸುವ ಉದ್ದಿಶ್ಯವಾಗಿ ಹೀಗೆ ಮಾರಯ್ಯನು ಆಚರಿಸಿದ್ದಾದರೆ ಅದು ದೋಷವಾಗಲಾರದು. ಇಷ್ಟೇ ಅಲ್ಲ ಅದು ಹೆಚ್ಚಿನ ತರನ ವರ್ತನೆ ಎಂದು

ನಾವು ಭಾವಿಸಬೇಕು. ಮಾರಯ್ಯನು ಸ್ವತಃ ಹೆಂಡಗುಡಿಕನಿದ್ದಿಲ್ಲ. ಅವನ ೧೪ ವಚನಗಳು ನಮ್ಮಲ್ಲಿವೆ. ಅವುಗಳಿಂದ ಅವನು ಉಳಿದ ಶಿವಶರಣರಂತೆಯೇ ಅತ್ಯಂತ ಶುದ್ಧ ವರ್ತನೆಯುಳ್ಳವನಾಗಿದ್ದನೆಂದು ಸ್ಪಷ್ಟವಾಗುತ್ತದೆ. ಅವುಗಳಲ್ಲಿ ಕೆಲವು ಮದ್ಯಪಾನಕ್ಕೆ ಸಂಬಂಧಿಸಿವೆ. ಅವುಗಳನ್ನು ನಾವು ಕೆಳಗೆ ಉದಹರಿಸುತ್ತೇವೆ. ಅವುಗಳನ್ನು ನಾವು ವಿಚಾರಮಾಡಿದಲ್ಲಿ ಹೆಂಡದ ಮಾರಯ್ಯನು ಸರಾಯಿಯನ್ನು ಕುಡಿಯುವಂಥವರನ್ನು ತನ್ನಲ್ಲಿ ಬರಮಾಡಿಕೊಂಡರೂ ಅವರಿಗೆ ಧರ್ಮದ ಉಚ್ಚ ವಿಚಾರಗಳನ್ನು ಬೋಧಿಸುತ್ತ ಅವರು ತಮ್ಮ ವ್ಯಸನಗಳನ್ನು ಬಿಡಲು ಪ್ರಯತ್ನಿಸುತ್ತಿದ್ದನೆಂದು ಕಂಡು ಬರುತ್ತದೆ.

ವ್ಯಸನಗಳು ಶೀವ್ರವಾಗಿ ದೂರವಾಗುವದಿಲ್ಲ, ಅವುಗಳನ್ನು ಬಿಡಲಿಕ್ಕೆ ಕೆಲವು ಕಾಲ ಹತ್ತುತ್ತದೆ. ಆದ್ದರಿಂದ ಅವುಗಳ ಸೇವನೆಗಾಗಿ ಕೆಲವು ಕಾಲ ಅವುಗಳನ್ನು ಕುಡಿಯುವವರಿಗೆ ಆಸ್ಪದಕೊಡಬೇಕಾಗುತ್ತದೆ. ಹೆಂಡದ ಮಾರಯ್ಯನು ಈ ದೃಷ್ಟಿಯನ್ನಿಟ್ಟುಕೊಂಡು ವರ್ತಿಸಿದ್ದರಿಂದ ಅದರಲ್ಲಿ ಅವನದು ಆವ ದೋಷವೂ ಇರಲಾರದು. ಮಾರಯ್ಯನು ರಚಿಸಿದ ವಚನಗಳ ಮುದ್ರಿಕೆಯು "ಧರ್ಮೇಶ್ವರಾ" ಎಂದಿದೆ ಅವನ ಕೆಲವು ವಚನಗಳನ್ನು ನಾವು ಇಲ್ಲಿ ಉದಾಹರಿಸುತ್ತೇವೆ.

## ವಚನಗಳು

(೧) ಭಕ್ತಂಗೆ ಮಹಿಮೆ, ಮಹೇಶ್ವರಂಗೆ ನಿಷ್ಠೆ, ಪ್ರಸಾದಿಗೆ ದೃಷ್ಟಿ, ಪ್ರಾಣಲಿಂಗಿಗೆ ಪ್ರವಧಾನ, ಶರಣಂಗೆ ಸರ್ವಗುಣ ಸಂತೋಷ, ಐಕ್ಯಂಗೆ ಪರಿಪೂರ್ಣತ್ವ ಇಂತೀ ಷಟ್‌ಸ್ಥಲವನಾಚರಿಸಿ ನಡೆವಲ್ಲಿ ಹುಸಿ, ಕೊಲೆ, ಕ್ಷುದ್ರ, ಕುಹಕ, ವಿಶ್ವಾಸ ಘಾತಕ, ಪರವಧು, ಪರಾಪೇಕ್ಷೆ, ನಿಂದೆ, ಇಂತಿವರೊಳಗಾದ [illegible] ವಂ ಬಿಟ್ಟು, ನಿಂದ ಸ್ಥಳಕ್ಕೆ ಸಂಶಯವಿಲ್ಲದೆ, ಆತ್ಮಂಗೆ ಅರಿಕೆಯಲ್ಲಿ ಮತ್ತೊಂದುವ ಹಿಡಿಯದೆ, ಲೆತ್ತ, [illegible], ಪಗಡೆ, ಪಂಚಪಾಸಕ, ಚರ್ಚೆಗೋಷ್ಠಿಯಲ್ಲಿ ನಿಲ್ಲದೆ ನಿತ್ಯನೇಮಂಗಳಲ್ಲಿ ಸತತ ಚಿತ್ತಾಗಿಹುದ ಇಂತೀ ತ್ರಿವಿಧವನರಿತಿಗಳೆದು ನಿಂದ ನಿಶ್ಚಯದಲ್ಲಿ ಸರ್ವಸಂಗವ

ಪರಿತ್ಯಾಗವ ಮಾಡಿ, ನಿಂದ ನಿಃಕುಲದಲ್ಲಿ ಲಿಂಗಾರ್ಚನೆ, ಪೂಜೆ. ಕೃತ್ಯ ತಪ್ಪದೆ, ಮಾಡುವ ನಿಶ್ಯಂಕದಲ್ಲಿ ಜಪ ತಪ ನಿತ್ಯ ನೇಮ ತತ್ಕಾಲವನರಿವ ಸಾವಧಾನ ಸಂಬಂಧಿಗಳಲ್ಲಿ ಎರಡಿಲ್ಲದೆ ಮಾಡುವುದು ಸಾವಧಾನವಂತನ ಸಂಬಂಧ, ಆತ ಕೂಗಿಂಗೆ ಹೊರಗು, ಮಹಾಮಹಿಮ ಧರ್ಮೇಶ್ವರಾ.

ಭಾವ :- ಈ ವಚನದಲ್ಲಿ ವೀರಶೈವ ಮತ ತತ್ವದ ಸಾರವು ಅಡಕವಾಗಿದೆ. ಷಟ್‌ಸ್ಥಲವನ್ನು ಹಿಡಿದುಕೊಂಡು ನೈತಿಕಾಚಾರವನ್ನು ಅವಲಂಬಿಸಿ ಉಚ್ಚ ಅನುಭವವನ್ನು ಹೊಂದಿ ಲಿಂಗಾಂಗ ಸಾಮರಸ್ಯವನ್ನು ಹೇಗೆ ಹೊಂದಬೇಕೆಂಬುದನ್ನು ಹೆಂಡದ ಮಾರಯ್ಯನು ಇಲ್ಲಿ ಹೇಳಿದ್ದಾನೆ. ಇದರಲ್ಲಿ ಅವನು ನೈತಿಕಾಚಾರಕ್ಕೆ ಶ್ರೇಷ್ಠ ಸ್ಥಾನವನ್ನು ಕೊಟ್ಟಿದ್ದು ಕಂಡು ಬರುತ್ತದೆ.

(೨) ವಚನ :- ನಾ ಮಾರಬಂದ ಸುಧೆಯ ಕೊಂಬುವರಾರೂ ಇಲ್ಲ. ಒಳಗಣ ಇಂದ್ರಿಯಕ್ಕೆ ಹೊರಗಣ ಭಾಜನಕ್ಕೆ ಉಂಡು ದಣಿದು, ಕಂಡುದಣಿದು, ಸಂದೇಹವು ಬಿಟ್ಟು ದಣಿದು, ಕಂಡುದ ಕಾಣದೆ, ಸಂದೇಹದಲ್ಲಿ ಮರೆಯದೆ, ಆನಂದವೆಂಬುದು ಆಲಿಂಗನವ ಮಾಡಿ, ಆ ಕಣ್ಣಂ ಮುಚ್ಚಿ, ಮತ್ತಮಾ ಕಣ್ಣಂ ತೆರೆದು ನೋಡಲಾಗಿ ಧರ್ಮೇಶ್ವರಲಿಂಗವು ಕಾಣಬಂದಿತ್ತು.

ಭಾವ :- ಇದರಲ್ಲಿ ಹೆಂಡದ ಮಾರಯ್ಯನು ಸುರೆಯನ್ನು ಕುಡಿದು ಮತ್ತರಾದವರ ಸ್ಥಿತಿಯನ್ನು ಮನಸ್ಸಿನಲ್ಲಿ ತಂದು ಅವರಿಗೆ ಯಾವ ರೀತಿಯ ಆನಂದ ವಾಗುತ್ತದೋ, ಅವರುತೆಯೇ ತಾನು ಕುಡಿಯಲಿಕ್ಕೆ ಕೊಡುವ ಸುಧೆಯು, ಅಂದರೆ ಶಿವಾನುಭವವು, ಪರಿಣಾಮ ಮಾಡುತ್ತದೆಂದು ಹೇಳಿ ಈ ಸುಧೆಯನ್ನು (ಅಂದರೆ ಅಮೃತವನ್ನು) ಕುಡಿಯುವವರಾರೂ ಇಲ್ಲವಲ್ಲ ಎಂದು ಅವನು ದುಃಖಿಸುತ್ತಾನೆ.

ಈ ವಚನದ ಮೇಲಿಂದ ಹೆಂಡದ ಮಾರಯ್ಯನು ತನ್ನ ಅರವಟಿಗೆಯಲ್ಲಿ ಹೆಂಡವನ್ನು ಕುಡಿಯಲಿಕ್ಕಟ್ಟು ಹೆಂಡಗುಡಿಕರಿಗೆ ಶಿವಾನುಭವವನ್ನು

ಬೋಧಿಸಿ, ಈ ಅನುಭವವವೆಂಬ ಅಮೃತವನ್ನು ಸುರೆಯ ಬದಲು ಕುಡಿ ಯಿರೆಂದು ಹೇಳುತ್ತಿದ್ದನೆಂದು ತೋರಿಬರುತ್ತದೆ. ಈ ಅನುಭವವನ್ನು ಹೊಂದಿದರೆ ಅಂತರ್ಯದಲ್ಲಿ ಪಾರಮಾರ್ಥಿಕ ಬದಲಾವಣೆಯಾಗುವದು. ಇದರಿಂದ ಬಾಹ್ಯ ಶರೀರವನ್ನು ಮದೋನ್ಮತ್ತತೆಯಲ್ಲಿ ಕೆಡಹುವ ಸುರೆ ಯನ್ನು ನೀವು ಬಿಡುವಿರಿ ಎಂದು ಅವನು ಹೇಳುತ್ತಾನೆ. ಪಾರಮಾರ್ಥಿಕ ಸಾಧನೆಯಿಂದ ಮನುಷ್ಯನ ಚಟಗಳು ದೂರಾಗುವವೆಂದು ಹೆಂಡದ ಮಾರ ಯ್ಯನು ಹೆಂಡಗುಡಿಕರಿಗೆ ಇಲ್ಲಿ ಹೇಳುತ್ತಿದ್ದಾನೆ.

ಅವನು ಇಲ್ಲಿ ಹೇಳುವದೇನಂದರೆ—ನಾನು ಕುಡಿಯಲು ಕೊಡುವ ಸುಧೆಯನ್ನು ಸೇವಿಸುವವರಾರೂ ಇಲ್ಲ, ಎಂದು ಮೊದಲು ದುಃಖಿಸು ತ್ತಾನೆ. ನಿಮ್ಮ ಹೆಂಡದಿಂದ ಒಳಗಣ ಇಂದ್ರಿಯ ಮತ್ತು ಹೊರಗಣ ಶರೀರ ಇವುಗಳು ತೃಪ್ತವಾದಂತೆ ತೋರುವದೇನೋ ನಿಜವು. ಆಗ ನಿಮ್ಮ ಕಣ್ಣುಗಳು ದಣಿಯುತ್ತವೆ. ನಿಮ್ಮಲ್ಲಿ ಯಾವ ತರದ ಸಂದೇಹ ಗಳು ಉಳಿಯುವದಿಲ್ಲ. ಸುತ್ತಲಿನ ಪದಾರ್ಥಗಳು ನಿಮಗೆ ಕಾಣದಂತಾ ಗುತ್ತವೆ. ಸಂದೇಹ ವೆಂಬುದು ಏನೂ ತೋರುವದಿಲ್ಲ. ಎಲ್ಲದರ ಸ್ಮರ ಣೆಯು ನಿಮ್ಮಲ್ಲಿ ಇದೆ ಎಂತಲೂ ನಿಮಗೆ ಆಗ ಭಾಸವಾಗುತ್ತದೆ. ಈ ಸುರೆಯು ಚಕ್ಷುವನ್ನು ಮುಚ್ಚಿ ಜ್ಞಾನ ಚಕ್ಷುವನ್ನು ತೆರೆಯಿಸಿದಂತಾಗು ತ್ತದೆ. ಆದರೆ ಹಾಗೆಯೇ ನನ್ನ ಸುಧೆಯೂ ನಿಮ್ಮ ಮೇಲೆ ಪರಿಣಾಮ ಮಾಡುತ್ತದೆಂದು ಹೇಳಿ, ಇದನ್ನು ಅಂದರೆ ಜ್ಞಾನಾಮೃತವನ್ನು ಕುಡಿಯಿ ರೆಂದು ಹೇಳುತ್ತಾನೆ. ಆದರೆ ಇದಕ್ಕೆ ಸಿದ್ಧರಾರೂ ಇಲ್ಲವಲ್ಲಾ ಎಂದು ಮಾರಯ್ಯನು ದುಃಖಿಸುತ್ತಾನೆ.

ಇಲ್ಲಿ ಹೆಂಡಗುಡಿಕರಿಗೆ ಮಾತ್ರವಲ್ಲ, ಇತರ ಭಕ್ತಾದಿಗಳಿಗೂ ಕೂಡ ಉಚ್ಚ ಪಾರಮಾರ್ಥಿಕ ಬೋಧೆಯನ್ನು ಹೆಂಡದ ಮಾರಯ್ಯನು ಮಾಡಿ ದ್ದಾನೆ.

(೨) ವಚನ :- ಕರಣಸಾಲ್ಕು, ಮದವೆಂಟು, ವ್ಯಸನ ಏಳು, ಅರಿಷಡ್ವರ್ಗಗಳಲ್ಲಿ ಇಂತೀ ಉರವಣೆಗೊಳಗೊಂತ್ತ ಆಣವ, ಮಾಯಿಕ,

ಕಾರ್ಮಿಕ ಮೂರು ಸುರೆಯಲ್ಲಿ ಮುಳುಗುತ್ತ, ನಾ ತಂದ ಸುಧೆ ನಿಮಗಿಲ್ಲ ಎಂದೆ. ಅದು ಧರ್ಮೇಶ್ವರ ಲಿಂಗದ ಅಪ್ಪಣೆ.

ಭಾವ :– ಇಲ್ಲಿ ಸುರಾಪಾನಿಗಳಿಗೆ ಸಿಟ್ಟಿನಿಂದ ಬೋಧಿಸುತ್ತಾನೆ. ಎಲೋ ಸುರಾಪಾನಿಗಳೇ, ನಾನು ನಿಮಗೆ ಒಂದು ಸುರೆಯನ್ನು ತಂದಿದ್ದೇನೆ. ನಾನೇನು ಮಾಡಲಿ ? ಅದು ನಿಮಗೆ ದೊರಕಲಾರದು. ಇದು ಪರಮಾತ್ಮನ ಅಪ್ಪಣೆ ಎಂದು ಹೇಳುತ್ತಾನೆ ? ಅದು ನಿಮಗೆ ಯಾಕೆ ದೊರೆಯುವದಿಲ್ಲೆಂದರೆ, ನೀವು ನಾಲ್ಕು ಕರಣಗಳು, ಎಂಟು ಮದಗಳು, ಏಳು ವ್ಯಸನಗಳು, ಆರು ವಿಧದ ವೈರಿಗಳು, ಇವುಗಳ ಉರವಣೆಯಲ್ಲಿದ್ದಿರಿ ನೀವು ಮೂರು ತೆರೆದ ಸುರಪಾನಗಳನ್ನು ಮಾಡುತ್ತಾ ಇದ್ದೀರಿ. ಅವು ಆಣವ ಮಲ, ಮಾಯಿ ಕಮಲ, ಮತ್ತು ಕಾರ್ಮಿಕಮಲ ಇವುಗಳೇ ಇವೆ. ಅವುಗಳಲ್ಲಿ ನೀವು ಮುದ್ದೆಯಾಗಿ ಬಿದ್ದಿದ್ದೀರಿ. ಆದರೆ ಅವುಗಳ ಬದಲು ನಿಮಗೆ ನಾನು ಕುಡಿಯಲು 'ಸುಧೆ' ಎಂದರೆ ಅಮೃತವನ್ನು ಕೊಡಲಪೇಕ್ಷಿಸುತ್ತೇನೆ. ಆದರೆ ಅದು ನಿಮಗೆ ದೊರಕಲಾರದು. ಯಾಕೆಂದರೆ ಪರಮಾತ್ಮನ ಅಪ್ಪಣೆ ಹಾಗಿದೆ. ಅಂದರೆ ಶಿವಾನುಭವವೆಂಬುದು ನಿಮ್ಮಂಥ ಸುರಾಪಾನಿಗಳಿಗಿಲ್ಲ, ಎಂದು ಹೇಳುವದೇ ವಚನಕಾರನ ಮುಖ್ಯ ಭಾವವು.

(೪) ವಚನ :– ಮಣ್ಣೆಂಬ ಘಟದ ಮಧ್ಯದಲ್ಲಿ ಹೊನ್ನೆಂಬ ಸುರೆ ಹುಟ್ಟಿತು. ಹೆಣ್ಣೆಂಬ ಬಟ್ಟಲಲ್ಲಿ ಅದು ಊಟಲಾಗಿ ಲಹರಿ ತಲೆಗೇರಿತ್ತು. ಈ ಉನ್ಮತ್ತದಲ್ಲಿ ಮಗ್ನರಾದವರೆಲ್ಲರೂ ಅರುಹಿರಿಯರೆಂತಪ್ಪರೋ ? ಭಕ್ತಿ ವಿರಕ್ತಿ ಎಂಬುದತ್ತಲೆ ಉಳಿಯಿತ್ತು, ಧರ್ಮೇಶ್ವರ ಲಿಂಗದತ್ತ ಮುಂತಿಲ್ಲ.

ಭಾವ :– ಸುರಪಾನಿಗಳು ಮಣ್ಣಿನಿಂದಾದ ತಮ್ಮ ದೇಹದಲ್ಲಿ ಹೊನ್ನು ಎಂಬ ಸುರೆಯನ್ನು ಉಂಟುಮಾಡಿಕೊಂಡು, ಹೆಣ್ಣೆಂಬ ಬಟ್ಟಲಲ್ಲಿ ಅದನ್ನು ಕುಡಿಯುತ್ತಾರೆ ಇದರಿಂದ ಅವರು ಉನ್ಮತ್ತರಾಗಿ ಜ್ಞಾನದಿಂದ ಹೊರಗಾಗುತ್ತಾರೆ ಇವರಿಗೆ ಭಕ್ತಿ, ವಿರಕ್ತಿ ಎಂಬುವು ಇಲ್ಲ. ಅಂದ ಬಳಿಕ

ಇವರು ಪರಮಾತ್ಮನ ಸಾಮರಸ್ಯವನ್ನು ಹೊಂದುವದು ದೂರವೇ ಸರಿ ಎಂದು ಹೇಳುತ್ತಾನೆ.

(೫) ವಚನ :– ಘಟಕುಂಭದಲ್ಲಿ ಜೀವನೆಂಬ ಜೆಗಟ ಬಂದಿತ್ತು. ದೃಷ್ಟವ ಇಷ್ಟದಲ್ಲಿ ಕಟ್ಟಲಾಗಿ ಮುಳಿ ಮುರಿದು ಒಡಲೊಡೆಯಿತ್ತು. ಅಂಗದ ಅಗ್ನಿಯಲ್ಲಿ ಬೇಯಿಸಿ ಮೂರು ಸಂಗ ಒದೆದ ಮಡಕೆಯ ಓಡಿನಲ್ಲಿ ಶೃತ, ದೃಷ್ಟ, ಅನುಮಾನವೆಂಬ ಕೋಲಿನಲ್ಲಿ ಕಡೆಯಲಾಗಿ ರಸ ಒಳಗಾಗಿ ಹೆಪ್ಪ ಹೊರಗಾಯಿತ್ತು. ಆ ಸುಧೆಯ ತುಂಬಿ ತಂದೆ ಒಮ್ಮೆಗೆ ಕೊಂಡಲ್ಲಿ ಬ್ರಹ್ಮನ ಕಲ್ಪವ ಕೆಡಿಸಿತ್ತು. ಮತ್ತೊಮ್ಮೆಗೆ ಕೊಂಡಲ್ಲಿ ವಿಷ್ಣುವಿನ ಗೊತ್ತಕಿತ್ತಿತ್ತು. ಮೂರೆಂದು ಮೊದಲಾ ಹಾಗ ಮೀರಿದ ರುದ್ರನ ಅಗಡವ ಕಿತ್ತಿತ್ತು. ಅರಿದು ಕೊಂಡಲ್ಲಿ ಸುಧೆ, ಮರೆದು ಕೊಂಡಲ್ಲಿ ಸುರೆಯಾಗಿ ಅದು ಹಿರಿಯರ ಮರವೆಯ ಮಾಡಿತ್ತು. ನಾ ತಂದ ಬೇಹಾರವ ಆಹವರೆಲ್ಲರೂ ಕೊಳ್ಳಿ ಧರ್ಮೇಶ್ವರ ಲಿಂಗವನರಿಯಬಲ್ಲಡೆ.

ಭಾವ :– ಇದು ಬೆಡಗಿನ ವಚನವಿದೆ. ಸುರಪಾನಿಗಳಿಗೆ ಉದ್ದೇಶಿಸಿಯೇ ಇದೆ. ಹಾಗೆಯೇ ಸುರೆಯನ್ನು ಮಾಡುವವರಿಗೂ ಇದು ಸಂಬಂಧಪಟ್ಟಿದೆ. ಸುರೆಯನ್ನು ಸೇವಿಸಬಾರದೆಂದು ಬೋಧ ಮಾಡುವದೇ ವಚನಕಾರನ ಮುಖ್ಯ ಉದ್ದೇಶವಿರುವದು ಸ್ಪಷ್ಟವಿದೆ.

(೬) ವಚನ :– ಮಣ್ಣು ಹೊನ್ನು ಹೆಣ್ಣೆಂಬ ತ್ರಿಭಂಗಿಯಲ್ಲಿ ಭಂಗಿತರಾಗಿ ಆಶೆಯೆಂಬ ಮಧುಪಾನದಿಂದ ಉಕ್ಕಲಿತವಿಲ್ಲವೆ ವಸ್ತುವ ಮುಟ್ಟುವದಕ್ಕೆದೃಷ್ಟವಿಲ್ಲದೆ ಇಂತೀ ಕಷ್ಟದ ಮರೆಯಲ್ಲಿ ದೃಷ್ಟದ ಸುರಪಾನವ ಕೊಂಡು ಮತ್ತರಾಗುತ್ತ ಇಷ್ಟದ ದೃಷ್ಟದ ಚಿತ್ತ ಮುಟ್ಟುವುದೇ ? ಧರ್ಮೇಶ್ವರ ಲಿಂಗವ ಮುಟ್ಟಿದ ಇತ್ತಲೆ ಉಳಿಯಿತ್ತು.

(೭) ವಚನ :– ಬಲ್ಲೆನೆಂಬ ಮದದಲ್ಲಿ ಅರಿದೆನೆಂಬ ಮದಪಾನ ದವಂ ಕೊಂಡು ಅಹಂಕಾರವೆಂಬ ಮದ ಸರ್ವಾಂಗವ ವೇಧಿಸಿ ತಲೆಗೇರಿದಲ್ಲಿ ಸತ್ತೆಂಬುದ ನರಿಯದೆ ಚಿತ್ತೆಂಬುದ ತಿಳಿಯದೆ ಆನಂದವೆಂಬ ಅಸ್ತ್ರ

ಯುವ ಭಾವಿಸಿ ನೋಡದೆ ಸ್ಥೂಲ ಸೂಕ್ಷ್ಮಕಾರಣವೆಂಬ ತನುತ್ರಯಂದ ಭೇದವ ಕಾಣಲರಿಯದೆ ಅಂಡ ಪಿಂಡವೆಂಬ ಖಂಡಿತವ ತಿಳಿಯಲರಿಯದೆ ದಿಂಡೆಯತನದಿಂದ ಕಂಡೆನೆಂದರೆ ಅದು ತಾ ಕೊಂಡ ಮೂರು ಹೇಡಿದ ಗುಣವೆಂಬೆ.

ಮೇಲಿನ ೬ನೇ ಮತ್ತು ೭ನೇ ವಚನಗಳು ಭಂಗೀ ಸೊಪ್ಪು, ಮದ್ಯ ಪಾನ ಮಾಡುವವರನ್ನು ಹೆಂಡಗುಡಿಕರನ್ನು ಉದ್ದೇಶಿಸಿ ಇದ್ದು ಅವುಗ ಳಲ್ಲಿ ಹೆಂಡದ ಮಾರಯ್ಯನು ಉಚ್ಚತರದ ಪಾರಮಾರ್ಥಿಕ ಬೋಧೆಯನ್ನು ಮಾಡುತ್ತ ಈ ವ್ಯಸನಕ್ಕೆ ಒಳಗಾಗಬೇಡಿರೆಂದು ಹೇಳಿದ್ದಾನೆ ಈ ಎರಡೂ ವಚನಗಳಲ್ಲಿ ಶಿವಾನುಭವದ ವಿಚಾರಗಳು ತುಂಬಿವೆ.

ಬಸವೇಶ್ವರನು ಕಲ್ಯಾಣ ಪಟ್ಟಣದಲ್ಲಿ ಕೀಳ ಜನರನ್ನು ವ್ಯಸನಾಧೀನ ರನ್ನೂ ದುಷ್ಟರನ್ನೂ ಕೂಡಿಸಿಕೊಂಡು ವೀರಶೈವ ಧರ್ಮದ ಪ್ರಸಾರ ಮಾಡಿದನೆಂದು ಅವನ ಮೇಲೆ ಬಹುಜನರ ಆರೋಪವಿರುತ್ತದೆ. ಇದಕ್ಕೆ ಅವರು ಹೆಂಡದ ಮಾರಯ್ಯನ ಉದಾಹರಣೆಯನ್ನು ಆಗಿಂದಾಗ್ಗೆ ಕೊಡು ತ್ತಾರೆ. ಆದರೆ ಹೆಂದದ ಮಾರಯ್ಯನ ವಚನಗಳಿಂದ ಅವನು ಹೆಂಡಗಂಡಿ ಕರನ್ನು ಮದ್ಯ ಸೇವನೆ ಮಾಡುವವರನ್ನೂ ತನ್ನಲ್ಲಿ ಬರಮಾಡಿಕೊಳ್ಳುತ್ತಿ ದ್ದರೂ ಅವನು ಅವರಿಗೆ ಶಿವಾನುಭವದ ಉಚ್ಚ ವಿಚಾರಗಳನ್ನು ಬೋಧಿಸಿ ಇಂಥವರು ತಮ್ಮ ವ್ಯಸನಗಳನ್ನು ಬಿಡಲಿಕ್ಕೆ ಅವನು ಪ್ರಯತ್ನ ಮಾಡು ತ್ತಿದ್ದಾನೆಂಬುದು ನಾವು ಮೇಲೆ ಉದಾಹರಿಸಿದ ವಚನಗಳಿಂದ ಕಂಡು ಬರು ತ್ತದೆ.

**(ಶಿವಶರಣರ ಚರಿತ್ರೆಗಳು ಭಾಗ ೧ ರಿಂದ)**

# ಉರಿಲಿಂಗಪೆದ್ದಿ

ಉರಿಲಿಂಗ ಪೆದ್ದಿಯು ಉರಲಿಂಗ ದೇವನ ಶಿಷ್ಯನು. ಇವನು ಆರಂಭ ದಲ್ಲಿ ಅತ್ಯಂತ ಬಡವನಾಗಿ ಕಳ್ಳತನವನ್ನು ಮಾಡುತ್ತಾ ಜೀವಿಸುತ್ತಿದ್ದನು. ಆದರೆ ಮುಂದೆ ಅವನು ಉರಿಲಿಂಗ ದೇವನಿಂದ ಉಪದೇಶವನ್ನು ಹೊಂದಿ ಅತ್ಯಂತ ವಿದ್ವಾಂಸನಾಗಿ ಅವನ ಆಚಾರ್ಯ ಪೀಠವನ್ನು ಹೊಂದಿದನು ಅವನ ವಚನಗಳು ಅತ್ಯಂತ ಶ್ರೇಷ್ಠತರವಾದವುಗಳು ಅವು ವೀರಶೈವ ವಾಙ್ಮಯದಲ್ಲಿ ಅತ್ಯುಚ್ಚ ಸ್ಥಾನವನ್ನು ಪಡೆದಿರುತ್ತವೆ.

ಉರಿಲಿಂಗ ಪೆದ್ದಿಯು ಮೊದಲನೆಯ ಹೆಸರು ಪೆದ್ದಣ್ಣನೆಂದಿದ್ದು ಅವನು ಕಂಧಾರ ಗ್ರಾಮಕ್ಕೆ ಬಂದು ಅವನು ಅತ್ಯಂತ ಬಡತನದ ಮೂಲಕ ಘೋರ ಕೃತ್ಯಗಳನ್ನು ಮಾಡುತ್ತ ಅಲ್ಲಿ ಜೀವಿಸುತ್ತಿದ್ದನು. ಅದೇ ಗ್ರಾಮದಲ್ಲಿ ಉರಿಲಿಂಗ ದೇವನಿದ್ದು ಅವನು ತನ್ನ ಧರ್ಮ ನಿಷ್ಠೆಗೋಸ್ಕರ ಅತ್ಯಂತ ಪ್ರಸಿದ್ಧಿಯನ್ನು ಹೊಂದಿ ಅಲ್ಲಿ ಗ್ರಾಮದ ಜನರ ಧಾರ್ಮಿಕ ಕೃತ್ಯಗಳನ್ನು ಮಾಡುತ್ತ ಇದ್ದನು. ಹೀಗಿರುತ್ತಿರಲು ನಂದಿವಾಡ ಎಂಬ ಗ್ರಾಮದವನಾದ ೧) ಸೂರಯ್ಯನೆಂಬುವನು ಉರಿಲಿಂಗ ದೇವನಿಂದ ದೀಕ್ಷೆಯನ್ನು ಹೊಂದುವ ದಕ್ಕೋಸ್ಕರ ಅವನ ಮಠಕ್ಕೆ ಬಂದಿದ್ದನು. ಸೂರಯ್ಯನು ಈ ಕಾರ್ಯ ಕ್ಕೋಸ್ಕರ ವಿಶೇಷ ಸನ್ನಾಹಗಳನ್ನು ಸಂಗ್ರಹಿಸಿದ್ದುದನ್ನು ಪೆದ್ದಣ್ಣನಿಗೆ ತಿಳಿದು ಬರಲು ಅವನು ಆ ವಸ್ತುಗಳನ್ನು ಕದಿಯಬೇಕೆಂದು ಅಪೇಕ್ಷಿಸಿ ಮಠದ ಮಾಳಿಗೆಯನ್ನೇರಿ, ಬೆಳಕಿಂಡಿಯಿಂದ ಕೆಳಗೆ ಇಳಿಯಲು ಪ್ರಯತ್ನ ಮಾಡ ಹತ್ತಿದನು. ಅಷ್ಟರಲ್ಲಿ ಕೆಳಗೆ ಉರಿಲಿಂಗ ದೇವನು ಲಿಂಗ ಪೂಜೆಯಲ್ಲಿ ತೊಡಗಿದ್ದುದನ್ನು ಕಂಡನು. ಆದ್ದರಿಂದ ಪೆದ್ದಣ್ಣನು ಕೆಳಗಿಳಿಯಲು ಧೈರ್ಯ ಮಾಡದೆ ಉರಿಲಿಂಗ ದೇವನ ಲಿಂಗಪೂಜಾಕ್ರಿಯೆಗಳನ್ನು ನಿರೀಕ್ಷಿಸುತ್ತ ಅಲ್ಲಿಯೇ ಕುಳಿತುಕೊಂಡನು

---

೧) ಕೆಲವು ಗ್ರಂಥಗಳಲ್ಲಿ ಸುರೇಶನೆಂದಿದೆ

ಕೆಳಗೆ ಕೋಣೆಯ ತುಂಬೆಲ್ಲ ಲಿಂಗಪೂಜೆಯ ಸಾಮಗ್ರಿಗಳು ತುಂಬಿದ್ದವು. ಗಂಧ ಪುಷ್ಪಾದಿಗಳು ಸುವಾಸನೆಯನ್ನು ಅಲ್ಲಿ ಬೀರುತ್ತಿದ್ದವು. ಉರಿಲಿಂಗ ದೇವನು ಹಸ್ತದಲ್ಲಿ ಲಿಂಗವನ್ನು ಧರಿಸಿಕೊಂಡು ಪರಮಾತ್ಮನ ಸ್ತೋತ್ರ ಮಾಡುತ್ತಿದ್ದನು. ಅವನು ತನ್ನ ಸ್ತೋತ್ರದಲ್ಲಿ ತಾನೇ ಸತಿ ಲಿಂಗವೇ ಪತಿ ಭಾವವುಳ್ಳ ವಚನಗಳನ್ನು ಸ್ತೋತ್ರಗಳನ್ನು ನುಡಿಯುತ್ತಿದ್ದನು. ಅವನು ನುಡಿಯುತ್ತ ನುಡಿಯುತ್ತ ಧ್ಯಾನ ಮಗ್ನನಾಗಲು ಉರಿಲಿಂಗ ದೇವನು ಸ್ತ್ರೀಯಂತೆಯೂ ಲಿಂಗವು ಪುರುಷನಂತೆಯೂ ಇರುವದು ಪೆದ್ದಣ್ಣನಿಗೆ ತೋರಿಬಂದಿತು. ಈ ರೀತಿ ಕೆಲವು ವೇಳೆ ಉರಿಲಿಂಗ ದೇವನು ಸಮಾಧಿಸ್ಥನಾಗಿ ಎಚ್ಚತ್ತ ಬಳಿಕ ನಂದಿವಾಡದ ಸೂರಯ್ಯನಿಗೆ ದೀಕ್ಷೆಯನ್ನು ಮಾಡಲು ಉದ್ಯುಕ್ತನಾದನು. ಅವನಿಗೆ ಉರಿಲಿಂಗ ದೇವನು ಮಂತ್ರೋಪದೇಶವನ್ನು ಮಾಡಿ, ಇಷ್ಟ, ಪ್ರಾಣ, ಭಾವ ಲಿಂಗಗಳ ನೆಲೆ ಕಲೆಗಳನ್ನು ಅರುಹಿಕೊಟ್ಟು ಅವನಿಗೆ ಲಿಂಗಧಾರಣೆಯನ್ನು ಮಾಡಿದನು.

ಈ ಎಲ್ಲಾ ಕಾರ್ಯಗಳನ್ನು ಪೆದ್ದಣ್ಣನು ಮೇಲೆ ಬೆಳಕಿಂಡಿಯೊಳಗಿಂದ ನೋಡುತ್ತ ಕುಳಿತಿದ್ದನು, ಆ ಕ್ರಿಯೆಗಳೆಲ್ಲವು ಮುಗಿಯುವವರೆಗೆ ಎಲ್ಲವನ್ನು ನೋಡುತ್ತಿರಲು ಆಗ ಅವನಿಗೆ ಭಕ್ತಿ ಭಾವವು ಉಂಟಾಗಿ, ಅವನ ವೃತ್ತಿಯು ಕೂಡಲೆ ಬದಲಾಯಿತು. ಅವನು ಚೋರಕೃತ್ಯವನ್ನು ಮಾಡಬೇಕೆಂದು ಬಂದಿದ್ದ ತನ್ನ ಮೊದಲಿನ ಇಚ್ಛೆಯನ್ನು ತೊರೆದು ಮಾಳಿಗೆ ಮೇಲಿಂದಿಳಿದು ತನ್ನ ಮನೆಗೆ ಹೊರಟು ಹೋದನು.

ಉರಿಲಿಂಗ ದೇವನ ಲಿಂಗಪೂಜಾಕ್ರಿಯೆಗಳನ್ನು ನೋಡಿದಂದಿನಿಂದ ಅವನು ತೀರ ಹೊಸ ಮನುಷ್ಯನಂತಾದನು. ದೇವಪೂಜಾದಿಕಾರ್ಯಗಳನ್ನು ನೋಡಿದಲ್ಲಿ ಭಕ್ತಿ ಉಂಟಾಗುತ್ತಿದೆಂದು ಆರ್ಯರ ವಚನವು ಇದ್ದು, ಅದು ಆದಿನ ಪೆದ್ದಣ್ಣನಲ್ಲಿ ಸಿದ್ಧಿಗೆ ಹೋಯಿತು. ಮುಂದೆ ಅವನು ಕೇವಲ ಪರಮಾತ್ಮನ ಭಕ್ತನಾಗಿ ಲಿಂಗದೀಕ್ಷೆಯನ್ನು ಹೊಂದಬೇಕೆಂಬ ಉತ್ಕಟೇಚ್ಛೆಯನ್ನು ತಾಳಿದವನಾದನು.

ಆದರೆ ಅವನು ಉರಿಲಿಂಗ ದೇವನಲ್ಲಿಗೆ ಹೋಗಿ ತನಗೆ ದೀಕ್ಷೆಯನ್ನು ಕೊಡಬೇಕೆಂದು ಅವನಿಗೆ ಕೇಳಿಕೊಳ್ಳಲಿಕ್ಕೆ ಧೈರ್ಯವಾಗಲಿಲ್ಲ. ಆದ್ದರಿಂದ ಅವನು ಇದಕ್ಕೊಂದು ಉಪಾಯವನ್ನು ಯೋಚಿಸಿ ದಿನಾಲು ಅರಣ್ಯಕ್ಕೆ ಹೋಗಿ ಕಟ್ಟಿಗೆಗಳನ್ನು ತಂದು ಅವುಗಳನ್ನು ಉರಿಲಿಂಗ ದೇವನ ಮಠಕ್ಕೆ ಹಾಕುವ ಕಾರ್ಯವನ್ನು ಆರಂಭಿಸಿದನು. ಬಸವಾದಿ ಪ್ರಮಥರ ತತ್ವದಂತೆ ಈ ರೀತಿ ಒಂದು ಕಾಯಕವನ್ನು ಕೈಕೊಂಡು ಉರಿಲಿಂಗ ದೇವನ ಪ್ರೀತಿಯನ್ನು ಸಂಪಾದಿಸಬೇಕೆಂದು ಅವನು ಬಗೆದನು. ಕೆಲವು ದಿವಸಗಳಾದ ಮೇಲೆ ಉರಿಲಿಂಗ ದೇವನು ಅವನಿಗೆ ನೀನು ಹಾಕಿದ ಈ ಕಟ್ಟಿಗೆಯ ಹೊರೆಗಳ ಬೆಲೆಯನ್ನು ತೆಗೆದುಕೊಂಡು ಹೋಗು ಎಂದು ಹೇಳಿದನು. ಅದಕ್ಕೆ ಪೆದ್ದಣ್ಣನು ಅವುಗಳ ಬೆಲೆಯು ನನಗೆ ಬೇಡ, ನೀವು ನಂದಿವಾಡದ ಭಕ್ತನಿಗೆ ದೀಕ್ಷೆಯನ್ನು ಕೊಟ್ಟಂತೆ ನನಗೂ ದೀಕ್ಷೆಯನ್ನು ಕೊಡಬೇಕೆಂದು ಬೇಡಿಕೊಂಡನು ಆಗ ಉರಿಲಿಂಗ ದೇವನು ಅವನ ಸಮಾಚಾರವನ್ನು ಕೇಳಲು ಅವನು ಹಿಂದೆ ಮಾಡುತ್ತಿದ್ದ ಚೋರಕೃತ್ಯಗಳು, ಅವನ ಪೂರ್ವದ ಸ್ಥಿತಿ ಅವುಗಳನ್ನು ತಿಳಿದವನಾಗಿ ಪೆದ್ದಣ್ಣನೊಡನೆ ಏನೂ ಮಾತನಾಡದೆ ಹೊರಗೆ ಹೋಗಿ ಬಿಟ್ಟನು. ಆದರೆ ಪೆದ್ದಣ್ಣನು ಇಷ್ಟಕ್ಕೆ ಬಿಡದೆ ಮಠದ ಮುಂದೆ ಕಟ್ಟಿಗೆಯ ಹೊರೆಗಳನ್ನು ದಿನಾಲು ತಂದು ಹಾಕುತ್ತಲೆ ಬಂದನು ಮತ್ತು ಉರಿಲಿಂಗ ದೇವನನ್ನು ಕಂಡಾಗಲೆಲ್ಲ ತನಗೆ ದೀಕ್ಷೆಯನ್ನು ಕೊಡಬೇಕೆಂದು ಅವನನ್ನು ಬೇಡಿಕೊಳ್ಳ ಹತ್ತಿದನು. ಆದರೆ ಉರಿಲಿಂಗ ದೇವನು ಪೆದ್ದಣ್ಣನ ಈ ನಿಷ್ಠೆಯು ಎಷ್ಟರ ಮಟ್ಟಿಗೆ ನಿಜವಿರುತ್ತದೆಂಬುವದನ್ನು ಪರೀಕ್ಷಿಸಿಸಲು ತ್ತಿರುವದಾಗಿಯೋ ಏನೋ ಎನ್ನುವಂತೆ, ಅವನು ಅವನನ್ನು ಅಲಕ್ಷ ಮಾಡುತ್ತಲೆ ಬಂದನು. ಮುಂದೆ ಕೆಲವು ದಿವಸಗಳಾದ ಮೇಲೆ ಪೆದ್ದಣ್ಣನು ಹಾದಿಯಲ್ಲಿ ಉರಿಲಿಂಗ ದೇವನು ಇದುರಿಗೆ ಬರುವದನ್ನು ಕಂಡು ತನಗೆ ದೀಕ್ಷೆಯನ್ನು ಕೊಡಲೇಬೇಕೆಂದು ಒತ್ತಾಯದಿಂದ ಕೇಳಿಕೊಳ್ಳಲು ಉರಿಲಿಂಗ ದೇವನು ಕುಪಿತನಾಗಿ ಅಲ್ಲಿ ಬಿದ್ದಿದ್ದ ಒಂದು ಕಲ್ಲನ್ನು ತೆಗೆದುಕೊಂಡು ಘೇಂಜಾದಗಡಿಜ (೧) ಎಂದು ಇದನ್ನು ಪೂಜೆ ಮಾಡೆಂದು ಹೇಳಿ ಮುಂದೆ

(೧) ನಾವು ಶಿವಾನುಭವ ಪತ್ರಿಕೆ ಸಂ ೧೨-೫-೪೪೩ ಇದರಲ್ಲಿ ಉರಲಿಂಗಪೆದ್ದಿಯ

ಹೊರಟು ಹೋದನು. ಆಗ ಪೆದ್ದಣ್ಣನು ಆ ಕಲ್ಲನು ಭಕ್ತಿಯಿಂದ ತೆಗೆದು ಕೊಂಡು ಮನೆಗೆ ಬಂದು ಉರಿಲಿಂಗದೇವನು ನುಡಿದ 'ಘೇಜಾದಗಡಿಚ' ಈ ಶಬ್ದಗಳೇ ತನ್ನ ಗುರುಮಂತ್ರವೆಂದು ಭಾವಿಸಿ ಅವುಗಳನ್ನು ಉಚ್ಚರಿಸುತ್ತ ಆ ಕಲ್ಲನ್ನೇ ಇಷ್ಟಲಿಂಗವೆಂದು ತಿಳಿದು ಪೂಜಿಸಹತ್ತಿದನು. ಈ ಆರು ಅಕ್ಷರಗಳುಳ್ಳ ಪದವೇ ಅವನಿಗೆ ಷಡಕ್ಷರ ಮಂತ್ರವಾಯಿತು. ಕೆಲದಿನಗಳಾದಮೇಲೆ ಉರಿಲಿಂಗ ದೇವನಂತೆಯೇ ಪರಮಾತ್ಮನಲ್ಲಿ ಅವನು ಧ್ಯಾನಸ್ಥನಾಗಿ ಕುಳ್ಳಿರತೊಡಗಿದನು ಹೀಗೆ ಆಚರಿಸುತ್ತಿರುವರಲ್ಲಿ ಅವನು ಪೂಜಿಸುತಿದ್ದ ಆ ಕಲ್ಲು ಅವನ ಭಕ್ತಿಯ ಮೂಲಕ ಜ್ಯೋತಿರ್ಲಿಂಗ ಸ್ವರೂಪವನ್ನೇ ಹೊಂದಿತು.

ಮುಂದೆ ಪೆದ್ದಣ್ಣನು ಉರಿಲಿಂಗದೇವನಲ್ಲಿ ಕೇವಲ ಗುರುಭಕ್ತಿಯನ್ನು ತಾಳಿ ಅನೇಕ ದಿನಗಳವರೆಗೆ ಆಚರಿಸುತ್ತಾ ಬರಲು ತಾನು ಮೊದಲುಕೊಟ್ಟಿದ್ದ ಕಾಡಕಲ್ಲು ಜ್ಯೋತಿರ್ಲಿಂಗವಾದದನ್ನು ಉರಿಲಿಂಗದೇವನು ತಿಳಿದವನಾಗಿ ಅವನ ಭಕ್ತಿಗೆ ಮೆಚ್ಚಿ ಅವನಿಗೆ ವಿಧಾನ ಪೂರ್ವಕವಾಗಿ ಲಿಂಗದೀಕ್ಷೆಯನ್ನು ಅನುಗ್ರಹಿಸಿದನು ಮತ್ತು ಅವನಿಗೆ ಉರಿಲಿಂಗಪೆದ್ದಿ' ಎಂಬ ಹೆಸರನ್ನಿಟ್ಟನು ಮುಂದೆ ಈ ಗುರು ಶಿಷ್ಯರೀರ್ವರು ನಾಡಿನಲ್ಲೆಲ್ಲ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದರು.

ಈ ಕಾಲದಲ್ಲಿ ನಂದರಾಜನೆಂಬ ಅರಸನು ಈ ಕಂಧಾರ ಪಟ್ಟಣದಲ್ಲಿ ಆಳುತ್ತಿದ್ದನು. ಅಲ್ಲಿ ಅವನು ಒಂದು ಕೆರೆಯನ್ನು ಅಗಿಸುತ್ತಿರಲು ಅವನು ಎಷ್ಟು ಪ್ರಯತ್ನ ಮಾಡಿದರೂ ಅದರಲ್ಲಿ ನೀರು ಏನು ಬೀಳದೆ ಹೋಯಿತು. ಆಗ ಜಲ ಶಿಲ್ಪಗರು ಅದರ ನಡುವಿನ ಕಲ್ಲನ್ನು ತೆಗೆಯಿಸಿದರೆ, ನೀರು ಬೀಳು ವದೆಂದು ಹೇಳಲು ಅದನ್ನು ಕಿತ್ತಿ ಹಾಕಲು ಎಷ್ಟು ಪ್ರಯತ್ನಮಾಡಿದರೂ

---

ವೃತ್ತಾಂತವನ್ನು ವಿವರಿಸುವಲ್ಲಿ ಉರಿಲಿಂಗದೇವನು "ಗೆ ಜಾದಿಗಿಡಿಚ ಎಂದು ಬೈದು ಕಲ್ಲು ಕೊಡಲು ಅದನ್ನು ತೆಗೆದುಕೊಂಡು ಗೆ ಜಾದಗಿಡಿಚ ಗೆ ಜಾದಗಿಡಿಚ ಇದೇ ಗುರುಮಂತ್ರ ವೆಂದು ಜಪಿಸುತ್ತಿರಲು" ಎಂದು ಭೈರವೇಶ್ವರ ಕಾವ್ಯದ ಸೂತ್ರ ರತ್ನಾಕರದಲ್ಲಿಯೂ ಅವ ತರಣವನು ಕೊಟ್ಟಿದ್ದೇನೆ. ಇವು ಮರಾಠೀ ಶಬ್ದಗಳಾಗಿವೆ "ಘೇ ಜಾದಗಡಿಚ" ಇದಕ್ಕೆ ಕಲ್ಲನ್ನು ತಕೊಂಡು ಹೋಗು" ಎಂಬ ಅರ್ಥವಾಗುತ್ತದೆ 'ಗೆ ಜಾದಗಿಡಿಚ ಜಾದಗಿಡಿಚ' ಇದು ಅಶುದ್ಧವಿದ್ದು ಘೇ ದಗಡಿಚ (ಕಲ್ಲನ್ನೇ ತಕೊಳ್ಳು) ಜಾದಗಡಿಚ (ಎಲ್ಲೀ ಕಲ್ಲೇ ಹೋಗು) ಇದು ಹೆಚ್ಚಿಗೆ ಶುದ್ಧವೆಂದು ತೋರುತ್ತದೆ 'ಘೇ ದಗಡಿಚ' ಇದು ಉರಿಲಿಂಗಪೆದ್ದಿಗೆ

ಅದು ಸಾಧ್ಯವಾಗಲಿಲ್ಲ. ಈ ಕಲ್ಲು ಉರಲಿಂಗದೇವನೂ ಆವನ ಶಿಷ್ಯನೂ ಪ್ರಯತ್ನಿಸಿದಲ್ಲದೆ ಹೊರಗೆ ಬಾರದೆಂದು ಗಣಿಕರು ಹೇಳಲಾಗಿ ಅರಸನು ಅವರಿಬ್ಬರನ್ನು ಕರೆಯಿಸಿದನು. ಅಗ ಅರಸನು ಆ ಕಲ್ಲನ್ನು ಕಿತ್ತಿಹಾಕಲು ಏನಾದರೂ ಒಂದು ಉಪಾಯವನ್ನು ಯೋಚಿಸಬೇಕೆಂದು ಅವರಿಗೆ ಹೇಳಿಕೊಳ್ಳಲಾಗಿ ಉರಲಿಂಗಪೆದ್ದಿಯು ಅದನ್ನು ಕೇಳಿ ಅರಸನಿಗೆ ಸಹಾಯ ಮಾಡಲು ಸಿದ್ಧನಾದನು. ಅವನು 'ಜಾದಗಡಿಚ' ಎಂದು ತನ್ನ ಮಂತ್ರಾರ್ಧವನ್ನು ಉಚ್ಚರಿಸಿದೊಡನೆ ಅವನಲ್ಲಿದ್ದ ಲಿಂಗವು ಆ ಕಲ್ಲಿನ ಮೇಲೆ ತತ್‌ಕ್ಷಣವೇ ಹೋಗಿ ಕುಳಿತಿತು. ಮುಂದೆ 'ಘೇ ದಗಡಿಚ' ಎಂದು ಉಳಿದ ಅರ್ಧ ಮಂತ್ರವನ್ನು ಉಚ್ಚರಿಸಲು ಕೂಡಲೇ ಆ ಲಿಂಗವಿದ್ದ ಕಲ್ಲು ಹೊರಗೆ ಕಿತ್ತು ಬಿದ್ದಿತು. ಆಗ ಅದರೊಳಗಿಂದ ನೀರಿನ ಒಂದು ದೊಡ್ಡ ಪ್ರವಾಹವು ಹೊರಚಿಲ್ಲಿತು. ಮತ್ತು ಶೀಘ್ರವಾಗಿ ಕೆರೆಯು ತುಂಬಿತು. ಮನುಷ್ಯನು ತನ್ನ ಮಂತ್ರ ಶಕ್ತಿಯ ಮೂಲಕ ಲಿಂಗ ಕಳೆಯನ್ನು ತನ್ನಲ್ಲಿ ಪ್ರಜ್ವಲಿಸಲು ಅವನಲ್ಲಿ ಒಂದು ಅಲೌಕಿಕ ಸಾಮರ್ಥ್ಯವು ಉಂಟಾಗುತ್ತದೆಂದು ಷಟ್‌ಸ್ಥಲ ಶಾಸ್ತ್ರದ ತತ್ವವಿದೆ. ಇಂಥವನು ಪ್ರಾಣಲಿಂಗಿಯು, ಶಿವಯೋಗಿಯು, ನಂದರಾಜನು ಉರಿಲಿಂಗಪೆದ್ದಿಯಲ್ಲಿ ಇಂಥ ಸಾಮರ್ಥ್ಯವು ಉಂಟಾದುದನ್ನು ಕಂಡು ಅವನನ್ನೂ ಅವನ ಗುರುವನ್ನೂ ಭಕ್ತಿಯಿಂದ ನಮಿಸಿ ಬೀಳ್ಕೊಟ್ಟನು.

ಮುಂದೆ ಕೆಲವು ದಿವಸಗಳಾದ ಮೇಲೆ ಉರಿಲಿಂಗದೇವನು ತನ್ನ ಆಚಾರ್ಯ ಪೀಠಕ್ಕೆ ಉರಿಲಿಂಗಪೆದ್ದಿಯನ್ನೇ ಕುಳ್ಳಿರಿಸಿ ತನ್ನ ಸಂಪ್ರದಾಯವನ್ನು ನಡಿಸುವದಕ್ಕೋಸ್ಕರ ಅವನಿಗೆ ಅನುಗ್ರಹ ಮಾಡಿದನು.

---

'ಜಾದಗಡಿಚ' ಇದು ಆ ಕಲ್ಲಿಗೆ ಸಂಬಂಧಿಸುತ್ತದೆ ಉರಿಲಿಂಗಪೆದ್ದಿಯು ತೆಲುಗನೆಂದು ಭಾವಿಸಿ, ಇವು ತೆಲುಗು ಶಬ್ದಗಳಿರಬಹುದೆಂದು ನಾವು ಮೊದಲು ಊಹಿಸಿದ್ದೆವು ಆದರೆ ಮುಂದೆ ನಂದರಾಜನೆದುರಿಗೆ ನಡೆದ ಸಂಗತಿಗಳನ್ನು ನಾವು ಪರೀಕ್ಷಿಸಿದಲ್ಲಿ ಅವುಗಳ ನಿಜಾರ್ಥದ ಮೇಲೆ ಪ್ರಕಾಶವು ಬೀಳುತ್ತದೆ ಅವು ಮರಾಠೀ ಶಬ್ದಗಳಿರುತ್ತವೆಂದು ತಿಳಿದು ಬರುತ್ತದೆ ಮಹಾರಾಷ್ಟ್ರದಲ್ಲಿ ಕಂದಾರವೆಂಬ ಗ್ರಾಮವು ಇರುತ್ತದೆ ಆದ್ದರಿಂದ ಇದೇ ಉರಿಲಿಂಗ ಗ್ರಾಮವಿರಬೇಕೆಂದು ನಾವು ಊಹಿಸಿದ್ದೇವೆ ಇಲ್ಲಿಂದ ತೆಲುಗು ಸೀಮೆಯು ಸಮೀಪವಾಗಿದೆ ಪೆದ್ದಣ್ಣ ಈ ಶಬ್ದವು ಮರಾಠಿಯಾಗಿರದೆ ತೆಲುಗುಭಾಷೆಯದಾಗಿದೆ ಉರಿಲಿಂಗ ಪೆದ್ದಿಯು ಮೊದಲು ತೆಲುಗು ಸೀಮೆಯಲ್ಲಿ ಜನಿಸಿದವನಾಗಿ ಮುಂದೆ ಮರಾಠೀ ಸೀಮೆಯೊಳಗಿದ್ದ ಕಂದಾರಕ್ಕೆ ಬಂದಿರಬಹುದೆಂದು ತೋರುತ್ತದೆ.

ಈ ಪ್ರಕಾರ ಉರಲಿಂಗಪೆದ್ದಿಯು ಕಂಧಾರ ಗ್ರಾಮದಲ್ಲಿ ಆಚಾರ್ಯ ಪೀಠವನ್ನು ಪಡೆದು ಶಿವಾನುಭವದ ತತ್ವಗಳನ್ನು ಪ್ರಸಾರ ಮಾಡಿದ್ದಾನೆ. ಅವನು ಮುಂದೆ ಸಂಸ್ಕೃತಾಭ್ಯಾಸವನ್ನು ಮಾಡಿ ಅದರಲ್ಲಿರುವ ಮತ ಗ್ರಂಥ ಗಳನ್ನು ಚನ್ನಾಗಿ ಪರಿಶೀಲಿಸಿದವನಾದನು. ಶಿವಶರಣರು ರಚಿಸಿದಂತೆ ಆತನು ಅನೇಕ ವಚನಗಳನ್ನು ರಚಿಸಿದ್ದಾನೆ.೧ ಅವು ಅನುಭವ ಪೂರ್ಣವಾ ಗಿದ್ದು ಅವುಗಳನ್ನು ನಿರೂಪಿಸುವಲ್ಲಿ ಅವನು ವೇದ, ಉಪನಿಷತ್ತು, ಆಗಮ ಈ ಮೊದಲಾದ ಅನೇಕ ಗ್ರಂಥಗಳಲ್ಲಿರುವ ವಾಕ್ಯಗಳನ್ನು ಹೇರಳವಾಗಿ ಉಪಯೋಗಿಸಿದ್ದಾನೆ. ಇದರಲ್ಲಿ ಅವನು ತೋರಿಸಿದ ಪಾಂಡಿತ್ಯವು ಅಗಾಧ ವಾದದ್ದು. ಬಹುತರವಾಗಿ ಅವನ ಪ್ರತಿಯೊಂದು ವಚನದಲ್ಲಿ ಸಂಸ್ಕೃತ ಗ್ರಂಥಗಳ ಅವತರಣಿಗಳು ವಿಪುಲವಾಗಿ ಬಂದಿರುತ್ತವೆ. ಯಾವ ವಚನ ಕಾರನು ಅವನಷ್ಟು ವೇದಾಗಮನಗಳಲ್ಲಿಯ ಆಧಾರಗಳನ್ನು ತೆಗೆದುಕೊಂಡು ವಚನಗಳನ್ನು ರಚಿಸಿರುವದಿಲ್ಲ. ಬಸವಾದಿ ಶಿವಶರಣರು ಪ್ರತಿಪಾದಿಸಿದ ತತ್ವಗಳಿಗೆ ಪುರಾತನ ಸಂಸ್ಕೃತ ಧರ್ಮಗ್ರಂಥಗಳ ಆಧಾರಗಳಿವೆ ಎಂಬುವ ದನ್ನು ತೋರಿಸುವದೇ ಇದರಲ್ಲಿ ಅವನ ಮುಖ್ಯ ಉದ್ದೇಶವಾಗಿತ್ತೆಂಬುದು ತೋರುತ್ತದೆ.

ಉರಿಲಿಂಗಪೆದ್ದಿಯ ಮಠಗಳು ಈಗ ನಾಲ್ಕು ಇದ್ದು ಒಂದು ಕಲ್ಯಾಣ ಪಟ್ಟಣದಲ್ಲಿ, ಎರಡನೆಯದು ಸೇಡಂದಿಂದ ೧೫ ಮೈಲುಗಳ ಮೇಲಿರುವ ಕೊರಳಿಯಲ್ಲಿ, ಮೂರನೆಯದು ಭಾಲ್ಕಿಯಲ್ಲಿ, ಮತ್ತು ನಾಲ್ಕನೆ ಯದು ಬೇವಿನಚಿಂಚೋಳಿ ಎಂಬಲ್ಲಿ ಇರುತ್ತವೆ. ಇವೆಲ್ಲವೂ ನಿಜಾಮು ಇಲಾಖೆಯಲ್ಲಿವೆ. ಅವನ ಸಮಾಧಿಯು ಈಗಲೂ ಕಲ್ಯಾಣದಲ್ಲಿ ಉರಲಿಂಗ ಪೆದ್ದಿಯ ಮಠದಲ್ಲಿಯೇ ಇದೆ. ೨

---

೧. ಇವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟವಾಗಿವೆ

೨. ಈ ಮಠಗಳ ವಿವರಗಳನ್ನು ಅವುಗಳ ಮುಖ್ಯಾಧಿಕಾರಿಗಳೇ ನಮ್ಮನ್ನು ಸಮಕ್ಷಮ ಕಂಡು ಹೇಳಿದ್ದಾರೆ. ಅವರ ಹೆಸರು ರಾಮಲಿಂಗಯ್ಯ ಶಿವಜಂಗಮ ಎಂದು ಇದ್ದು ಅವರು ನಮ್ಮನ್ನು ಕಂಡಾಗ ತಾಂಡೂರಕ್ಕೆ ಸಮೀಪವಿರುವ ಮಲ್ಲರಡ್ಡಿ ಪಲಿ ಎಂಬ ಗ್ರಾಮದಲ್ಲಿರುತ್ತಿದ್ದರು. ಅವರ ಪೂರ್ವಜರು ಲಿಂಗಧಾರಿಗಳಾಗಿ ವೀರಶೈವ ಧರ್ಮದಂತೆ ನಡೆಯುತ್ತ ಬಂದರೂ ಈ ಗ್ರಾಮದಲ್ಲಿಯವರು ತಮ್ಮನ್ನು ಅಸ್ಪೃಶ್ಯರೆಂದು ಭಾವಿಸಿ ವರ್ತಿಸುತ್ತಾರೆಂದು ಹೇಳಿದರು ! ಮಹಾನುಭಾವರಾದ ಉರಿಲಿಂಗದೇವ ಮತ್ತು ಉರಿಲಿಂಗ ಪೆದ್ದಿಗಳ ಮಠಗಳು ಅಸ್ಪೃಶ್ಯರ ಮಠಗಳೆಂದು ಭಾವಿಸಲ್ಪಡುವ ಪರಿಸ್ಥಿತಿಯುಂಟಾಗುವದು

ಉರಿಲಿಂಗ ಪೆದ್ದಿಯೂ ಅವನ ಗುರುವಾದ ಉರಿಲಿಂಗನೂ ವೀರಶೈವರಲ್ಲಿ ಆಗಿಹೋದ ಸಹಸ್ರ ಗಣಂಗಳಲ್ಲಿ ಗಣಿಸಲ್ಪಟ್ಟಿದ್ದಾರೆ. ಈ ಉಭಯತರು ಬಸವೇಶ್ವರಸಿದ್ಧ ೧೨ನೇ ಶತಮಾನದಲ್ಲಿಯೇ ಆಗಿ ಹೋಗಿರುತ್ತಾರೆ. ಬಹುಶಃ ಬಸವೇಶ್ವರನ ಕಾಲದಲ್ಲಿಯೇ ಉರಿಲಿಂಗ ಪೆದ್ದಿಯು ಕಲ್ಯಾಣದಲ್ಲಿ ಬಂದು ವಾಸಿಸಿರಬೇಕೆಂದು ನಮಗೆ ತೋರುತ್ತದೆ. ಆದ್ದರಿಂದಲೇ ಅವನ ಸಮಾಧಿಯು ಅಲ್ಲಿ ಇರುತ್ತದೆ.

ಮೇಲ್ಕಂಡ ಚರಿತ್ರೆಯಿಂದ ಆರಂಭದಲ್ಲಿ ಕಳ್ಳತನ ಮಾಡಿ ಜೀವಿಸುತ್ತಿದ್ದ ಒಬ್ಬ ಬಡ ಮನುಷ್ಯನು ಬಸವಾದಿ ಶಿವಶರಣ ತತ್ವಗಳನ್ನು ತಿಳಿದ ಬಳಿಕ ಸದ್ವರ್ತನೆಯುಳ್ಳವನಾಗಿ ಎಂಥ ಉಚ್ಚಸ್ಥಿತಿಗೆ ಬಂದನೆಂಬುದನ್ನು ನಾವು ಅರಿಯಬಹುದಾಗಿದೆ. ಇದರಿಂದ ಶಿವಶರಣರ ವಚನಗಳು ಎಷ್ಟು ಪರಿಣಾಮಕಾರಿಗಳೆಂಬುದು ಸ್ಪಷ್ಟವಾಗುತ್ತದೆ ಉರಿಲಿಂಗ ಪೆದ್ದಿಯಂಥ ಮೊದಲು ಹೀನ ವರ್ತನೆಯಲ್ಲಿದ್ದವನು ಗುರುವಿನ ಕಡೆಯಿಂದ ದೀಕ್ಷೆಯನ್ನು ಹೊಂದಿದನಷ್ಟೇ ಅಲ್ಲ, ಅವನು ಒಂದು ಮಹತ್ವದ ಧಾರ್ಮಿಕ ಪೀಠವನ್ನು ಸಹ ಅಲಂಕರಿಸಲು ಅರ್ಹತೆಯನ್ನು ಪಡೆದನು. ಈ ಸ್ಥಿತಿಯನ್ನು ಅವನು ಹೊಂದಲಿಕ್ಕೆ ಅವನಲ್ಲಿದ್ದ ವಿಶೇಷ ಪಾಂಡಿತ್ಯ ಮತ್ತು ಶಿವಾನುಭವದ ವರ್ತನೆ ಇವುಗಳೇ ಕಾರಣಗಳಾದವೆಂಬುದು ಸ್ಪಷ್ಟವಿದೆ.

ಶಿವಶರಣರ ಚರಿತ್ರೆಗಳು ಭಾಗ ೧ ರಿಂದ

---

ದುರ್ದೈವವೇ ಸರಿ. ವೀರಶೈವ ಸಮಾಜದಲ್ಲಿ ಆಗಿ ಹೋದ ಮಹಾ ಪುರುಷರ ಚರಿತ್ರೆಗಳನ್ನು ಅರಿಯದೇ ಇದ್ದುದ್ದರ ಪರಿಣಾಮವೇ ಇದಕ್ಕೆ ಕಾರಣವಲ್ಲದೆ ಬೇರೆ ಯಾವುದು? ಈ ವಿವರಗಳ ಬಗ್ಗೆ ಶಿವಾನುಭವ ಪತ್ರಿಕೆ ೧೨—೫—೪೩ ನೋಡಿರಿ.

# ಕಾಳವ್ವೆ

ಕಾಳವ್ವೆಯು ಉರಿಲಿಂಗಪೆದ್ದಿಯ ಹೆಂಡತಿಯು. ಉರಿಲಿಂಗಪೆದ್ದಿಯು ಮೊದಲು ಕಳವು ಮಾಡುತ್ತ ಜೀವಿಸುತ್ತಿದ್ದು ಮುಂದೆ ಉರಿಲಿಂಗದೇವನ ಮೇಲೆ ಭಕ್ತಿಯನ್ನು ತಾಳಿದವನಾಗಿ ಅವನಿಂದ ವೀರಶೈವ ದೀಕ್ಷೆಯನ್ನು ಹೊಂದಿದನು. ಮುಂದೆ ಅವನು ಮತಗ್ರಂಥಗಳನ್ನು ವ್ಯಾಸಂಗಮಾಡಿ ವಿದ್ವಾಂಸನಾಗಿ ಶ್ರೇಷ್ಠತರದ ವಚನಗಳನ್ನು ರಚಿಸಿ ಪ್ರಸಿದ್ಧನಾದನು. ಅವುಗಳಿಂದ ಅವನು ಸಂಸ್ಕೃತ ಗ್ರಂಥಗಳನ್ನು ಎಷ್ಟು ಆಳವಾಗಿ ವ್ಯಾಸಂಗ ಮಾಡಿದ್ದನೆಂಬುದು ತಿಳಿದುಬರುತ್ತದೆ. ಮುಂದೆ ಅವನು ತನ್ನ ಗುರುವಿನ ಪಟ್ಟಾಧ್ಯಕ್ಷ ಸ್ಥಾನವನ್ನು ಸಹ ಹೊಂದಿದನು. ಪುರಾತನ ಕಾಲದಲ್ಲಾದ ವಚನಕಾರರು ತಮ್ಮ ಪತ್ನಿಯರನ್ನು ತಮ್ಮಂತೆಯೇ ವಚನಕಾರರನ್ನಾಗಿ ಮಾಡಿದ್ದು ಕಂಡುಬರುತ್ತದೆ. ಬಸವೇಶ್ವರನು ತನ್ನ ಒಂದು ವಚನದಲ್ಲಿ "ಗಂಡ ಶಿವಲಿಂಗದೇವರ ಭಕ್ತ ಹೆಂಡತಿ ಮಾರಿಮಸಣೆಯ ಭಕ್ತೆ" ಎಂದೂ, ದೇವರದಾಸಿಮಯ್ಯನು ಸತಿಪತಿಗಳಲ್ಲೊಂದಾದ ಭಕ್ತಿ ಹಿತವಾಗಿಪ್ಪುದು ಎಂದು ಹೇಳಿದ್ದು ಈ ತತ್ವಕ್ಕನುಸರಿಸಿ ಅನೇಕ ವಚನಕಾರರು ತಮ್ಮ ಪತ್ನಿಯರನ್ನು ಶಿವಾನುಭವಿಗಳನ್ನಾಗಿ ಮಾಡಿದ್ದು ಕಂಡುಬರುತ್ತದೆ.

ಕಾಳವ್ವೆಯು ತನ್ನ ಪತಿಯು ಕಳವು ಮಾಡುತ್ತ ಗುಡ್ಡ ಬೆಟ್ಟಗಳಲ್ಲಿ ಅಲೆದಾಡುತ್ತಿರುವಾಗ ಅಲ್ಲಿಯ ಜನರು ತುಮರಿಯ ಕಟ್ಟಿಗೆಯನ್ನು ಉರಿಯುತ್ತ ದಾರಿ ನಡೆಯುತ್ತಿರುವದನ್ನು ಅವಳು ಕಂಡಿರಬಹುದು. ಆದುದರಿಂದ ಅವಳು ಕೆಳಗಿನ ವಚನದಲ್ಲಿ ಭಕ್ತರು ಸಿಟ್ಟಾಗಬಾರದೆಂದು ಹೇಳುವಲ್ಲಿ ತುಮರಿಯ ಕೊಳ್ಳಿಯ ಉದಾಹರಣೆಯನ್ನು ಕೊಟ್ಟಿದ್ದಾಳೆ. ಮುಂದೆ ತನ್ನ ಗಂಡನು ಶ್ರೇಷ್ಠ ಸ್ಥಾನವನ್ನು ಪಡೆದಿದ ಬಳಿಕ ಅವಳು ಅವನೊಡನೆ ಸಂಸ್ಕೃತದ ಅಭ್ಯಾಸವನ್ನು ಸಹ ಮಾಡಿದ್ದಾಳೆಂದು ಇದರಲ್ಲಿಯ ಸಂಸ್ಕೃತ ಅವತರಣದಿಂದ ತಿಳಿದುಬರುತ್ತದೆ. ಆ ವಚನವು ಯಾವುದೆಂದರೆ "ತುಮರಿಯ ಕೊಳ್ಳಿಯಂತೆ ಉರಿವಾತ ಭಕ್ತನೇ ? ಹುಸಿದು ತಂದು ಮಾಡುವಾತ ಭಕ್ತನೆ ?

ಭಕ್ತರ ಕುಲವನೆತ್ತಿ ನಿಂದಿಸುವಾತ ಭಕ್ತನೇ ? ಸಾಕ್ಷಿ :- "ಶಿವಭಕ್ತಂ ವಿನಂ ದ್ಯಾಶು ಕೋಟಿ ಜನ್ಮಸು ಸೂಕರ: । ಸಪ್ತ ಜನ್ಮಭವೇತ್ ಕ್ರೋಷ್ಟಾ ದಾಸೀಗರ್ಭೇತು ಜಾಯತೆ ॥೧ ಇಂತೆಂದುದಾಗಿ ತನ್ನ ಪ್ರಾಣದ ಮೇಲೆ ಬಂದರೂ ಬರಲಿ, ಇವರ ಬಿಡಬೇಕು ಇವರ ಬಿಡದಿರಲು ಉರಿಲಿಂಗಪೆದ್ದಿಗಳ ರಸನೊಲ್ಲನವ್ವಾ"

ವ್ರತಭ್ರಷ್ಟರನ್ನು ಕುರಿತು ಅವಳು ಹೇಳುವದೇನೆಂದರೆ :- 'ವ್ರತ ಹೋದಾಗಲೇ ಇಷ್ಟಲಿಂಗದ ಕಳೆ ನಷ್ಟವವ್ವ. ಅವರು ಲಿಂಗವಿದ್ದ ಭವಿಗಳು. ಅದು ಹೇಗೆಂದಡೆ ಪ್ರಾಣವಿಲ್ಲದ ದೇಹದಂತೆ. ಉರಿಲಿಂಗಪೆದ್ದಿಗಳರಸ ನಾಗಿ ಒಲ್ಲನವ್ವಾ'

ಅನಾಚಾರಿಗಳಾದ ಜಂಗಮರನ್ನು ತನ್ನ ವಚನದಲ್ಲಿ ಅವಳು ಚನ್ನಾಗಿ ಟೀಕಿಸಿದ್ದಾಳೆ. ಅವಳು ಹೇಳುವದೇನೆಂದರೆ-

'ಒಡೆಯರೆಂಬ ತುಡುಗುಣಿಗಳು ತಾವು ಪೂಜೆಗೊಂಬಲ್ಲಿ ಅವರ ಮನೆಗೆ ಹೂವು, ಹಣ್ಣು, ಕಾಯಿ, ಪತ್ರಿ ತಾ ಹೋಗುವ ಬರುವ ಊಳಿಗವ ಕೊಂಬಾತ ಭಕ್ತನಲ್ಲ. ಅಲ್ಲಿ ಪೂಜೆಗೊಂಬಾತ ಜಂಗಮನಲ್ಲ ಇವರಿಬ್ಬರು ನಾಯಕ ನರಕಕ್ಕೆ ಯೋಗ್ಯರಯ್ಯ. ಅವರ ಉರಿಲಿಂಗ ಪೆದ್ದಿಗಳರಸ ಬಲ್ಲನಾಗಿ ಒಲ್ಲನವ್ವಾ.

ನಮ್ಮಲ್ಲಿ ಆಕೆಯ ಆರು ವಚನಗಳು ಮಾತ್ರ ಉಪಲಬ್ಧವಿವೆ-ಅವೆಲ್ಲವು ಗಳ ಭಾಷೆ ಮತ್ತು ಆಕೆಯ ನಿರೂಪಣೆಯ ಪದ್ಧತಿ ಇವುಗಳಿಂದ ಸ್ತ್ರೀ ವಚನ ಕಾರರಲ್ಲಿ ಅವಳು ಶ್ರೇಷ್ಠ ತರಗತಿಯವಳಿದ್ದಾಳೆಂದು ನಾವು ಊಹಿಸಬಹುದಾ ಗಿದೆ ಅವು ಯಾವವೆಂದರೆ-

ವಚನಗಳು

ಅರ್ಥ, ಪ್ರಾಣ, ಅಭಿಮಾನದ ಮೇಲೆ ಬಂದರೂ ಬರಲಿ. ವ್ರತಹೀನನ ನೆರೆಯಲಾಗದು. ನೋಡಲು ನುಡಿಸಲಾಗದು, ಹರಹರ ! ಪಾಪ ವಶದಿಂದ

೧. ಸಂಸ್ಕೃತ ಶ್ಲೋಕವು ಅಶುದ್ಧವಿದೆ

ನೋಡಿವರೆ ರುದ್ರಜಪ, ಮಹೇಶ್ವರಾರಾಧನೆಯ ಮಾಳ್ಪುದು ಇಂತಲ್ಲದವರ ಉರಿಲಿಂಗಪೆದ್ದಿಗಳರಸ ನಕ್ಕು ಕಳೆವನವ್ವಾ.'

ಉಂಡ ಒಡೆಯರಲ್ಲಿ ಕೊಂಬ ಪ್ರಸಾದ ಕಾರಿದ ಕೂಳು. ಸಣ್ಣವರಲ್ಲಿ ಕೊಂಬ ಪ್ರಸಾದ ಸಂತೆಯ ಸೂಳೆಯ ಎಂಜಲು. ಅಳಿಯನಲ್ಲಿ ಕೊಂಡ ಪ್ರಸಾದ ಅಮೇಧ್ಯ ; ಮಕ್ಕಳಲ್ಲಿ ಕೊಂಡ ಪ್ರಸಾದ ಗೋಮಾಂಸ ತಮ್ಮನಲ್ಲಿ ಕೊಂಡ ಪ್ರಸಾದ ಸಿಂಗಿ ಕಾಳಕೂಟ. ನಂಟರಲ್ಲಿ ಕೊಂಡ ಪ್ರಸಾದ ನರಮಾಂಸ. ವಂದಿಸಿ ನಿಂದಿಸಿಕೊಂಬ ಪ್ರಸಾದವ ಉರಿಲಿಂಗಪೆದ್ದಿಗಳ ರಸನೊಲ್ಲನವ್ವಾ'

'ನಿಂದಿಸಿ ಕೊಂಬ ಪ್ರಸಾದ ಕುನ್ನಿಯ ಮಾಂಸ. ಅವರು ತ್ರಿವಿಧಕ್ಕೆ ಇಚ್ಛೈಸಲು ಅಲ್ಲಿ ನಿಂದಿಸಿ ಅವರ ಬಿಟ್ಟಲ್ಲಿ ಅವರು ಹಿಂದೆ ಕೊಂಡದು ಅವರ ಮಲಮೂತ್ರ, ಮುಂದೆ ಪುಳುಗೊಂಡವಯ್ಯ. ಉರಿಲಿಂಗಪೆದ್ದಿಗಳ ರಸನೊಲ್ಲನವ್ವಾ'

'ವ್ರತವೆಂಬುದು ನಾಯಕರತ್ನ.ವ್ರತವೆಂಬುದು ಸುಪ್ಪಾಣಿಯ ಮುತ್ತು. ವ್ರತವೆಂಬುದು ಜೀವದ ಕಳೆ ವ್ರತವೆಂಬುದು ಸುಯಿಧಾನ, ವ್ರತ ತಪ್ಪಲು ಉರಿಲಿಂಗ ಪೆದ್ದಿಗಳರಸನೊಲ್ಲನವ್ವಾ'

ಹೀಗೆ ಬಸವಾದಿ ಪ್ರಮಥರ ಶಿವಾನುಭವದ ವಿಚಾರಗಳು ಹಿಂದಿನ ಕಾಲದಲ್ಲಿ ಸ್ತ್ರೀಯರನ್ನೊಡಗೊಂಡು ಎಲ್ಲರನ್ನು ಉಚ್ಚ ಸ್ಥಿತಿಗೆ ತಂದಿರುತ್ತವೆ.

(ಶಿವಶರಣರ ಚರಿತ್ರೆಗಳು ಭಾಗ ೧ ರಿಂದ)

# ಕೊಟ್ಟಣದ ಸೋಮಮ್ಮೆ

ನಿರ್ಲಜ್ಜ ಶಾಂತಯ್ಯನ ನಿರಾಶಾವೃತ್ತಿಯು ಬಸವೇಶ್ವರನ ಕಾಲದಲ್ಲಿ ಬಹು ಜನರ ಮನಸ್ಸನ್ನು ಸೆಳೆದಿರುತ್ತದೆ. ಅವನು ಮಠಾಧಿಕಾರಿಯಾಗಿ ವೈಭವವನ್ನು ಅಪೇಕ್ಷಿಸದೆ ದಿಗಂಬರಿಯಾಗಿ ಶಿವಾನುಭವ ಮಂಟಪದಲ್ಲಿ ಶಿವಶರಣರಿಂದ ಮನ್ನಣೆಯನ್ನು ಹೊಂದಿ ವಚನ ಶಾಸ್ತ್ರವನ್ನು ಪ್ರಚಾರ ಮಾಡಿದನು. ಆದರಿಂದ ಅವನಿಗೆ ಬಹುಜನರು ಶಿಷ್ಯರಾದರು. ಇಂಥವ ರಲ್ಲಿ ಕೊಟ್ಟಣದ ಸೋಮಮ್ಮೆಯು ಒಬ್ಬಳಾಗಿದ್ದಾಳೆ.

ಸೋಮಮ್ಮೆಯು ಕಲ್ಯಾಣ ಪಟ್ಟಣದಲ್ಲಿ ಕೊಟ್ಟಣದ ಕಾಯಕವನ್ನು ಮಾಡುತ್ತ ಇದ್ದಳು. ಅವಳು ಬತ್ತವನ್ನು ಕುಟ್ಟಿ ಅಕ್ಕಿ ಮಾಡಿ ಕೂಲಿ ಯನ್ನು ಸಂಪಾದಿಸಿ ಅದರ ಮೇಲೆ ಉಪಜೀವಿಸುತ್ತ ದಾಸೋಹ ಕಾರ್ಯ ಗಳಲ್ಲಿ ನಿರತಳಾಗಿದ್ದಳು. ಅವಳು ವಚನಕಾರಳಿದ್ದಾಳೆ. ಅವಳು ನಿರ್ಲಜ್ಜ ಶಾಂತಯ್ಯನ ಮೇಲೆ ಭಕ್ತಿಯುಳ್ಳವಳಾದ್ದರಿಂದ "ನಿರ್ಲಜ್ಜೇಶ್ವರಾ" ಎಂಬ ಮುದ್ರಿಕೆಯನ್ನಿಟ್ಟುಕೊಂಡು ವಚನಗಳನ್ನು ರಚಿಸಿದ್ದಾಳೆ. ಅವಳ ಒಂದೇ ವಚನವು ನಮಗೆ ದೊರೆತಿದೆ. ಅದರಲ್ಲಿ ಅವಳು ತನ್ನ ಕಾಯಕದ ರೀತಿ ಯನ್ನು ಹೇಳಿಕೊಂಡಿದ್ದಾಳೆ.

ವ ಚ ನ

(೧) ಹದತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿ ಇಲ್ಲ ? ವ್ರತಹೀನನ ನೆರೆಯ ನರಕವಲ್ಲದೆ ಮುಕ್ತಿಯಿಲ್ಲ. ಅರಿದಾದರೂ ಹೋಗಲಿ. ಅರಿದು ಬೆರೆದೆ ನಾದರೆ ಕಣ್ಣಗತ್ತಿಯಲ್ಲಿ ಕಿವಿಯ ಕೊಯ್ವರಯ್ಯ. ಒಲ್ಲೆನಾಗಿ ಒಲ್ಲೆ ನಿಮ್ಮಾಣೆ ನಿರ್ಲಜ್ಜೇಶ್ವರಾ.

ಈ ಪ್ರಕಾರ ಅವಳು ಕೊಟ್ಟಣದ ಕಾಯಕವನ್ನು ಮಾಡುತ್ತ ಮೋಕ್ಷವನ್ನು ಹೊಂದಿದಳು.

(ಶಿವಶರಣೆಯರ ಚರಿತ್ರೆಗಳು ಗ್ರಂಥದಿಂದ)

# ಒಕ್ಕಲು ಮುದ್ದಯ್ಯ

ಕರ್ನಾಟಕದಲ್ಲಿ ಜೋಳದಹಾಳೆಂಬ ಪುರವಿದ್ದು ಅಲ್ಲಿ ಒಕ್ಕಲು ಮುದ್ದಯ್ಯನೆಂಬ ಒಕ್ಕಲಿಗನು ವಾಸಮಾಡುತ್ತಿದ್ದನು. ಅವನು ಒಕ್ಕಲುತವನನ್ನು ಮಾಡುತ್ತ ಹದಿನೆಂಟು ತರದ ದಾನ್ಯಗಳನ್ನು ಬೆಳೆದು ರಾಜ ಪಾಲೆಂದು ಕೊರನ್ನು ಮತ್ತು ಸುಂಕಸೇದಿಗೆಯನ್ನು ಸಹ ಅರಸನಿಗೆ ಕೊಟ್ಟು ಸುಖದಿಂದ ಇರುತ್ತಿದ್ದನು. ಆದರೆ ಅವನು ಗುರುಕಾರುಣ್ಯವುಳ್ಳವನಾಗಿದ್ದನು. ಆದ್ದರಿಂದ ಅವನು ಯಾವಾಗಲೂ ಈ ಚಿಂತೆಯಲ್ಲಿಯೇ ಮಗ್ನನಾಗಿರುತ್ತಿದ್ದನು.

ಹೀಗಿರುವಲ್ಲಿ ಅವನು ಒಂದು ದಿನ ಬತ್ತವನ್ನು ಬಿತ್ತುವದಕ್ಕೋಸ್ಕರ ನೆಲವನ್ನು ಹದಮಾಡಬೇಕೆಂದು ನೇಗಿಲೆಯನ್ನು ಹೊಡೆಯುವಾಗ ಅದರ ತುದಿಗೆ ಏನೋ ಒಂದು ತಟ್ಟಿಕೊಂಡು ನೇಗಿಲೆಯು ಮುಂದೆ ಹೋಗದಹಾಗಾಯಿತು, ನೆಲದೊಳಗಿದ್ದ ಒಂದು ಕೊರಡು ಅದಕ್ಕೆ ತಟ್ಟಿ ಹೀಗಾಗಿರಬೇಕೆಂದು ತಿಳಿದು ಮುದ್ದಯ್ಯನು ಅದನ್ನು ಕಡಿಯಬೇಕೆಂದು ಕೊಡಲಿಯನ್ನು ತೆಗೆದುಕೊಂಡು ಬಂದು, ಮಣ್ಣನ್ನು ತೆಗೆಯುವಾಗ ನೆಲದೊಳಗಿಂದ-ಮುದ್ದಯ್ಯ, ನಾನು ಜನರಿಗೆ ಮುಕ್ತಿಯನ್ನು ಕೊಡುವಂಥ ಅದಿನಾಥಲಿಂಗವು. ಕೊಡಲಿಯಿಂದ ನನ್ನನ್ನು ಕಡಿಯಬೇಡ. ಹಾರೆಯಿಂದ ಮೆಲ್ಲನೆ ಅಗಿದುಮಣ್ಣನು ಹೊರಗುಮಾಡು ಎಂಬ ಶಬ್ದಗಳು ಹೊರಟವು. ಮುದ್ದಯ್ಯನು ಆಶ್ಚರ್ಯಪಟ್ಟು, ಅವನು ಅದರಂತೆಯೇ ಹಾರೆಯಿಂದ ಮಣ್ಣನ್ನು ಸರಿಸಿ ನೋಡಲು ಒಳಗೆ ಒಂದು ಸ್ವಯಂಭುಲಿಂಗವಿದ್ದದ್ದನ್ನು ಕಂಡನು. ಅವನು ಅದನ್ನು ಹೊರಗೆತೆಗೆದು ಅಲ್ಲಿಯೇ ಅದನ್ನು ಬಹುಭಕ್ತಿಯಿಂದ ಸ್ಥಾಪಿಸಿ ಅದಕ್ಕೆ ಜೋಳದ ಅಂಬಲಿಯನ್ನೂ ತುಂಬಿಯ ಸೊಪ್ಪನ್ನೂ ಪಾಕಮಾಡಿ, ನೈವೇದ್ಯಮಾಡಿ, ಅದನ್ನು ಲಿಂಗದೆದುರಿಗೆ ಇಟ್ಟು ಉಣ್ಣಬೇಕೆಂದು ಲಿಂಗಕ್ಕೆ ಪ್ರಾರ್ಥಿಸಿ, ಆ ನೈವೇದ್ಯವನ್ನು ಅಲ್ಲಿಯೇ

ಮಡಗಿದನು. ಆಗ ಅವನು ಬಹಳ ದಣಿದದ್ದರಿಂದ ಅಲ್ಲಿ ಇದ್ದ ಎಕ್ಕೆಯ ಗಿಡದಡಿಯಲ್ಲಿ ವಿಶ್ರಮಿಸಲು ಕೂಡಲೆ ಅವನಿಗೆ ನಿದ್ರೆಹತ್ತಿತು. ಮುಂದೆ ಅವನು ಎಚ್ಚತ್ತು ನೋಡುತ್ತಾನೆ, ತನ್ನ ಮುಂದೆ ಗುರುರೂಪವನ್ನು ಧರಿಸಿದ ಜಂಗಮನೊಬ್ಬನನ್ನು ಕಂಡನು. ಅವನು ಅಲ್ಲಿದ್ದ ಕಕ್ಕಿಯ ಮರವನ್ನೇ ದೀಕ್ಷಾಮಂಟಪವಾಗಿಯೂ ಮರದ ಪುಷ್ಪಫಲಗಳನ್ನೇ ಪಂಚಕಳಶವಾಗಿಯೂ ಮಾಡಿ, ಮುದ್ದಯ್ಯನಿಗೆ ಅವನ ಅಪೇಕ್ಷೆಯಂತೆ ವೀರಶೈವ ದೀಕ್ಷೆಯನ್ನಿತ್ತು ಲಿಂಗಾಚಾರವನ್ನು ಬೋಧಿಸಿ ಆ ಆದಿನಾಥಲಿಂಗದಲ್ಲಿಯೇ ಐಕ್ಯನಾದನು. ಮುದ್ದಯ್ಯನು ಹೀಗೆ ಆದಿನಾಥಲಿಂಗದಿಂದ ದೀಕ್ಷೆಯನ್ನು ಹೊಂದಿ ತನ್ನ ಒಕ್ಕಲುತನದ ಕಾಯಕವನ್ನು ಮಾಡುತ್ತ ದಾಸೋಹಭಾವದಿಂದ ಇರಹತ್ತಿದನು.

ಹೀಗಿರುವಲ್ಲಿ ಒಂದು ದಿನ ರಾಜಸೇವಕರು ಮುದ್ದಯ್ಯನಲ್ಲಿಗೆ ಬಂದು ರಾಜನಿಗೆ ಕೊಡಬೇಕಾದ ತೆರಿಗೆಯನ್ನು ಬೇಡಲು ಅವನು ಅದನ್ನು ಕೊಟ್ಟನು. ಆಮೇಲೆ ಆ ಸೇವಕರು ಮತ್ತೆಯೂ ಬೇಡಹತ್ತಲು, ಅವನು ಕೊಡಲಿಲ್ಲಾದ್ದರಿಂದ ಸೇವಕರು ಅವನನ್ನು ತುಡುಕಿ ನಿರ್ಬಂಧಿಸಹತ್ತಿದರು. ಆವರೆ ಮುದ್ದಯ್ಯನು ಅವರಿಂದ ಬಿಡಿಸಿಕೊಂಡು ರಾಜನಸಭೆಗೆ ಓಡಿಬಂದು– ನಿನ್ನ ಸೇವಕರಿಗೆ ಮೂವತ್ತು ಕೊಳಗದ ಭೂಮಿಗೆ ಅರವತ್ತು ಹೊನ್ನು ಕೊಟ್ಟಿದ್ದೇನೆ. ಮತ್ತೆಯೂ ಅವರು ನನ್ನ ಕಡೆಯಿಂದ ಬೇಡುತ್ತಾರಲ್ಲಾ ಎಂದು ತಿಳಿಸಿದನು. ಅದಕ್ಕೆ ರಾಜನು ಉದಾಸೀನನಾಗಿರಲು, ಮುದ್ದಯ್ಯನು ಅಲ್ಲಿಂದ ಹೊರಟು ಬಂದು ತನ್ನ ಗ್ರಾಮದಲ್ಲಿದ್ದವರ ಮುಂದೆ ಇದನ್ನು ಇಟ್ಟು ಗುತ್ತಿಗೆಯ ಪ್ರಕಾರ ನಾನು ಕೊಡತಕ್ಕ ಪಟ್ಟಿಯನ್ನು ಕೊಟ್ಟಿದ್ದೇನೆ. ಅರಸನ ಅಪ್ಪಣೆಯನ್ನು ನಾನು ಮೀರಿಲ್ಲ–ಎಂದು ಅವರಿಂದ ಬರೆಯಿಸಿಕೊಂಡು ತನ್ನ ಮನೆಗೆ ಬಂದನು. ಅರಸನು ಮುಂದೆ ಹೆಚ್ಚಿನ ಪಟ್ಟಿಯನ್ನು ಊರಿನವರೆಲ್ಲ ಕೊಡಬೇಕೆಂದು ಅನ್ಯಾಯವಾಗಿ ಎಲ್ಲರ ಮೇಲೆ ಒತ್ತಾಯಮಾಡಹತ್ತಿದನು. ಆಗ ಮುದ್ದಯ್ಯನು ತನ್ನ ಲಿಂಗದೊಡನೆ ಹೇಳಿಕೊಂಡದ್ದೇನಂದರೆ–“ನಾನು ಮೂರಡಿ ಭೂಮಿಗೆ ಆರು ಹೊನ್ನಿನಂತೆ ಅರುವತ್ತು ಹೊನ್ನು ರಾಜನಿಗೆ ಕೊಟ್ಟೆನು. ಇದನ್ನು ಊರ

ವರ ಮುಂದೆ ಇಡಲು ಅವರು ರಾಜನ ಅಪ್ಪಣೆಯನ್ನು ನಾನು ಮೀರ ಲಿಲ್ಲವೆಂದು ಪಟ್ಟಿಯನ್ನು ಬರೆದುಕೊಟ್ಟಿದ್ದಾರೆ. ಆದರೆ ರಾಜನು ಈಗ ಊರಗೂಡಿ ಹೆಚ್ಚಿನದನ್ನು ಎಲ್ಲರಿಂದಲೂ ಬೇಡಹತ್ತಿದ್ದಾನೆ. ಎಲೆ ಲಿಂಗವೆ, ನಾನು ಅದನ್ನು ಕೊಡುವುದಿಲ್ಲ. ಅವನು ಈ ಹಡಿಕೆಯನ್ನು ಪುನಃ ಬೇಡಿ ದ್ದಾದರೆ ನಾನು ಸೆರೆ ಸಂಕೋಲೆಯ ವೇದನೆಯನ್ನು ಸಹಿಸಲು ಸಿದ್ಧನು. ಇನ್ನು ಮೇಲೆ ರಾಜನಿಗೆ ಹೆಚ್ಚಿಗೆ ಕೊಟ್ಟೆನಾದರೆ, ಪರಮಾತ್ಮನೇ, ನೀನು ನನ್ನ ಹಟ್ಟಿ ಕೊಟ್ಟಿಗೆಯ ಒಡೆಯನಾದ್ದರಿಂದ ನಿನ್ನಾಣೆ. ನಾನು ಕೊಡ ತಕ್ಕ ತೆರಿಗೆಯನ್ನು ಮಾತ್ರ ಅವನಿಗೆ ಕೊಡುವೆನು. ಹೀಗೆ ಕೊಟ್ಟು ನನಗೆ ಉಳಿದ ಧನಧಾನ್ಯದಲ್ಲಿ ದಾಸೋಹಮಾಡುತ್ತೇನೆ. ಹೀಗೆ ನಾನು ದಾಸೋ ಹವನ್ನು ಮಾಡುವಂತೆ ವರವನ್ನು ನಿನ್ನಲ್ಲಿ ನಾನು ಬೇಡಿಕೊಳ್ಳುತ್ತೇನೆ. ನನಗೆ ಬೇರೊಂದು ವರವು ಬೇಡಾ, ನಿನ್ನಗೋಸ್ಕರ ಭಕ್ತಿಯಿಂದಿರುವದೇ ನಾನು ಬೇಡುವ ವರವು. ನನ್ನ ಮನವೆಂಬ ಧನವನ್ನು ನಿನಗೆ ಸಲ್ಲಿಸುತ್ತೇನೆಯೇ ಹೊರತು ಇನ್ನೊಬ್ಬರಿಗೆ ಅದನ್ನು ಸಲ್ಲಿಸಲಾರೆನು" ಎಂದು ತನ್ನ ಇಷ್ಟ ಲಿಂಗದಲ್ಲಿ ಭಾಷೆಯನ್ನು ಬಿನ್ನೈಸಿಕೊಂಡನು. ಈ ರೀತಿಯಾಗಿ ಅವನು ಮುಂದೆ ಆಚರಿಸುತ್ತ ಲಿಂಗಾಂಗ ಸಾಮರಸ್ಯವನ್ನು ಹೊಂದಿದನು.

ಈ ಪ್ರಕಾರ ಒಕ್ಕಲುಮುದ್ದಯ್ಯನು ತನ್ನ ಒಕ್ಕಲುತನ ಕಾಯಕ ವನ್ನು ಮಾಡುತ್ತ ತನಗೆ ದೊರಕಿದ್ದರಲ್ಲಿ ಅರಸನಿಗೆ ಕೊಡತಕ್ಕದ್ದನ್ನು ಕೊಟ್ಟು ಅದರಲ್ಲಿ ನ್ಯಾಯವಾದ ರೀತಿಯಿಂದಲೇ ಉಳಿಸಿಕೊಂಡು, ಹೀಗೆ ಉಳಿದುದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುತ್ತ ತನ್ನ ಇಷ್ಟ ಲಿಂಗದಲ್ಲಿ ಬೆರೆತಿದ್ದಾನೆ. ಇದು ಮುದ್ದಯ್ಯನ ಒಂದು ಹೊಸರೀತಿಯ ಕಾಯಕದ ಮತ್ತು ದಾಸೋಹದ ಬಗೆಯು ಇರುತ್ತದೆ.

ಒಕ್ಕಲು ಮುದ್ದಯನು ವಚನಕಾರನು. ಅವನ ಕೆಲವು ವಚನಗಳನ್ನು ನಾವು ಕೆಳಗೆ ಉದಾಹರಿಸುತ್ತೇವೆ. ಅವನ ಮುದ್ರಿಕೆಯು "ಕಾಮಭೀಮ ಜೀವಧನದೊಡೆಯ" ಎಂದಿದೆ. ಪರಮಾತ್ಮನು ಪ್ರಿಯಕರನೂ ಬಲಶಾ ಲಿಯೂ ಆಗಿದ್ದು ಅವನು ಜಗತ್ತಿನಲ್ಲಿರುವ ಜೀವಿಗಳಿಗೆ ಮತ್ತು ಧನಗ ಳಿಗೆ ಒಡೆಯ ಎಂಬ ಭಾವವು ಈ ಮುದ್ರಿಕೆಯಲ್ಲಿದೆ. ವಚನಕಾರರ

ಮುದ್ರಿಕೆಗಳಲ್ಲಿ ಇದು ತೀರ ಹೊಸತರದ್ದು. ಅಲ್ಲದೆ ಅವನ ಕಾಯಕದ ಮತ್ತು ದಾಸೋಹದ ರೀತಿಯು ನಮ್ಮ ಆಧುನಿಕರು ವಿಚಾರಮಾಡು ವಂತಹದಿದೆ.

## ವಚನಗಳು

(೧) ಅಂಗವೇ ಭೂಮಿಯಾಗಿ, ಲಿಂಗವೇ ಬೆಳೆಯಾಗಿ, ವಿಶ್ವಾಸ ವೆಂಬ ಬಿತ್ತ ಬೆಳೆದು ಉಂಡು ಸುಖಿಯಾಗಿರಬೇಕೆಂದ ಕಾಮ ಭೀಮ ಜೀವ ದನದೊಡೆಯಂ.

(೨) ವೇದಶಾಸ್ತ್ರವನೋದುವದಕ್ಕೆ ಹಾರುವನಲ್ಲ. ಇರಿದು ಮೆರೆವು ದಕ್ಕೆ ಕ್ಷತ್ರಿಯನಲ್ಲ. ವ್ಯವಹರಿಸುವದಕ್ಕೆ ವೈಶ್ಯನಲ್ಲ. ಉಳುವ ಒಕ್ಕಲುಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯ ಕಾಮ ಭೀಮ ಜೀವದನದೊಡೆಯ.

(೩) ಅರುಣನ ಕಿರಣದಿಂದ ಅಪ್ಪುವಿನ ಸಾರ ಪೃಥ್ವಿಯೊಳಗಡೆ ಯಿದ್ದು ಪೃಥ್ವಿಯ ತಪ್ಪಿಸಿ ತಾನೊಪ್ಪದಲ್ಲಿ ತೆಗೆವಂತೆ ಅರಿವು ಮರನೆ ಪೃಥ್ವಿಯಪ್ಪುವಿನಂತೆ ಇಪ್ಪ ಭೇದವ ತಾನರಿದು ಜಡ ಅಜಡವೆಂಬುಭಯ ವನರಿವುದು ಸಕಲವೋ ? ನಿಃಕಲವೋ ? ಬೇರೋದು ಪೇಲಬೋ ? ಇದರ ಹೊಲಬು ನೀನೇ ಬಲ್ಲೆ; ಕಾಮ ಭೀಮ ಜೀವದನದೊಡೆಯ ನಾನೆಂದೂ ಅರಿಯೆ-

(೪) ಆವ ವರ್ಣವ ಕೂಡಿದಡೂ ಅಪ್ಪುವಿಯ ತಪ್ಪಿದಂತೆ ಸರ್ವ ಗುಣ ಸಂಪನ್ನನಾದಲ್ಲಿ ಭಕ್ತನೆಂದಡೂ ತಾನಾಗಿ, ಮಹೇಶ್ವರನೆಂದಡೂ ತಾನಾಗಿ, ಪ್ರಸಾದಿ ಎಂದಡೂ ತಾನಾಗಿ, ಪ್ರಾಣಲಿಂಗಿ ಎಂದಡೂ ತಾನಾಗಿ, ಶರಣನೆಂದಡೂ ತಾನಾಗಿ, ಐಕ್ಯನೆಂದಡೂ ತಾನಾಗಿ, ಬಂದನಹುದು ಬಂದ ನಲ್ಲ ಎನ್ನದೆ, ಕತ್ತಲೆಯಲ್ಲಿ ಹಾಲ ಕೊಂಡಡೆ ಸಿಹಿ ತಪ್ಪುವುದೇ ? ಸತ್ತು ಚಿತ್ತಾನಂದವೆಂಬ ಗೊತ್ತು, ಹರಿದವಂಗೆ ತಟ್ಟು ಮುಟ್ಟು ಹತ್ತುವ ಭಾವ ಒಂದೂ ಇಲ್ಲ. ಕಾಮಭೀಮಜೀವದನದೊಡೆಯ ತಾನು ತಾನೇ.

(೫) ಪೈರಿಗೆ ನೀರು ಬೇಕೆಂಬಲ್ಲಿ ಉಚಿತವನರಿದು ಬಿಡಬೇಕು. ಕ್ರಿಗರಿವು ಬೇಕೆಂಬಲ್ಲಿ ಉಭಯವನರಿದು ಘಟಿಸಬೇಕು. ಏರಿ ಹಿಡಿವನ್ನಕ್ಕ ನೀರ ಹಿಡಿದಡೆ ಸುಖವಲ್ಲದೆ ಮೀರಿದರುಂಟೇ ? ಕ್ರಿಯೆ ಬಿಡಲಿಲ್ಲ. ಅರಿವ ಮರೆಯಲಿಲ್ಲ. ಬೆಳೆಯು ಕಾಯ್ದು ಮತ್ತೆ ಹೊಲಕ್ಕೆ ಕಾವಲುಂಟೆ ? ಪವನ ಹೊತ್ತ ಬೆಳೆಯಂತೆ, ಬೆಳೆಯನೊಳಕೊಂಡ ಫಲದಂತೆ, ಅರಿವು ಆಚರಣೆ ಯಲ್ಲಿ ನಿಂದು, ಆಚರಣೆ ಅರಿವಿನಲ್ಲಿ ಲೋಪವಾದ ಮತ್ತೆ ಕಾಮಭೀಮ ಜೀವದನದೊಡೆಯ ನೆಂಬುದ ಭಾವಿಸಲಿಲ್ಲ.

ಮೇಲಿನ ವಚನಗಳಲ್ಲಿ ಒಕ್ಕಲು ಮುದ್ದಯ್ಯನು ಒಕ್ಕಲುತನ ಮಾಡುವ ರೀತಿಗಳನ್ನು ವಿವರಿಸುತ್ತ ಅವುಗಳ ಮೂಲಕ ಉಚ್ಚತರದ ಪಾರಮಾರ್ಥಿಕ ವಿಚಾರಗಳನ್ನು ಹೇಗೆ ನಿರೂಪಿಸಿದ್ದಾನೆಂಬುದನ್ನು ವಾಚಕರು ಅವಶ್ಯವಾಗಿ ಲಕ್ಷಿಸಬೇಕು. ಕೆಳಗೆ ಕಾಣಿಸಿದ ವಚನದಲ್ಲಿ ಅವನು ತನ್ನ ಅರಸನೊಡನೆ ಉಂಟಾದ ವಿರೋಧವನ್ನು ಕುರಿತು ಹೇಳುತ್ತಾನೆ.

(೬) ಅಯ್ಯಾ ಮೂರಡಿ ಮಣ್ಣಿಂಗೆ ಆರು ಹೊನ್ನ ತೆತ್ತೆ. ಮೀರಿ ಹಡಿಕೆಯ ಬೇಡೆ, ಗ್ರಾಮದವರ ಮುಂದಿಟ್ಟು ಮೀರಲಿಲ್ಲ ಎಂದು ಪಟ್ಟೆಯ ಕೊಟ್ಟು, ಮತ್ತೂರಗೂಡಿ ಹಡಿಕೆಯ ನೀ ಬೇಡಿದೊಡೆ ನಾ ಕೊಡಲಿಲ್ಲ. ನೀಕೊಟ್ಟ ಪಟ್ಟೆ ನಮ್ಮ ನಟ್ಟನಡುಮನೆಯ ನೆಲನಲ್ಲಿ ಕಟ್ಟಿಯಿದೆ ಕೋ. ನೀತಪ್ಪಿದೊಡೆ ನಿನಗೆ ಹೇಳುವ ಒಡೆಯರುಂಟೆ ? ನಾನೊಕ್ಕಲು, ನೀನೊ ಡೆಯ. ಮೀರಿಕೊಂಡಿಹೆನೆಂದರೆಮುನ್ನವೇ ಸೆರೆ ಸಂಕೋಲೆಗೊಳಗು, ಗುತ್ತಿಗೆ ಗಾರಂಗೆ ಮತ್ತೆ ಕುಳವುಂಟೆ? ಇನ್ನು ಕೊಟ್ಟೆನಾದರೆ ಎನ್ನ ಹಟ್ಟಿ ಕೊಟ್ಟಿಗೆಗೊಡೆಯ ಕಾಮಭೀಮಜೀವದನದಾಣೆ.

ಭಾವ :- ಈ ವಚನವನು ಒಕ್ಕಲುಮುದ್ದಯ್ಯನು ತನ್ನ ರಾಜನಿಗೆ ಉದ್ದೇಶಿಸಿ ಹೇಳುತ್ತಾನೆ. ಅವನು ಹೇಳುವದೇನಂದರೆ :- ನನ್ನ ಭೂಮಿಂ ಗೋಸ್ಕರ ಮೂರಡಿಗೆ ಆರು ಹೊನ್ನಿನಂತೆ ರಾಜನಿಗೆ ಕಂದಾಯವನ್ನು ಕೊಟ್ಟಿದ್ದೇನೆ. ಕೊಟ್ಟರೂ ಹೆಚ್ಚಿಗೆ ಅವನು ಕೊಡಬೇಕೆಂದು ಬೇಡುತ್ತಾ ಇದ್ದಾನೆ. ಇಂಥ ಹಡಿಕೆಯ ಹಣವನ್ನು ಕೊಡುವ ವಿಷಯವನ್ನು ಗ್ರಾಮ

ದವರ ಮುಂದಿಡಲು, ಅವರು ನಾ ಕೊಟ್ಟ ಕಂದಾಯವು ಸರಿಯಾದದ್ದು, ಅರಸನ ಅಪ್ಪಣೆಯನ್ನು ನಾನು ಮೀರಲಿಲ್ಲ ಎಂದು ಬರಹವನ್ನು ನನಗೆ ಕೊಟ್ಟಿದ್ದಾರೆ. ಆದರೂ ರಾಜನು ಊರವರನ್ನೊಳಗೊಂಡು ಪುನಃ ನನ್ನಿಂದ ಹಡಿಕೆಯನ್ನು ಬೇಡುತ್ತಾನೆ. ಅದನ್ನು ನಾನು ಕೊಡಲಿಲ್ಲ. ಅರಸನು ಕೊಟ್ಟಂಥ ಪಟ್ಟಿಯು ನನ್ನ ಮನೆಯಲ್ಲಿದೆ. ಆದರೂ ಅವನು ಹೆಚ್ಚಿಗೆ ಬೇಡಿದರೆ ಅವನಿಗೆ ತಿಳಿಸಿಹೇಳುವ ಒಡೆಯರಾರು ? ಯಾಕೆಂದರೆ ನಾನು ಒಕ್ಕಲು ಆಗಿದ್ದೇನೆ. ಮತ್ತು ಅವನು ನನ್ನ ಒಡೆಯನು. ಆದರೂ ಅವನು ಮೀರಿ ಕಂದಾಯವನ್ನು ತೆಗೆದುಕೊಳ್ಳುವೆನೆಂದರೆ, ನಾನು ಅವನ ಸೆರೆ ಸಂಕೋಲೆಯ ಬಂಧನವನ್ನು ಹೊಂದಲು ಸಿದ್ಧನಿದ್ದೇನೆ. ಆದರೆ ಇದ ರಿಂದ ಗುತ್ತಿಗೆಗಾರರಿಗೆ ಕುಳಗಳು ಉಳಿಯಲಾರವು. ರಾಜನೇ, ನಾನು ನಿನಗೆ ಈ ಹೆಚ್ಚಿನ ಕಂದಾಯವನ್ನು ಕೊಟ್ಟೆನಾದರೆ, ನನ್ನ ಹಟ್ಟಿ ಕೊಟ್ಟಿಗೆಗೆ ನಿಜವಾದ ಒಡೆಯನಾದ ಪರಮಾತ್ಮನ ಆಣೆ ಎಂದು ಹೇಳು ತ್ತಾನೆ. ಅಂದರೆ ತನ್ನ ಹಟ್ಟಿ ಕೊಟ್ಟಿಗೆಯ ಒಡೆಯನು ರಾಜನಲ್ಲ, ಆದರೆ ಪರಮಾತ್ಮನು ಎಂಬ ಭಾವವನ್ನು ಇಟ್ಟುಕೊಂಡು ವಚನಕಾರನು ಈ ವಚನವನ್ನು ಪ್ರತಿಜ್ಞಾಪೂರ್ವಕವಾಗಿ ನುಡಿದಿದ್ದಾನೆ.

ಈ ಕಡೆಯ ಆರನೆಯ ವಚನದಿಂದ ಮುದ್ದಯ್ಯನಿದ್ದ ಕಾಲದಲ್ಲಿ ರಾಜರು ಕಂದಾಯವನ್ನು ಹೇಗೆ ವಸೂಲು ಮಾಡುತ್ತಿದ್ದರೆಂಬುದು ಕೆಲಮ ಟ್ಟಿಗೆ ತಿಳಿದುಬರುತ್ತದೆ. ಆವರು ಪ್ರತಿಯೊಬ್ಬ ಒಕ್ಕಲಿಗನು ಕಂದಾಯ ವನ್ನು ಎಷ್ಟು ಕೊಡಬೇಕೆಂಬುದನ್ನು ಈಗಿನಂತೆ ನಿರ್ಧರಿಸದೆ ಗ್ರಾಮದವ ರೆಲ್ಲರೂ ಕೂಡಿ ಒಟ್ಟಾಗಿ ಎಷ್ಟು ಕೊಡಬೇಕೆಂಬುದನ್ನು ಅವರು ಗೊತ್ತು ಪಡಿಸಿ ಅವನ್ನು ವಸೂಲುಮಾಡಲಿಕ್ಕೆ ಗುತ್ತಿಗೆಗಾರರನ್ನು ನೇಮಿಸುತ್ತಿದ್ದಂತೆ ತೋರುತ್ತದೆ. ಈ ಗುತ್ತಿಗೆಗಾರರು ಹಳ್ಳಿಯ ಪಂಚರ ಸಹಾಯದಿಂದ ಕಂದಾಯವನ್ನು ವಸೂಲುಮಾಡಿ ರಾಜರಿಗೆ ಅದನ್ನು ಕಳಿಸಿ ಕೊಡುವರು. ಅವರು ಈ ಕಂದಾಯವಲ್ಲದೆ ಅನ್ಯಾಯವಾಗಿ ಹೆಚ್ಚಿಗೆ ಹಣವನ್ನು ತಮ್ಮ

ಗೋಸ್ಕರ ಎತ್ತುತ್ತಿದ್ದುದನ್ನು ಈ ವಚನದಲ್ಲಿ ಹೇಳಿದೆ. ಹೀಗೆ ಅವರು ಎತ್ತುವುದನ್ನು ಒಕ್ಕಲು ಮುದ್ದಯ್ಯನು ವಿರೋಧಿಸಿದ್ದಾನೆ. ಅವನು ವಿರೋಧಿಸುವ ಪೂರ್ವದಲ್ಲಿ ನ್ಯಾಯವಾಗಿ ತಾನೆಷ್ಟು ರಾಜನಿಗೆ ಕೊಡಬೇಕೆಂಬುದನ್ನು ಊರವರಿಗೆ ರಾಜನು ಕೊಟ್ಟ ಪಟ್ಟಿಯ ಮೂಲಕ ಮೊದಲು ಗೊತ್ತುಪಡಿಸಿಕೊಳ್ಳುತ್ತಾನೆ. ಇದರಿಂದ ರಾಜರು ಊರವರು ಕೊಡತಕ್ಕ ಕಂದಾಯದ ವಿಷಯವಾಗಿ ಕೆಲವೊಂದು ಬರಹವನ್ನು ತಯಾರಿಸುತ್ತಿದ್ದು ಇದಕ್ಕೆ 'ಪಟ್ಟಿ' ಎಂಬ ಹೆಸರಿದ್ದ ಹಾಗೆ ತೋರುತ್ತದೆ. ಗುತ್ತಿಗೆಗಾರನು ಇದರಲ್ಲಿ ನಿರ್ದೇಶವಾದದಕ್ಕಿಂತಲೂ ಹೆಚ್ಚು ಹಣ ಬೇಡಲು ಮುದ್ದಯ್ಯನು ಮೊದಲು ಅರಸನನ್ನು ಕಂಡು ಅವನಿಗೆ ಆ ವಿಷಯವಾಗಿ ದೂರು ಹೇಳಿದ್ದಾನೆ. ಆದರೆ ಅರಸನು ಅದನ್ನು ಅಲಕ್ಷಿಸಿದ ಹಾಗೆ ತೋರುತ್ತದೆ. ಆಮೇಲೆ ಮುದ್ದಯ್ಯನು ಅರಸನ ಅನ್ಯಾಯವನ್ನು ಊರವರ ಮುಂದೆ ಇಡಲು ಅವರು ಅವನನ್ನು ಸಮರ್ಥಿಸಿದ್ದಾರೆ. ಇದರ ತರುವಾಯ ಅರಸನು ಹೆಚ್ಚಿನ ಹಣವನ್ನು ಅನ್ಯಾಯವಾಗಿ ಊರಿನ ಎಲ್ಲ ಜನರಿಂದ ಬೇಡಿದ ಹಾಗೆ ಈ ವಚನದಲ್ಲಿ ಹೇಳಿದೆ ಆಗ ಒಕ್ಕಲು ಮುದ್ದಯ್ಯನು ಅದನ್ನು ತಾನು ಕೊಡುವದಿಲ್ಲೆಂದು ಇಲ್ಲಿ ಪ್ರತಿಜ್ಞೆ ಮಾಡಿದ್ದಾನೆ. ಅವನು ಹೀಗೆ ಕಂದಾಯವನ್ನು ಕೊಡದಿದ್ದರ ಪರಿಣಾಮವೇನಾಯಿತೆಂಬುದು ಮಾತ್ರ ಈ ವಚನದಲ್ಲಾಗಲಿ ಇಲ್ಲವೆ ಅವನ ಚರಿತ್ರೆಯಲ್ಲಾಗಲಿ ಹೇಳಿಲ್ಲ. ಅವನು ತನ್ನ ಪ್ರತಿಜ್ಞೆಯನ್ನು ನಡೆಸಿದಂತೆ ತೋರುತ್ತದೆ. ಹೀಗೆ ತನ್ನ ಒಕ್ಕಲು ತನ ಕಾಯಕವನ್ನು ನಡಿಸುತ್ತ ಮುದ್ದಯ್ಯನು ತನ್ನ ಇಷ್ಟಲಿಂಗದಲ್ಲಿ ಐಕ್ಯವಾದನೆಂದು ಈ ವಚನದಿಂದ ತಿಳಿದುಬರುತ್ತದೆ.

ಕಾಯಕಮಾಡುವಲ್ಲಿ ಶರಣನು ನ್ಯಾಯವಾದದ್ದಕ್ಕೋಸ್ಕರ ಮಾತ್ರ ಹಣವನ್ನು ವೆಚ್ಚಮಾಡತಕ್ಕದ್ದು, ಅನ್ಯಾಯವಾದದ್ದಕ್ಕೋಸ್ಕರ ವೆಚ್ಚಮಾಡಬಾರದೆಂಬ ಭಾವವು ಇದರಲ್ಲಿದೆ. ಹೀಗೆ ಮಾಡುವಲ್ಲಿ ಏನಾದರೂ ಹಣ ಉಳಿದರೆ ಅದನ್ನು ಅವನು ದಾಸೋಹಕ್ಕೆ ಅಂದರೆ ಗುರುಲಿಂಗ ಜಂಗಮಕ್ಕೋಸ್ಕರ ಮತ್ತು ತಾನು ಮಾಡತಕ್ಕ ಸತ್ಕಾರ್ಯಗಳಿಗೋಸ್ಕರ ವಿನಿಯೋಗಿಸತಕ್ಕದ್ದು. ಇದು ಶಿವಶರಣರ ನಡೆಯಾಗಿರುತ್ತದೆ. ಈ ತತ್ವಗಳು ಒಕ್ಕಲು ಮುದ್ದಯ್ಯನ ಚರಿತ್ರೆಯಲ್ಲಿ ಅಡಕವಾಗಿರುತ್ತವೆ.

ಪಿಟ್ಟವ್ವೆಯಾದರೂ ಒಕ್ಕಲು ಮುದ್ದಯ್ಯನಂತೆ ಅರಸನ ಅನ್ಯಾಯದ ಕಾರ್ಯಗಳನ್ನು ವಿರೋಧಿಸಿದ್ದಾಳೆ. ಅವಳು ಹೀಗೆ ವಿರೋಧಮಾಡುತ್ತಿರವಲ್ಲಿ ಕಡೆಗೆ ಅವಳಿಗೆ ಜಯವು ಪ್ರಾಪ್ತವಾಗಿರುತ್ತದೆ. ಕಡೆಗೆ ಒಬ್ಬ ಬಲಾಢ್ಯರಾಜನು ಸಹ ಅವಳಿಗೆ ಸನ್ಮಾನಮಾಡುವ ಪ್ರಸಂಗವು ಬಂದಿತು.

ಶಿವಶರಣರು ಬಹುತರವಾಗಿ ಬಡವರು. ಅವರು ತಮ್ಮ ಶಿವಾನುಭವದಂತೆ ನಡೆಯುವಲ್ಲಿ ಉಚ್ಚ ವರ್ಗದವರ ಹಗೆತನಕ್ಕೆ ಗುರಿಯಾಗುವ ಪ್ರಸಂಗಗಳು ಅವರಿಗೆ ಆಗಿಂದಾಗ್ಗೆ ಬರುತ್ತಿದ್ದವು. ಅರಸರ ಬಲಾತ್ಕಾರಗಳನ್ನು ಸಹ ವಿರೋಧಿಸುವ ಪ್ರಸಂಗಗಳು ಅವರಿಗೆ ಬಂದಿವೆ. ಆಗ ಅವರು ಹೇಗೆ ನಡೆದರೆಂಬುದನ್ನು ಒಕ್ಕಲುಮುದ್ದಯ್ಯ ಮತ್ತು ಪಿಟ್ಟವ್ವೆ ಇವರ ಚರಿತ್ರೆಗಳಿಂದ ನಾವು ಚೆನ್ನಾಗಿ ಅರಿತುಕೊಳ್ಳಬಹುದಾಗಿದೆ.

ಕೆಲವು ಚರಿತ್ರೆಗಳಲ್ಲಿ ಒಕ್ಕಲು ಮುದ್ದಯ್ಯ ಎಂಬ ಹೆಸರಿನ ಬದಲಾಗಿ ಒಕ್ಕಲು ಮುಗ್ಧಯ್ಯನೆಂಬ ಹೆಸರು ಬಂದಿರುತ್ತದೆ. ಆದರೆ ಅವನು ಮುಗ್ಧನಾಗಿರದೆ ಜ್ಞಾನಿಯೂ ಶಿವಾನುಭವಿಯೂ ಆಗಿ ಲೌಕಿಕ ವ್ಯವಹಾರದಲ್ಲಿ ಜಾಣನಾಗಿದ್ದನೆಂದು ಅವನ ವಚನಗಳಿಂದ ತಿಳಿದುಬರುತ್ತದೆ. ಆದ್ದರಿಂದ ಒಕ್ಕಲು ಮುದ್ದಯ್ಯನೆಂಬ ಹೆಸರೇ ನಿಜವಾದುದೆಂದು ನಮಗೆ ತೋರುತ್ತದೆ.

ಶಿವಶರಣರ ಚರಿತ್ರೆಗಳು ಭಾಗ ೨ ರಿಂದ

# ಮಾದರ ಧೂಳಯ್ಯ

ಬಸವೇಶ್ವರನ ಕಾಲದಲ್ಲಿ ಶಿವಾನುಭವದ ತತ್ವಗಳು ಪ್ರಸಾರವಾಗುತ್ತ ಹೋದಹಾಗೆ ಅಸ್ಪೃಶ್ಯರಲ್ಲನೇಕರು ಮಹತ್ವಿಕರೂ ವಚನಕಾರರೂ ಆಗಿದ್ದಾರೆ. ಅವರಲ್ಲಿ ಮಾದರ ಧೂಳಯ್ಯನು ಒಬ್ಬನಾಗಿದ್ದಾನೆ. ಅವನು ಮಾದರ ಕುಲದಲ್ಲಿ ಹುಟ್ಟಿ ಕಲ್ಯಾಣ ಪಟ್ಟಣದಲ್ಲಿ ಮೋಚ್ಚೆ ಹೊಲೆಯುವ ಕಾಯಕವನ್ನು ಮಾಡುತ್ತಿದ್ದನು. ಅವನು ಈ ಕಾಯಕದಿಂದ ತನಗೆ ದೊರಕಿದಷ್ಟು ಹಣವನ್ನು ಶರಣರ ಸೇವೆಗೆ ಸಲ್ಲಿಸುತ್ತ ದಾಸೋಹ ಭಾವದಿಂದಿರುತ್ತಿದ್ದನು. ಅವನು ತನ್ನ ಒಂದು ವಚನದಲ್ಲಿ ತನ್ನ ಈ ಕಾಯಕದ ರೀತಿಯನ್ನು ಹೇಳಿರುವದು ಹೇಗೆಂದರೆ—

"ಅರಿದು ಚುಚ್ಚುವರೆಲ್ಲರು ಧನದಟ್ಟೆ. ಮರೆದು ಚುಚ್ಚುವರೆಲ್ಲರು ಧನದಟ್ಟೆ. ನಾ ಚುಚ್ಚುವದೆಲ್ಲವು ಸತ್ತ ಜೀವ ದನದಟ್ಟೆ. ಅಟ್ಟೆಯ ಕೊಯಿದು ಮೆಟ್ಟಿಸಿದೆ ಸತ್ಯರಿಗೆಲ್ಲರಿಗಂ, ಎನಗೆ ಬಟ್ಟ ಬಯಲು ತೋರಬೇಕೆಂದು. ನಿಮ್ಮ ಬಟ್ಟೆಯಲ್ಲಿ ನೀವೇ ಹೋಗಿ. ಎನ್ನ ಬಟ್ಟೆ— ಕಾಮಧೂಮಧೂಳೇಶ್ವರನ ಬಟ್ಟೆಯೇ ಸಾಕು."

ಭಾವ– ಜ್ಞಾನಿಗಳು ಮತ್ತು ಅಜ್ಞಾನಿಗಳು ದನದ ತೊಗಲಿನಿಂದ ಮೋಚ್ಚೆಯನ್ನು ಮಾಡುತ್ತಾರೆ. ಆದರೆ ನಾನು ಸಂಸಾರದಿಂದ ದೂರಾದ ಜೀವವೆಂಬ ತೊಗಲಿನಿಂದ ಜೋಡನ್ನು ಸಿದ್ಧಪಡಿಸುತ್ತೇನೆ. ಇಂಥ ಜೋಡನ್ನು ನಾನು ಸಿದ್ಧಪಡಿಸಿ ಅದನ್ನು ಸತ್ಯರು ಮೆಟ್ಟಿಕೊಳ್ಳಲು ಅವರಿಗೆ ಕೊಡುತ್ತೇನೆ. ಹೀಗೆ ನಾನು ಮಾಡಿದಲ್ಲಿ ಬಟ್ಟಬಯಲು ಅಂದರೆ ಪರಮಾತ್ಮನು ನನಗೆ ದೊರಕುವನು. ಆದರೆ ಜನರು ತಮ್ಮ ಇಚ್ಛಾನುಸಾರ ತಮ್ಮ ತಮ್ಮ ಬಟ್ಟೆಯಲ್ಲಿ ಹೋಗುತ್ತಾರೆ. ಆದರೆ ನಾನು ಅವರ ಬಟ್ಟೆಯಲ್ಲಿ ಹೋಗದೆ ಪರಮಾತ್ಮನ ಬಟ್ಟೆಯಲ್ಲಿ ಹೋದರೆ ಸಾಕು ಎಂದು ಈ ವಚನದಲ್ಲಿ ನುಡಿದಿದ್ದಾನೆ.

ಹೀಗೆ ಧೂಳಯ್ಯನು ತನ್ನ ಕಾಯಕವನ್ನು ಮಾಡುತ್ತಿರಲು ಪರಮಾತ್ಮನು ಅವನ ಕಾಯಕಕ್ಕೆ ಮೆಚ್ಚಿ ಅವನಿಗೆ ಪ್ರತ್ಯಕ್ಷವಾಗಿ ನೀನು ಕೈಲಾಸಕ್ಕೆ ಬಂದು ನನ್ನ ಸಮೀಪದಲ್ಲಿರು ಎಂದು ಹೇಳಿದನು. ಆದರೆ ಧೂಳಯ್ಯನು ನನಗೆ ಕೈಲಾಸವಾಗಲಿ, ಅಥವಾ ಬೇರೆ ಯಾವ ಪದವಾಗಲಿ ಬೇಡ. ನನ್ನ ಕಾಯಕ ಮಾಡುತ್ತ ಶರಣರ ಸೇವೆಯಲ್ಲಿರುವ ಘನ ಪದವಿಯೇ ನನಗೆ ಸಾಕು ಎಂದು ನುಡಿದು ಪರಮಾತ್ಮನೊಡನೆ ಕೈಲಾಸಕ್ಕೆ ಹೋಗಲು ಒಪ್ಪಲಿಲ್ಲ. ಕಾಯಕವೇ ಕೈಲಾಸವೆಂತಲೂ ಇಹಲೋಕದಲ್ಲಿಯೇ ಅನೇಕ ಲೋಕಗಳಿವೆ ಎಂತಲೂ ಶಿವಶರಣರು ಆಗಿಂದಾಗ್ಗೆ ಸಾರಿದ್ದಾರೆ. ಶ್ರೇಷ್ಠವಾದ ಈ ತತ್ವಗಳಿಗನುಸರಿಸಿ ಮಾದರ ಧೂಳಯ್ಯನು ಪರಮಾತ್ಮನೊಡನೆ ಕೈಲಾಸಕ್ಕೆ ಹೋಗಲು ಒಪ್ಪಲಿಲ್ಲ. ಅವನು ಯಾರಿಗೂ ಗೊತ್ತಾಗದಂತೆ ತನ್ನ ಕಾಯಕವನ್ನು ಮಾಡುತ್ತ ಕಲ್ಯಾಣ ಪಟ್ಟಣದಲ್ಲಿ ವಾಸಮಾಡಿಕೊಂಡಿದ್ದನು.

ಹೀಗೆ ಕೆಲವು ಕಾಲ ಹೋಗಲು ಪರಮಾತ್ಮನು ಧೂಳಯ್ಯನ ಕಾಯಕದ ಮಹತ್ವವನ್ನು ಜಗತ್ತಿಗೆ ತೋರಬೇಕೆಂದು ಬಯಸಿ ಒಂದು ದಿನ ಧೂಳಯ್ಯನು ಚಮ್ಮಾವುಗೆಯನ್ನು ಉಳಿಯಿಂದ ಹೊಲಿಯುತ್ತ ಕುಳಿತಿರಲು ಆ ಉಳಿಯ ಮೊನೆಯಲ್ಲಿಯೇ ಆ ಮೊಚ್ಚೆಯಲ್ಲಿ ಪರಮಾತ್ಮನು ರೂಪು ದೋರಿದನು. ಮತ್ತು ಆ ರೂಪಿನಲ್ಲಿಯೇ ಆ ಧೂಳಯ್ಯನು ಅಡಗಿ ಹೋದನು !

ಶರಣರಿಗೆ ಪರಮಾತ್ಮನ ಸಾನ್ನಿಧ್ಯಪದವು ಬೇಡ. ಆದ್ದರಿಂದ ಧೂಳಯ್ಯನು ಕೈಲಾಸಕ್ಕೆ ಹೋಗಲು ಅಲ್ಲಗಳೆದನು. ಆದರೆ ಸಾಮರಸ್ಯವು ಶರಣರ ಜೀವಿತದ ಧ್ಯೇಯವಾಗಿದೆ. ಆದ್ದರಿಂದ ಪರಮಾತ್ಮನು ಧೂಳಯ್ಯನನ್ನು ಈ ರೀತಿ ತನ್ನಲ್ಲಿ ಅಡಗಿಸಿಕೊಂಡನು.

ಮಾದರ ಧೂಳಯ್ಯನಿಗೆ ಇಲ್ಲಿ ಮೊಚ್ಚೆ ಹೊಲಿಯುವದೇ ಲಿಂಗಪೂಜೆಯಾಗಿ ಪರಿಣಮಿಸಿತು. ಹೇಗೆ ಸೋಹಳಿಯ ಸೋಮವ್ವೆಗೆ ದೀಪದ ಕುಡಿಯಲ್ಲಿ ಜ್ಯೋತಿರ್ಲಿಂಗವು ಆವಿರ್ಭವಿಸಿತೋ ಹಾಗೆಯೇ ಮಾದರ ಧೂಳಯ್ಯನಿಗೆ

ಮೊಟ್ಟೆ ಜೋಡನ್ನು ತನ್ನ ಉಳಿಯಿಂದ ಹೊಲಿಯುತ್ತಿರುವಾಗ ಆ ಉಳಿಯ ಮೊನೆಯಲ್ಲಿಯೇ ಪರಮಾತ್ಮನು ಪ್ರಕಟವಾದನು.

ಮಾದರ ಧೂಳಯ್ಯನ ಹೆಸರು ಗಣ ಸಹಸ್ರದಲ್ಲಿ ಬಂದಿದೆ. ಅವನು ವಚನಕಾರನೂ ಆಗಿದ್ದಾನೆ. ಅವನ ೧೦೨ ವಚನಗಳು ಈಗ ನಮಗೆ ಉಪಲಬ್ಧವಿವೆ. ಅವುಗಳಲ್ಲಿ ಅವನು ಮೋಕ್ಷವೆಂದರೇನು, ಅದನ್ನು ಹೇಗೆ ಪಡೆಯಬೇಕು, ಜ್ಞಾನದ ಸ್ವರೂಪವೇನು, ಕಾಯಕವನ್ನು ಹೇಗೆ ಮಾಡಬೇಕು ಇವೇ ಮೊದಲಾದ ವಿಷಯಗಳನ್ನು ಅತ್ಯಂತ ತಾತ್ವಿಕ ರೀತಿಯಿಂದ ವಿವೇಚಿಸಿದ್ದಾನೆ.

(ಶಿವಶರಣರ ಚರಿತ್ರೆಗಳು ಭಾಗ ೧ರಿಂದ)

# ನಗೆಮಾರಿ ತಂದೆ

ಬಸವೇಶ್ವರನು ತನ್ನ ಒಂದು ವಚನದಲ್ಲಿ ''ಸಂಸಾರದಲ್ಲಿ ಹುಟ್ಟಿ ಮತ್ತೇನೊಂದು ಬಯಸಲೇಕಯ್ಯ ? ನಗುವುದು ನುಡಿವುದು ಶಿವಭಕ್ತರೊಡನೆ. ಸುಮ್ಮನೆ ಹಮ್ಮ ಬಿಮ್ಮಾಗಿರಲೇಕಯ್ಯ ?....... ನಮ್ಮ ಕೂಡಲಸಂಗನ ಶರಣರೊಡನೆ ಮನದೆರೆದು ಮಾತನಾಡುವದಯ್ಯ'' ಎಂದು ನುಡಿದಿದ್ದಾನೆ. ಆದ್ದರಿಂದ ಶಿವಾನುಭವಿಗಳು ಯಾವಾಗಲೂ ಆನಂದದಲ್ಲಿರಬೇಕು. ಅವರು ಎಂದೂ ದುಃಖಿಸತಕ್ಕದ್ದಲ್ಲ. ಅವರು ತಮ್ಮ ಕ್ರಿಯೆಗಳನ್ನು ಮತ್ತು ಕಾಯಕಗಳನ್ನು ಆನಂದದಲ್ಲಿದ್ದುಕೊಂಡು ಅವುಗಳನ್ನು ಪರಮಾತ್ಮನಿಗರ್ಪಿಸಿ ಮಾಡುವುದು. ಇದು ಕಾಯಕವೆಂದೆನಿಸಿಕೊಳ್ಳುತ್ತದೆ. ಆದ್ದರಿಂದ ಭಕ್ತರಲ್ಲಿ ಆನಂದ ವೃತ್ತಿಯನ್ನು ಬೀರುವದೇ ತಮ್ಮ ಕಾಯಕವನ್ನಾಗಿಟ್ಟುಕೊಂಡ ಕೆಲವು ಶರಣರಿದ್ದಾರೆ. ಇಂಥವರಲ್ಲಿ ನಗೆಮಾರಿ ತಂದೆಯು ಒಬ್ಬನು.

ಭಕ್ತರನ್ನು ನಗಿಸುವದೇ ಮಾರಿತಂದೆಯ ಕಾಯಕವಾಗಿತ್ತು. ಅವನು ಈ ಕಾಯಕವನ್ನು ಮಾಡುತ್ತಿರುವಾಗ ಭಕ್ತರು ಕೊಟ್ಟುದನ್ನು ತಾನು ಸ್ವೀಕರಿಸಿ ಅದರಲ್ಲಿ ಉಳಿದಿದ್ದನ್ನು ಶಿವಶರಣರ ದಾಸೋಹ ಕಾರ್ಯಗಳಿಗೆ ಉಪಯೋಗಿಸುವನು. ಈ ಪ್ರಕಾರ ಹಾಸ್ಯದ ಕಾಯಕವನ್ನು ಅವನು ಬಹುಕಾಲ ನಡಿಸುತ್ತ ಬಂದನು.

ಹೀಗಿರುವಲ್ಲಿ ಒಂದು ದಿನ ಅವನು ತನ್ನ ಈ ಕಾಯಕವನ್ನು ಮಾಡುತ್ತ ಬೇರೊಂದೂರಿಗೆ ಹೊರಟಿದ್ದನು. ದಾರಿಯಲ್ಲಿ ಮಳೆಯು ಜೋರಾಗಿ ಬೀಳ ಹತ್ತಿತು ಮತ್ತು ಅವನನ್ನು ಒಂದು ಹೊಳೆಯು ಕಟ್ಟಿತು. ಈ ಸ್ಥಿತಿಯಲ್ಲಿ ಇದಿರಿನ ದಂಡೆಗೆ ಅವನು ಹೋಗದಂತಾಯಿತು. ಅವನು ಮಳೆಯಲ್ಲಿ ತೋಯಿಸಿಕೊಳ್ಳುತ್ತ ಕುಳಿತಿದ್ದಾಗ ಅವನ ಮನಸ್ಸಿನ ಸ್ಥಿತಿಯನ್ನು ಪರೀಕ್ಷಿಸಬೇಕೆಂದು ಪರಮಾತ್ಮನು ಒಬ್ಬ ಭಕ್ತನ ವೇಷವನ್ನು ಧಾರಣ ಮಾಡಿ ಒಂದು ಎತ್ತಿನ ಮೇಲೆ ಪಾರ್ವತೀದೇವಿಯನ್ನು ಕುಳ್ಳಿರಿಸಿ ನಗೆಮಾರಿ ತಂದೆಯು

ಸಮೀಪಕ್ಕೆ ಬಂದು ನಿಂತನು. ಅಲ್ಲಿ ಅವನನ್ನು ಕಂಡು, "ನೀನೆಲ್ಲಿಗೆ ಹೋಗುತ್ತಿ ?" ಎಂದು ಕೇಳಲಾಗಿ ನಗೆಮಾರಿ ತಂದೆಯು ನನ್ನ ಕಾಯಕಕ್ಕೆ ಮುಂದಿನ ಊರಿಗೆ ಹೋಗುತ್ತೇನೆಂದು ಹೇಳಿ "ನೀನು ಈ ತುಂಬಿದ ನದಿಯನ್ನು ಹೇಗೆ ದಾಟುವಿ ?" ಎಂದು ಮಾರಿತಂದೆಯು ಪರಮಾತ್ಮನಿಗೆ ಕೇಳಿದನು. ಆಗ ಪರಮಾತ್ಮನು– "ನಾನು ಈ ಎತ್ತಿನ ಮೇಲೆ ಕುಳಿತು ನನ್ನ ಹೆಗಲ ಮೇಲೆ ನನ್ನ ಹೆಂಡತಿಯನ್ನು ಹತ್ತಿಸಿಕೊಂಡು ನದಿಯನ್ನು ದಾಟುವೆನು" ಎಂದು ಅಂದು ನಗೆಮಾರಿ ತಂದೆಗೆ "ನೀನು ಈಗ ತೊಂದರೆಯಲ್ಲಿರುವಿ. ಈ ನದಿಯನ್ನು ನೀನು ಹೇಗೆ ದಾಟುವಿ ?" ಎಂದು ಕೇಳಿದನು. ಅದಕ್ಕೆ ನಗೆಮಾರಿ ತಂದೆಯು, "ನಾನು ನಿನ್ನ ಸತಿಯು ಹೆಗಲಮೇಲೆ ಕುಳಿತುಕೊಂಡು ನಿನ್ನೊಡನೆ ನದಿಯನ್ನು ದಾಟುವೆನು" ಎಂದು ಅಂದನು. ಪರಮಾತ್ಮನು ನಗೆಮಾರಿ ತಂದೆಯ ಇಂಗಿತವನ್ನು ತಿಳಿದವನಾಗಿ ನಕ್ಕುಬಿಟ್ಟನು. ಎತ್ತಿನ ಮೇಲೆ ತಾನು ಕುಳಿತುಕೊಂಡು ನದಿಯನ್ನು ಸುರಕ್ಷಿತವಾಗಿ ನದಿಯನ್ನು ದಾಟುವದಾದರೆ, ಪಾರ್ವತಿದೇವಿಯನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಳ್ಳುವ ಅವಶ್ಯವೇನು ? ಹಾಗೆ ಕುಳ್ಳಿರಿಸಿಕೊಂಡು ಹೋಗಿದ್ದರೆ ತಾನು ಅಪಹಾಸ್ಯಕ್ಕೆ ಗುರಿಯಾಗುತ್ತಿದ್ದಲ್ಲವೆ ? ಎಂದು ಅವನು ಭಾವಿಸಿದನು. ಇದಕ್ಕನುಸರಿಸಿಯೇ ನಗೆಮಾರಿ ತಂದೆಯು ಅವನಿಗೆ ಹಾಸ್ಯ ಮಾಡಿದ್ದಾನೆ. ತೊಂದರೆಯಲ್ಲಿದ್ದರೂ ಕೂಡಾ ತನ್ನ ಹಾಸ್ಯವೃತ್ತಿಯನ್ನು ಬಿಡದೆ ಇದ್ದದರಿಂದ ಪರಮಾತ್ಮನು ಅವನಿಗೆ ಪ್ರೀತನಾಗಿ ಅವನಿಗೆ ಕಾಯಕದ ಹಣವನ್ನು ಕೊಟ್ಟು ತೆರಳಿದನು. ಹೀಗೆ ಎಂಥ ವಿಪತ್ತುಗಳು ಬಂದರೂ ನಗೆಮಾರಿ ತಂದೆಯು ಯಾವಾಗಲೂ ಆನಂದದಿಂದಿದ್ದು ತನ್ನ ಶಿವಾನುಭವವನ್ನು ನಡೆಸಿದ್ದರಿಂದ ಅವನು ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಹೊಂದಿದನು.

ಆದರೆ ನಗೆಮಾರಿತಂದೆಯು ಕೇವಲ ಪರಿಹಾಸಕನಲ್ಲ, ವಿದೂಷಕನಲ್ಲ, ಅವನು ವಚನಕಾರನಾಗಿದ್ದಾನೆ. ಅವನು ಜ್ಞಾನಿಯು. ವಚನಕಾರರಲ್ಲಿ ಅವನ ಸ್ಥಾನವು ಉನ್ನತತರದ್ದಿದೆ. ಅವನ ಮುದ್ರಿಕೆಯು "ಆತುರ ವೈರಿ ಮಾರೇಶ್ವರಾ" ಎಂದಿದೆ. ಅವನ ೨೫ ವಚನಗಳು ನಮ್ಮಲ್ಲಿ ಉಪಲಬ್ಧವಿವೆ. ಅವುಗಳಲ್ಲಿ ಮಾದರಿಗಾಗಿ ಕೆಲವುಗಳನ್ನು ಮಾತ್ರ ನಾವು ಇಲ್ಲಿ ಉದಹರಿಸು

ತ್ತೇವೆ. ಅವುಗಳು ಎಷ್ಟು ಉದಾತ್ತವಾದವುಗಳೆಂಬುದನ್ನು ವಾಚಕರು ಕೂಡಲೇ ಕಂಡುಹಿಡಿಯಬಹುದಾಗಿದೆ.

(೧) ಕಂಗಳ ಮುಂದಣ ಕಾಮವ ಕೊಂದು, ಮನದ ಮುಂದಣ ಆಸೆಯ ತಿಂದು, ಆತನನರಿ ಆತುರವೈರಿ ಮಾರೇಶ್ವರಾ.

(೨) ಕುಂಭದಲ್ಲಿ ಕುದಿವ ರೂಪು ಮುಚ್ಚಳದಂಗವ ತೆರೆದಲ್ಲದೆ ಪಾಕದ ಸಂಗವನರಿಯಬಾರದು. ಶರೀರದ ಕುಂಭದಲ್ಲಿ ಕುದಿವ ಜೀವನ ಇಂದ್ರಿಯಂಗಳ ಹಿಂಗಿದಲ್ಲದೆ ಲಿಂಗಸಂಗಿಯಲ್ಲ. ಪ್ರಾಣಲಿಂಗಿಯಲ್ಲ. ಈ ಸುಘೇದವನರಿಯದೆ ಸುಸಂಗಿಯಲ್ಲ. ಇಂತಿವನರಿವುದಕ್ಕೆ ಪಶುಪತಿಯ ಶರಣರಲ್ಲೊಸೆದ ಸಂಗವ ಮಾಡಿ ಅರಿ. ಅಸುವ ಹರಿ. ತೂತ ತೆರೆ. ಸಂದೇಹದ ಭಾವವನರಿ ಘನಲಿಂಗದಲ್ಲಿರಿ ದೊರಗು. ಕರಿಗೊಂಡೊರಗು, ಆತುರವೈರಿ ಮಾರೇಶ್ವರಾ.

(೩) ಗುರುವಿನಲ್ಲಿ ಗುಣವಿಲ್ಲದಿರ್ದಡೆ ಪೂಜ್ಯನಾಗಿ ಪೊಡಮಡಿಸಿಕೊಳ್ಳಲೇಕೆ ? ಲಿಂಗದಲ್ಲಿ ಲಕ್ಷಣವಿಲ್ಲದಿರ್ದಡೆ ತ್ರಿಸಂಧ್ಯಾಕಾಲದಲ್ಲಿ ಪೂಜಿಸಿಕೊಳ್ಳಲೇಕೆ ? ಜಂಗಮದಲ್ಲಿ ಜಾತಿ ಇಲ್ಲದಿರ್ದಡೆ ಹಿರಿದು ಕಿರಿದೆಂದು ದೊರಲೇತಕ್ಕೆ ? ಇದನೇನು ಹೇಳುವೆ ? ಗುರುಭಾವಕ್ಕೊಳಗಾದ. ಲಿಂಗಲಕ್ಷಣಕ್ಕೊಳಗಾಯಿತ್ತು. ಜಂಗಮ ಜಾತಿಗೊಳಗಾದ. ಇವನೆಲ್ಲವ ಹೇಳಿ ಎನಗಿದೊಳ್ಳಿತೋ ? ಪೊಲ್ಲದೋ ? ಗೆಲ್ಲತನ ಬೇಡ ಆತುರವೈರಿ ಮಾರೇಶ್ವರಾ.

(೪) ನಡೆವ ಕಾಲು, ಅನುವ ಕೈ, ಬೇಡುವ ಬಾಯಿ, ಸರ್ವವನೊಡಗೂಡುವ ಮನ ಉಡುಗಿ, ಘನಲಿಂಗವಲ್ಲಿ ತಲ್ಲೀಯವಾದವನಂಗ ಮರುಳ ಕಂಡ ಕನಸಿನಂತೆ, ಮೂಗನ ಕಾವ್ಯದಂತೆ, ಜಲಲಿಪಿಯಂತೆ, ವಾರಿಯ ಧೂಮದಂತೆ. ಇದಾರಿಗೂ ಅಸಾಧ್ಯ ಆತರವೈರಿ ಮಾರೇಶ್ವರಾ.

(೫) ಭಕ್ತಿಯ ಭಾಂಡದಲ್ಲಿ ಸತ್ಯವೆಂಬ ಅಕ್ಕಿಯ ಹೊಯ್ದು, ನಿರ್ಮಲವೆಂಬ ಉದಕವನೆರೆದು, ತ್ರಿಗುಣವೆಂಬ ಮೂರೊಲೆಗೆಂಡ ಸಂಬಂಧಿಸಿ, ಆತುರದ ಸವುದೆಯನೊಟ್ಟಿ, ಸುಡುವ ಬೆಂಕಿಯಲ್ಲಿ ಉರುಹಲಾಗಿ ಓಗರ

ಬೆಂದಿತ್ತು. ಇಕ್ಕುವರಿಲ್ಲದೆ ಉಂಡು, ಪ್ರಸಾದವಿಲ್ಲದ ಪ್ರಸಾದವನೆನಗಿತ್ತ ನಾತುರವೈರಿ ಮಾರೇಶ್ವರ.

(೬) ಮಣ್ಣೆಂಬುದೇ ದೇಹ. ಹೊನ್ನೆಂಬುದೇ ಕಾಂಕ್ಷೆ. ಹೆಣ್ಣೆಂಬುದೇ ಸುಖದ ಸುಖಭೋಗಂಗಳು. ಅಣ್ಣ, ಇವ ಚೆನ್ನಾಗಿ ಹೇಳದೆ ಮಣ್ಣ ಮುದ್ದೆಯ ಕೈಯಲ್ಲಿ ಕೊಟ್ಟು ಸುಣ್ಣನೆ ಹೋದೆ ಆತುರವೈರಿ ಮಾರೇಶ್ವರಾ.

(೭) ಹರಿಗೋಲ ಹರಿದ ಮತ್ತೆ ಹೊಳೆ ಏನು ಮಾಡುವದು ? ಇರಿದವನಿದ್ದಂತೆ ಕೈದೇನ ಮಾಡುವುದು ? ಎಚ್ಚವನಿದ್ದಂತೆ ಅಂಬಿಗೆ ಮುನಿವರೇ ಅಯ್ಯ ? ಎನ್ನ ಚಿತ್ತದಲ್ಲಿ ತಲೆದೋರಿ ನೀನಾಡಿಸಿದಂತೆ ಆಡಿದೆ. ನೀ ನೋಡಿಸಿದಂತೆ ನಾನು ನೋಡಿದೆ. ನೀ ಹೇಳಿದ ಬಿಟ್ಟಿಯ ಮಾಡಿದೆ. ನೀ ಬರಿಸಿದ ಬಳಿಯ ಬಂದೆ. ನೀನಿರಿಸಿದಲ್ಲಿ ಇದ್ದೆನಯ್ಯ. ಕಾಳದವನಾದ ಮತ್ತೆ ಮಾನ್ಯದ ಒಲವರ ಏನೊಂದು ಗುಣವಿಲ್ಲವಯ್ಯ. ಎನ್ನನೆಂದಿಂಗೊಳಕೊಂಬೆಯೋ ಆತುರವೈರಿ ಮಾರೇಶ್ವರಾ ?

ಇವನ ವಚನಗಳು ಎಷ್ಟು ಭಾವಭರಿತವಾದವುಗಳು ಮತ್ತು ಅರ್ಥಪೂರ್ಣವಾದವುಗಳೆಂಬುದು ಮೇಲಿನ ವಚನಗಳಿಂದ ಚೆನ್ನಾಗಿ ತಿಳಿದು ಬರುತ್ತದೆ.

ಪರಿಹಾಸದ ಮೂಲಕ ಜನತೆಯಲ್ಲಿ ಪ್ರೇಮವನ್ನುಂಟುಮಾಡಿ, ಅವರನ್ನು ಒಲಿಯಿಸಿಕೊಂಡು ಅವರನ್ನು ಉಚ್ಚಸ್ಥಿತಿಗೆ ತರುವದು ಶಿವಾನುಭವದ ಒಂದು ರೀತಿಯಾಗಿದೆ. ಈ ಬಗೆಯಾಗಿ ಕೆಲವು ಶಿವಶರಣರು ವರ್ತಿಸಿದ್ದಾರೆ.

(ಶಿವಶರಣರ ಚರಿತ್ರೆಗಳು ಭಾಗ ೧ರಿಂದ)

# ಗಂಗಾಂಬಿಕೆ

ಗಂಗಾಂಬಿಕೆಯು ಬಸವೇಶ್ವರನ ಎರಡನೆಯ ಹೆಂಡತಿಯು. ಮೊದಲನೆ ಹೆಂಡತಿಯಾದ ನೀಲಾಂಬಿಕೆಯ ಲಗ್ನವು ಮಂಗಳವಾಡದಲ್ಲಾಗಿತ್ತು. ಆಗ ಬಿಜ್ಜಳನು ತರ್ದೇವಾಡಿ ನಾಡಿನಲ್ಲಿ ಚಾಲುಕ್ಯರ ಮಾಂಡಲಿಕನಾಗಿ ರಾಜ್ಯವಾಳುತ್ತಿದ್ದನು. ಮುಂದೆ ಅವನು ಬನವಾಸಿ ನಾಡಿಗೆ ಮಾಂಡಲಿಕನಾಗಿ ನೇಮಿಸಲ್ಪಟ್ಟಿದ್ದರಿಂದ ಅವನು ಬನವಾಸಿಯಲ್ಲಿ ಆಳಹತ್ತಿದನು. ಆಮೇಲೆ ಅವನು ಚಾಲುಕ್ಯ ರಾಜ್ಯವನ್ನು ಆಕ್ರಮಿಸಿ ಕಲ್ಯಾಣದಲ್ಲಿ ನಿರಂಕುಶ ಪ್ರಭುತ್ವವನ್ನು ನಡಿಸಹತ್ತಿದನು. ಆಗ ಅವನಿಗೆ ಬಲದೇವನು ಮಂತ್ರಿಯಾಗಿದ್ದನು.

ಆ ಕಾಲದಲ್ಲಿ ಬಸವೇಶ್ವರನು ಕೂಡಲಸಂಗಮನ ಸ್ಥಾನದಲ್ಲಿ ವಾಸಿಸುತ್ತಿದ್ದನು. ಬಿಜ್ಜಳನು ಬನವಾಸಿ ನಾಡಿಗೆ ಹೋದ ಬಳಿಕ ಬಸವನು ಬಹುಶಃ ಅವನಲ್ಲಿ ಕೆಲ ದಿವಸ ನೌಕರಿ ಮಾಡಿ ಮುಂದೆ ಅದನ್ನು ಬಿಟ್ಟಿರಬಹುದು. ಅಥವಾ ಅಲ್ಲಿಗೆ ಹೋಗಿರಲಿಕ್ಕಿಲ್ಲ. ಆದರೆ ಅಷ್ಟರಲ್ಲಿ ಅವನು ಪ್ರಸಿದ್ಧನಾಗಿದ್ದನು. ಬಿಜ್ಜಳನು ಕಲ್ಯಾಣದಲ್ಲಿ ಚಕ್ರಾಧಿಪತಿಯಾಗಿ ಆಳಹತ್ತಿದಾಗ್ಗೆ ಅವನ ಮಂತ್ರಿಯಾದ ಬಲದೇವನು ಬಸವೇಶ್ವರನ ಮಹಿಮೆ, ಅವನ ಜಾಣತನ, ಅವನ ಯೋಗ್ಯತೆ ಇವುಗಳನ್ನು ತಿಳಿದುಕೊಂಡು ಅವನಿಗೆ ತನ್ನ ಮಗಳನ್ನು ಕೊಡಬೇಕೆಂದು ನಿಶ್ಚಯಿಸಿದನು. ಬಸವೇಶ್ವರನ ಮೊದಲ ಸಂಗತಿಯಾದ ನೀಲಾಂಬಿಕೆಯು ಬಲದೇವನ ಸೋದರನಾದ ಸಿದ್ದಣ್ಣ ಮಂತ್ರಿಯ ಮಗಳು. ಈ ಸಿದ್ದಣ್ಣ ಮತ್ತು ಬಲದೇವನು ಸಹೋದರರಾಗಿದ್ದಲ್ಲದೆ, ಬಸವೇಶ್ವರನ ತಾಯಿಯಾದ ಮಾದಲಾಂಬಿಕೆಯು ಕೂಡ ಅವರಿಗೆ ಒಡಹುಟ್ಟಿದವಳಾಗಿದ್ದಳು. ಹೀಗೆ ಇವರೆಲ್ಲರೂ ಸಮೀಪದ ಆಪ್ತರಾಗಿ ಬಸವೇಶ್ವರನಲ್ಲಿ ಅನುರಾಗವುಳ್ಳವರಾಗಿದ್ದರು.

ಹೀಗಿರಲು ಬಲದೇವನು ಬಸವೇಶ್ವರನಿಗೆ ತನ್ನ ಮಗಳನ್ನು ಕೊಡಲು ನಿಶ್ಚಯಿಸಿ ಚಾರರನ್ನು ಕೂಡಲಸಂಗಮಕ್ಕೆ ಕಳುಹಿಸಿ ಅವನನ್ನು ಕಲ್ಯಾಣಕ್ಕೆ

ಬರಮಾಡಿಕೊಂಡನು. ಬಸವೇಶ್ವರನು ಕಲ್ಯಾಣಕ್ಕೆ ಬಂದು ಸೊಡ್ಡಳ ಬಾಚರಸರ ಮನೆಯಲ್ಲಿ ಮೊದಲು ಇಳಿದನು. ಅಲ್ಲಿ ಪಂಚಗಣಾಧೀಶ್ವರರು ಗಂಗಾಂಬಿಕೆಗೆ ಶಿವದೀಕ್ಷೆಯನ್ನು ಮಾಡಿದರು. ಮುಂದೆ ಲಗ್ನ ಸಮಾರಂಭವೂ ಬಹಳ ವಿಜೃಂಭಣೆಯಿಂದ ನಡೆಯಿತು.

ಬಸವೇಶ್ವರನು ಕಲ್ಯಾಣಕ್ಕೆ ಬರುವಷ್ಟರಲ್ಲಿ ಅವನ ಮಹಿಮೆ ಮತ್ತು ಅವನ ಶಿವಯೋಗದ ಬಲ ಇವುಗಳ ವಾರ್ತೆಯು ಎಲ್ಲ ಕಡೆಗೂ ಪಸರಿಸಿತ್ತು. ಅವನು ಕಲ್ಯಾಣದಲ್ಲಿ ಇರಹತ್ತಿದ ಬಳಿಕ ಬಹು ಜನ ಶಿವಾನುಭವಿಗಳು ಅವನಲ್ಲಿಗೆ ಆಗಿಂದಾಗ್ಯೆ ಬರಹತ್ತಿದರು.

ಬಸವನು ಒಂದು ದಿವಸ ಓಲಗದಲ್ಲಿ ರಾಜನ ಸಮ್ಮುಖದಲ್ಲಿದ್ದಾಗ್ಗೆ ಆಕಾಶದಿಂದ ಒಂದು ಲಿಪಿಯು ಅರಸನ ಇದಿರಿಗೆ ಬಂದು ಬಿದ್ದಿತು. ಆದರೆ ಅದನ್ನು ಓದಿ ಅರ್ಥಮಾಡಲು ಓಲಗದಲ್ಲಿ ಯಾರಿಗೂ ಸಾಧ್ಯವಾಗಲಿಲ್ಲ, ಆದರೆ ಅಲ್ಲಿದ್ದ ಬಸವೇಶ್ವರನು ಅದನ್ನು ಸುಲಭವಾಗಿ ಓದಿ ಚಾಲುಕ್ಯರ ಗದ್ದುಗೆಯ ಕೆಳಗೆ ಅಪಾರ ದ್ರವ್ಯವಿದೆಯೆಂಬ ಭಾವವು ಲಿಪಿಯಲ್ಲಿದೆ ಎಂದು ಹೇಳಿದನು. ಆ ಮೇರೆಗೆ ಬಿಜ್ಜಳನು ಸಿಂಹಾಸನದ ಕೆಳಗಿನ ಭೂಮಿಯನ್ನು ಅಗಿಸಲಾಗಿ ಅಲ್ಲಿ ಅವನಿಗೆ ಅಪಾರವಾಗಿ ಧನಕನಕ ವಜ್ರ ವೈಢೂರ್ಯಗಳು ದೊರೆತವು. ಇದರಿಂದ ಬಿಜ್ಜಳನು ಬಸವೇಶ್ವರನಿಗೆ ಅತ್ಯಂತ ಪ್ರಿಯನಾಗಿ ಬಸವನು ಬಹಳ ಜಾಣನು, ಅವನು ಮಹಿಮನು ಎಂದು ಭಾವಿಸಿ ಅವನಿಗೆ ಪ್ರಧಾನಿ ಪಟ್ಟವನ್ನು ಕೊಟ್ಟನು.

ಮುಂದೆ ಬಿಜ್ಜಳನು ಬಸವೇಶ್ವರನಿಗೆ ಒಂದು ಸುಂದರವಾದ ಅರಮನೆಯನ್ನು ಕಟ್ಟಿಸಿಕೊಟ್ಟನು. ಅಲ್ಲಿ ಅವನ ಕೂಡ ನಾಗಲಾಂಬಿಕೆ, ಗಂಗಾಂಬಿಕೆ ನೀಲಾಂಬಿಕೆ ಇವರೆಲ್ಲರೂ ವಾಸ ಮಾಡಹತ್ತಿದರು. ಬಸವೇಶ್ವರನು ಹೀಗೆ ಉಚ್ಚಸ್ಥಾನವನ್ನು ಹೊಂದಿದ್ದರಿಂದ ಕಲ್ಯಾಣಕ್ಕೆ ನಾನಾ ದೇಶಗಳಿಂದ ವಿದ್ವಜ್ಜನರೂ ರಸಿಕರೂ ಶಿವಾನುಭವಿಗಳೂ ಬಹುಸಂಖ್ಯೆಯಿಂದ ಬರಹತ್ತಿದರು. ಆಗ ಅವನೆದುರಿನಲ್ಲಿ ಶಿವಾನುಭವದ ಬಗ್ಗೆ ವಾದ ವಿವಾದಗಳು ಯಾವಾಗಲೂ ಜರುಗುತ್ತಿದ್ದವು. ಇವುಗಳೇ ಶಿವಾನುಭವ ಮಂಟಪವನ್ನು ಬಸವೇಶ್ವರನು

ಸ್ಥಾಪಿಸಲು ಕಾರಣವಾದವು. ಆದರ ಮೂಲಕ ಷಟ್‌ಸ್ಥಲಶಾಸ್ತ್ರಕ್ಕೆ ಪ್ರಚಾರ ಹೊಂದಿತು. ತ್ರಿಲಿಂಗ, ಸಕೀಲುಗಳು, ಅಷ್ಟಾವರಣಗಳು, ಏಕೋತ್ತರಗಳು ಇವುಗಳ ವಿಚಾರಗಳು ಬಹು ದೀರ್ಘವಾಗಿ ಚರ್ಚಿಸಲ್ಪಡುತ್ತಿದ್ದವು ವಚನಗಳನ್ನು ಅಲ್ಲಿ ನೆರೆದ ಶಿವಶರಣರು ರಚಿಸುವರು. ಮತ್ತು ಎಲ್ಲ ಕಡೆಗೆ ಅವುಗಳನ್ನು ಆವರು ಪ್ರಸಾರ ಮಾಡುವರು ಈ ಕಾರ್ಯವು ಬಹು ಬಲವಾಗಿ ಸಾಗಹತ್ತಿತು.

ಗಂಗಾಂಬಿಕೆ ನೀಲಾಂಬಿಕೆಯರು ತಮ್ಮ ಅರಮನೆಗೆ ಬಂದ ಅತಿಥಿಗಳನ್ನು ಉಪಚರಿಸುವ ಕಾರ್ಯವನ್ನು ಮನಮುಟ್ಟಿ ಮಾಡುವರು. ಇಷ್ಟೇ ಅಲ್ಲ, ಅವರು ಸಹ ತಾವು ಉಚ್ಚತರದ ಶಿವಾನುಭವಿಗಳಾದ್ದರಿಂದ ವಚನಗಳನ್ನು ರಚಿಸುವವರಾದರು. ಗಂಗಾಂಬಿಕೆಯ ಮುದ್ರಿಕೆಯು " ಗಂಗಾಪ್ರಿಯ ಕೂಡಲಸಂಗಮದೇವಾ" ಎಂದಿದೆ. ಆದರೆ ಅವಳ ಯಾವ ವಚನವೂ ನಮಗೆ ದೊರೆತಿರುವುದಿಲ್ಲ. ಹೆಚ್ಚಿಗೆ ಶೋಧಿಸಿದಲ್ಲಿ ಇವು ದೊರೆಯಬಹುದೆಂದು ನಮಗೆ ತೋರುತ್ತದೆ.

ಮುಂದೆ ಹರಳಯ್ಯ ಮಧುವಯ್ಯಗಳನ್ನು ಬಿಜ್ಜಳನೃಪತಿಯು ಅತ್ಯಂತ ಕ್ರೂರತನದಿಂದ ಕೊಲ್ಲಿಸಿದನು. ಆಗ ಪಟ್ಟಣದಲ್ಲಿ ಒಂದು ಮಹತ್ತರವಾದ ಕ್ಷೋಭೆಯುಂಟಾಯಿತು. ಬಸವೇಶ್ವರನು ಇಲ್ಲಿ ಇನ್ನು ಇರಬಾರದೆಂದು ಕೂಡಲ ಸಂಗಮೇಶ್ವರನಲ್ಲಿಗೆ ಬಂದ ಬಳಿಕ ತನ್ನ ಸತಿಯರಾದ ನೀಲಾಂಬಿಕೆ ಗಂಗಾಂಬಿಕೆಯರಿಗೆ ತಾನಿದ್ದ ಸ್ಥಳಕ್ಕೆ ಬರಬೇಕೆಂದು ಹಡದಪ್ಪಣ್ಣನ ಕೂಡ ಹೇಳಿಕಳುಹಿದನು. ಹಡದಪಣ್ಣನು ಕಲ್ಯಾಣಕ್ಕೆ ಬಂದು ಬಸವೇಶ್ವರನ ಅಭಿಪ್ರಾಯವನ್ನು ಆವರಿಗೆ ತಿಳಿಸಲಾಗಿ ಆವರು ಹೇಗೆ ವರ್ತಿಸಿದರೆಂಬುದು ವಿಚಾರಾರ್ಹವಾಗಿದೆ.

ನೀಲಾಂಬಿಕೆಯು ಬಸವೇಶ್ವರನಂತೆ ಕೋಮಲ ಹೃದಯಳು ಮತ್ತು ಲಿಂಗನಿಷ್ಠಳು ಅವಳು ಬಸವೇಶ್ವರನ ಅಭಿಪ್ರಾಯವನ್ನು ತಿಳಿದ ಕೂಡಲೆ ಕೂಡಲಸಂಗಮನಾಥನು ಕಪ್ಪಡಿಯಲ್ಲಿದ್ದಾನೆಯೇ ? ಅವನು ಇಲ್ಲಿ ಇಲ್ಲವೇ? ಎಂಬ ವಿಚಾರಗಳು ಬಂದಂತೆ ತೋರುತ್ತದೆ. ಆದರೂ ಅವಳು ತನ್ನನ್ನು

ಕಾಣಬೇಕೆಂಬ ಬಸವೇಶ್ವರನ ಆಜ್ಞೆಯನ್ನು ಶಿರಸಾವಹಿಸಿ ಕಪ್ಪಡಿಗೆ ಹೊರಡು ವವಳಾದಳು. ಮಧ್ಯದಾರಿಯಲ್ಲಿ ಬರುತ್ತಿರುವಾಗ ಬಸವೇಶ್ವರನು ಲಿಂಗ ದೊಳಗಾಗಿದ್ದನು. ಇದು ನೀಲಾಂಬಿಕೆಗೆ ತಿಳಿದ ಕೂಡಲೆ ಅವಳು ತಂಗಡಿ ಯಲ್ಲಿದ್ದಾಗ್ಗೆ ತತ್‌ಕ್ಷಣ ತನ್ನ ಲಿಂಗದಲ್ಲಿಯೇ ಬಯಲಾಗಿ ಹೋದಳು. ಆದರೆ ಇತ್ತ ಗಂಗಾಂಬಿಕೆಯು ಬೇರೆ ವಿಧವಾಗಿ ಆಚರಿಸಿದಳು ಅದು ಹೇಗೆಂದರೆ :-

"ಗುರುಪ್ರಾಣೆಯು ಗಂಗಾಂಬಿಕೆಯು. ಲಿಂಗಪ್ರಾಣೆಯು. ಜಂಗಮ ಪ್ರಾಣಿಯು ಬಸವಣ್ಣನು" ಎಂದು ಈ ಮೂವರು ಶಿವಶರಣರಲ್ಲಿ ಪ್ರಸಿದ್ಧ ರಾಗಿದ್ದಾರೆ. ಬಸವೇಶ್ವರನು ಗಂಗಾಂಬಿಕೆಗೆ ತನ್ನ ಕಡೆಗೆ ಬರಬೇಕೆಂದು ಹೇಳಿಕಳುಹಲು ಗುರುಪ್ರಾಣೆಯಾದ ಅವಳು ತನ್ನ ಗುರುವಾದ ರುದ್ರಮುನಿ ದೇವನ ಸಲಹೆಯನ್ನು ಪಡೆಯುವವಳಾದಳು. ಈ ಕಾಲದಲ್ಲಿ ಶಿವಶರಣರ ಮೇಲೆ ಭಯಂಕರ ವಿಪತ್ಕಾಲವು ಬಂದೊದಗಿತ್ತು. ವೀರಶೈವ ಧರ್ಮವು ನಾಡಿನಲ್ಲಿ ಉಳಿಯಬೇಕೋ ಅಥವಾ ಅಳಿಯಬೇಕೋ, ಶಿವಶರಣರು ಜೀವಿಸಬೇಕೋ ಅಥವಾ ಮೃದರಾಗಿ ಹೋಗಬೇಕೋ ಎಂಬ ಪ್ರಶ್ನೆಯು ಉದ್ಭವಿಸಿತ್ತು. ಇಂಥ ಗಂಡಾಂತರ ಸ್ಥಿತಿಯಲ್ಲಿ ರೇವಣಸಿದ್ಧೇಶ್ವರನ ಪುತ್ರನಾದ ರುದ್ರಮುನಿದೇವನು ಶಿವಶರಣರಿಗೆ ಮುಂದಾಳುವಾಗಿ ನಿಂತು ಅವರನ್ನು ಯುದ್ಧಕ್ಕೆ ಅಣಿಮಾಡಿದ್ದನು. ಅವನು ಶಿವಶರಣರ ಸೈನ್ಯವನ್ನು ಜೊತೆಗೊಳಿಸಿದ್ದನು. ಆದ್ದರಿಂದ ಗಂಗಾಂಬಿಕೆಯು ಕಪ್ಪಡಿಗೆ ಹೋಗದೆ ಗುರುವಾದ ರುದ್ರಮುನಿಯ ಸಹಾಯಕಳಾಗಿ ಕಲ್ಯಾಣದಲ್ಲಿಯೇ ನಿಂತಳು ಮತ್ತು ಶಿವಶರಣರ ಸೈನ್ಯಕ್ಕೆ ಸರ್ವ ಸನ್ನಾಹಗಳನ್ನು ಜೊತೆಗೊಳಿಸಹತ್ತಿ ದಳು. (ಕಾಲಜ್ಞಾನದ ವಚನಗಳು) ಈ ಸೈನ್ಯಕ್ಕೆ ಚೆನ್ನಬಸವ, ಮಡಿವಾಳ ಮಾಚಿದೇವ ಇವರು ಮುಖ್ಯಸ್ಥರಾಗಿದ್ದು ಗಂಗಾಂಬಿಕೆಯು ಅವರೊಡನೆ ಯುದ್ಧರಂಗಕ್ಕೆ ಹೋಗಲು ಸಿದ್ಧಳಾದಳು. ಅವಳು ಈ ಕಾಲದಲ್ಲಿ ಒಬ್ಬ ಶೂರ ಸ್ತ್ರೀಯಳಿಗೆ ಅನುರೂಪವಾಗಿ ವರ್ತಿಸಿದಳು. ಅವಳ ಬಸವೇಶ್ವರನ ಅಕ್ಕನಾದ ನಾಗಲಾಂಬಿಕೆಯೂ ಇದ್ದಳು ಅವಳು ಸಹ ಬಸವೇಶ್ವರನ ಕೂಡ ಕೂಡಲಸಂಗಮಕ್ಕೆ ಹೋಗಲಿಲ್ಲ. ಈ ಉಭಯತರೂ ಕಡೆಯವರೆಗೂ ಶಿವಶರಣರ ಸೈನ್ಯದಲ್ಲಿ ಯುದ್ಧ ಮುಖದಲ್ಲಿ ಹೋರಾಡುತ್ತ ಇದ್ದರು. ಈ

ಕಾಲದಲ್ಲಿ ಗಂಗಾಂಬಿಕೆಯೂ ನಾಗಲಾಂಬಿಕೆಯೂ ವೀರವನಿತೆಯರಿಗೆ ಶೋಭಿಸುವಂತೆ ವರ್ತಿಸಿದರು.

ಶಿವಶರಣರು ಶಸ್ತ್ರವನ್ನು ಹಿಡಿದು ಚೆನ್ನಬಸವ, ಮಡಿವಾಳ ಮಾಚಿದೇವ ಇವರ ನೇತೃತ್ವದಲ್ಲಿ ಅಳಿಯ ಬಿಜ್ಜಳನ ದಂಡಾಳುಗಳೊಡನೆ ಕಾದಾಡುತ್ತ ತೊರಗಲ್ಲು ನಾಡನ್ನು ಪ್ರವೇಶಿಸಿದರು. ಈ ಸ್ಥಳದಲ್ಲಿ ಅನೇಕ ಕಡೆಗೆ ಯುದ್ಧಗಳಾದವು. ಅವು ಯಾವ ಯಾವ ಗ್ರಾಮಗಳಲ್ಲಾದವೆಂಬುದನ್ನು ನಾವು ಹಿಂದೆ ಮಡಿವಾಳ ಮಾಚಿದೇವ ಮತ್ತು ಕಿನ್ನರಿಬ್ರಹ್ಮಯ್ಯ ಇವರ ಚರಿತ್ರೆಗಳಲ್ಲಿ ಹೇಳಿದ್ದೇವೆ. ಈ ಯುದ್ಧಗಳಾದಲ್ಲೆಲ್ಲ ಗಂಗಾಂಬಿಕೆಯೂ ನಾಗಲಾಂಬಿಕೆಯೂ ರಣರಂಗದಲ್ಲಿ ಇರುತ್ತಿದ್ದರು. ಕಡೆಗೆ ಕಾತರವಳ್ಳಿಯಲ್ಲಿ ಘನಘೋರ ಯುದ್ಧವು ಸಂಭವಿಸಿತು. ಅದರಲ್ಲಿ ಅಳಿಯ ಬಿಜ್ಜಳನಿಗೆ ಶಿವಶರಣರನ್ನು ಮುರಿಯಿಕ್ಕುವುದು ಆಗಲಿಲ್ಲ. ಅವನೇ ಸೋತು ರಣರಂಗದಲ್ಲಿ ಮೂರ್ಛಿತನಾಗಿ ಬಿದ್ದನು. ಅವನನ್ನು ಕೊಂದುಹಾಕಬೇಕೆಂದು ಶಿವಶರಣರ ದಂಡಾಳುಗಳು ಸಿದ್ಧವಾಗಿದ್ದುವು. ಆದರೆ ನಾಗಲಾಂಬಿಕೆಯ ಮಧ್ಯಸ್ಥಿಕೆಯಿಂದ ಇದು ತಡೆಯಲ್ಪಟ್ಟಿತು. ಕಾತರವಳ್ಳಿಯ ಯುದ್ಧವಾದ ಬಳಿಕ ಶಿವಶರಣರು ಉಳವಿಯ ಮಹತ್ತರವಾದ ಅರಣ್ಯಪ್ರದೇಶವನ್ನು ಪ್ರವೇಶ ಮಾಡಿದರು. ಈ ಪ್ರದೇಶದಲ್ಲಿ ಅವರು ಚಿರಕಾಲ ವಸಾಹತು ಮಾಡಬೇಕೆಂದು ಬಯಸಿದ್ದರು.

ಗಂಗಾಂಬಿಕೆಯು ಕಾತರವಳ್ಳಿಯಿಂದ ಉತ್ತರಕ್ಕೆ ಮೂರುನಾಲ್ಕು ಮೈಲುಗಳ ಮೇಲಿರುವ ಮುಗಟಖಾನ ಹುಬ್ಬಳ್ಳಿ ಎಂದು ಈಗ ಕರೆಯಲ್ಪಡುವ ಗ್ರಾಮದಲ್ಲಿ ಇದ್ದಾಗ್ಗೆ ಅವಳು ಅಲ್ಲಿಯೇ ಲಿಂಗೈಕ್ಯಳಾದಳು. ಅಲ್ಲಿಯೇ ಆಕೆಯ ಸಮಾಧಿ ಇದೆ. ಅದು ಈಗಲೂ ಗಂಗಾಂಬಿಕೆಯ ದೇವಾಲಯ ಅಥವಾ ಗಂಗಮ್ಮನ ಗುಡಿ ಎಂದು ಜನರು ಕರೆಯುತ್ತಾರೆ. ಹೀಗೆ ಬಸವೇಶ್ವರನ ಹೆಂಡತಿಯಾದ ಗಂಗಾಂಬಿಕೆಯ ಅಂತ್ಯವು ರಣರಂಗದಲ್ಲಿ ಆದದ್ದು ಒಬ್ಬ ವೀರವನಿತೆಗೆ ಶೋಭಿಸುವಂಥದೇ ಇರುತ್ತದೆ. ಅವಳು ಕೊನೆಯವರೆಗೆ ಶತ್ರುಗಳ ಕೂಡ ಹೋರಾಡುತ್ತ ಮಡಿದಿದ್ದಾಳೆ. ಇದು ಅವಳ

ಶೌರ್ಯ ಧೈರ್ಯಗಳನ್ನು ತೋರಿಸುತ್ತದೆ. ಹೀಗೆ ನೀಲಾಂಬಿಕೆಯು ಸಮಾಧಿಯು ತಟಾಕದಲ್ಲಿ ಒಂದು ಕಡೆಗೆ ಆಗಿದ್ದರೆ, ಗಂಗಾಂಬಿಕೆಯು ಸಮಾಧಿಯು ಕಾತರವಳ್ಳಿಯ ರಣರಂಗಕ್ಕೆ ಸಮೀಪವಾಗಿ ಮಲಪ್ರಭಾ ನದಿಯಲ್ಲಿ ಆಗಿರುತ್ತದೆ. ವೀರಶೈವ ಇತಿಹಾಸದಲ್ಲಿ ಈ ಉಭಯತರ ಹೆಸರುಗಳು ಚಿರಸ್ಥಾಯಿಯಾಗಿ ಉಳಿದಿದೆ.

(ಶಿವಶರಣೆಯರ ಚರಿತ್ರೆಗಳು ಗ್ರಂಥದಿಂದ)

# ಶಿವನಾಗಮಯ್ಯ

ಶಿವನಾಗಮಯ್ಯನು 'ಹಿರಿಯಕುಲ' ಎಂದರೆ ಹೊಲೆಯರಲ್ಲಿ ಹುಟ್ಟಿದವನಾಗಿದ್ದನು. ಆದರೂ ಅವನು ಶಿವಭಕ್ತಿಯುಳ್ಳವನೂ ಸದಾಚಾರಿಯೂ ಸದ್ಗುಣಿಯೂ ಆಗಿದ್ದನು. ಹೇಗೆ ಕಾಡಿನಲ್ಲಿ ಚಂದನವು, ಬಾಳೆಯಲ್ಲಿ ಕರ್ಪೂರ ಬಾಳೆಯು, ಚಿಪ್ಪಿನೊಳಗೆ ಮುತ್ತು ಇರುವುವೋ ಹಾಗೆ ಹೊಲೆಯ ಕುಲದೊಳಗೆ ಹುಟ್ಟಿದರೂ ಅವನು ನಿಜವಾದ ದೇವಭಕ್ತಿಯುಳ್ಳವನೆಂದು ಜನರಲ್ಲಿ ಹೆಸರಾಗಿದ್ದನು.

ಹೀಗಿರಲು ಶಿವನಾಗಮಯ್ಯನು ಲಿಂಗದೀಕ್ಷೆಯನ್ನು ಹೊಂದಿ ಕಲ್ಯಾಣಕ್ಕೆ ಬಂದು ಬಸವೇಶ್ವರನ ಸನ್ನಿಧಿಯಲ್ಲಿ ಒಬ್ಬ ದೊಡ್ಡ ಶಿವಯೋಗಿ ಎಂದು ಶಿವಶರಣರಲ್ಲಿ ಪ್ರಸಿದ್ಧನಾದನು ಬಸವೇಶ್ವರನು ಜಂಗಮ ಪೂಜೆಯನ್ನು ಮಾಡುವಾಗ ಶಿವನಾಗಮಯ್ಯನ ಕರುಣ ಪ್ರಸಾದವನ್ನು ಹೊಂದಿ ಅವನಲ್ಲಿ ಸಮರಸಾಚರಣೆಯಿಂದ ವರ್ತಿಸುವನು. ಬಸವೇಶ್ವರನು ಅವನಿಗೆ ಶಿವಾನುಭವ ಮಂಟಪದಲ್ಲಿ ಉಚ್ಚಸ್ಥಾನವನ್ನು ಕೊಟ್ಟು ಎಲ್ಲರ ಸಮ್ಮುಖದಲ್ಲಿ ಅವನನ್ನು ಸನ್ಮಾನಿಸಿ ಅವನಿಗೆ ಸಾಷ್ಟಾಂಗವೆರಗುವನು.

ಬಸವೇಶ್ವರನು ಒಬ್ಬ ಚಂಡಾಲನಕೂಡ ಹೀಗೆ ವರ್ತಿಸುವದನ್ನು ಪಟ್ಟಣದಲ್ಲಿಯ ವಿಪ್ರರು ನೋಡಿ ಸಹಿಸಲಾರದೆ ಬಿಜ್ಜಳನ ಕಡೆಗೆ ಹೋಗಿ ಬಸವೇಶ್ವರನು ಶ್ರೇಷ್ಠ ಕುಲದವನು, ಬ್ರಾಹ್ಮಣನು, ಅಲ್ಲದೆ ಮುಖ್ಯ ಪ್ರಧಾನವಾಗಿದ್ದಾನೆ. ಆದರೆ ಅವನ ರೀತಿ ನೀತಿ ನಡೆಗಳನ್ನು ತಾವು ನೋಡಿದಿರಾ ? ಅವನಿಗೆ ಜಾತಿ ಎಂಬುದಿಲ್ಲ, ನೀತಿ ಎಂಬುದಿಲ್ಲ, ಕಲ್ಯಾಣನಗರದಲ್ಲಿ ಅವನಿಂದ ಕುಲವೆಲ್ಲವು ಹೊಲೆಗಲಿಸಿಹೋಯಿತು. ಅವನು ಮಾಡುವ ಭಕ್ತಿ ಎಂಬುದು ಬೇರೆ ಇರಲಿ. ಆದರೆ ನಾವು ಅವನು ಮಾಡುವುದನ್ನು ಉಚ್ಚರಿಸಿ ಹೇಳಿದರೆ ನಮಗೆ ಮಹಾ ಪಾಪವು ಸಂಭವಿಸುವುದು. ಬಸವನು ಬ್ರಾಹ್ಮಣನಾಗಿ ಬ್ರಾಹ್ಮಣರಿಗೆ ಉಚಿತವಾದ ಭಕ್ತಿಯನ್ನು ಮಾಡಿದ್ದರೆ ಅದು ಎಷ್ಟು ಫಲಕಾರಿಯಾಗು

ತ್ತಿತ್ತೊ"? ಅವನು ಕುಲಹೀನನಾದ ಶಿವನಾಗಮಯ್ಯನೆಂಬ ಹೊಲೆಯನನ್ನು ತನ್ನ ಗುಂಪಿಗೆ ಸೇರಿಸಿಕೊಂಡು ನಿತ್ಯ ಅವನನ್ನು ಪೂಜಿಸಿ ನಮಸ್ಕರಿಸುತ್ತಾನೆ. ಬಸವನು ಸರ್ವೋತ್ತಮನೆಂದು ಪ್ರಭುಗಳು ಅವನಿಗೆ ಪ್ರಧಾನಿ ಕೆಲಸವನ್ನು ಕೊಟ್ಟಿರಿ. ಆದರೆ ಧರ್ಮ ಎಂಬುದು ಅವನಿಂದ ಎಲ್ಲಿ ಉಳಿಯಿತು. ಈ ಹೊಲೆಯನಾಗನೆಂಬವನು ಉಂಡು ಮಿಕ್ಕುದನ್ನು ಅವನು ಉಣ್ಣುತ್ತಿದ್ದಾನೆ. ಹೀಗಾದಲ್ಲಿ ಧರ್ಮವೆಲ್ಲಿ ಉಳಿಯುವುದು ? ಸಂಪತ್ತು ಹೇಗೆ ಉಂಟಾಗುವುದು ? ಎಂದು ಪಟ್ಟಣದಲ್ಲಿಯ ಬ್ರಾಹ್ಮಣರೆಲ್ಲರು ಬಿಜ್ಜಳನಲ್ಲಿಗೆ ಹೋಗಿ ದೂರು ಹೇಳಿದರು.

ಬಿಜ್ಜಳನು ಇದನ್ನೆಲ್ಲ ಕೇಳಿ ಭೀತಿಗೊಂಡು ಒಬ್ಬ ಚಾರನನ್ನು ಕರೆದು ನೀನು ಬಸವನಲ್ಲಿಗೆ ಹೋಗಿ ಅವನಿಗೆ ಶಿವನಾಗಮಯ್ಯನನ್ನು ಕರೆದುಕೊಂಡು ಆಸ್ಥಾನಕ್ಕೆ ಬರಹೇಳೆಂದು ಕಳಿಹಿಸಿದನು. ಆಗ ಬಸವನು ಶಿವನಾಗಮಯ್ಯನನ್ನು ದಂಡಿಗಿಯ ಮೇಲೆ ಕುಳ್ಳಿರಿಸಿ ಉತ್ಸವದಿಂದ ಕರೆದುಕೊಂಡು ಬಿಜ್ಜಳನಲ್ಲಿಗೆ ಬಂದನು.

ಹೀಗೆ ಬಸವೇಶ್ವರನು ಒಬ್ಬ ಅಂತ್ಯಜನನ್ನು ಉತ್ಸವದಿಂದ ಕರೆದುಕೊಂಡು ಸಭೆಯಲ್ಲಿ ಎಲ್ಲರ ಮಧ್ಯದಲ್ಲಿ ಬಂದು ಕುಳ್ಳಿರಲು ಅಲ್ಲಿದ್ದ ಬ್ರಾಹ್ಮಣರು ಬಿಜ್ಜಳನಲ್ಲಿ ಇದು ಎಂಥ ಅನ್ಯಾಯವು ? ಬಸವೇಶ್ವರನು ಜಾತಿಯನ್ನು ನೀತಿಯನ್ನೂ ಬಿಟ್ಟು ಹೇಗೆ ನಡೆಯುತ್ತಾನೆ ನೋಡಿರಿ. ಅಂದಮೇಲೆ ರಾಜ್ಯದಲ್ಲಿರುವವರೆಲ್ಲರು ಹೇಗೆ ನಡೆಯಬೇಕು ?—ಎಂದು ನಿಷ್ಠುರವಾಗಿ ನುಡಿದರು.

ಬಸವೇಶ್ವರನು ಇದನ್ನು ಕೇಳಿ ಬಿಜ್ಜಳನಿಗೆ ಅಂದದ್ದೇನೆಂದರೆ :— ಬಿಜ್ಜಳನೇ ಕೇಳು. ಗುರುವು ಮುಟ್ಟಿ ಶುದ್ಧನಾದಬಳಿಕ ಭಕ್ತರ ಕುಲವನ್ನು ನೋಡಬಹುದೇ ? ಲಿಂಗಕ್ಕೆ ಪ್ರಾಣಪ್ರತಿಷ್ಠೆಯಾಗಲು ಅದು ಲಿಂಗವಲ್ಲದೆ ಪಾಷಾಣವೆಂದು ತಿಳಿಯಬಹುದೇ ? ಪರುಷ ಸೋಂಕಿದ ಕಬ್ಬಿನ ಸುವರ್ಣವಲ್ಲದೆ ಅದು ಕಬ್ಬಿನವೇ? ವೀರಶೈವ ದೀಕ್ಷೆಯನ್ನು ಹೊಂದಿದ ಬಳಿಕ ಶಿವಶರಣರ ಅಂಗವು ಮಂತ್ರಮಯವಾದದ್ದು. ಅಲ್ಲಿ ಹೊಲೆಯೆಂಬುದು ಹೇಗೆ ಉಂಟಾದೀತು ? ಹೀಗೆ ನುಡಿಯುತ್ತ ಅಜಾಮಿಳಪಿಂಗಳ ಮೊದಲಾದವರ ಕಥೆಗಳನ್ನು ಹೇಳಿ

ಇದಕ್ಕೆ ಧರ್ಮಶಾಸ್ತ್ರಗಳ ಆಧಾರಗಳೂ ಉಂಟು ಎಂದು ಶಿವಧರ್ಮ, ಶಿವ ರಹಸ್ಯ, ಶಿವಪುರಾಣ, ಶಿವಾಗಮಗಳಲ್ಲಿರುವ ಆಧಾರಗಳನ್ನು ಹೇಳಿದನು.

ಆದರೆ ಬಿಜ್ಜಳನು ಬಸವೇಶ್ವರನ ಮಾತಿಗೆ ಒಪ್ಪದೆ ಮತ್ತಿಷ್ಟು ಸಂತಾಪ ಗೊಂಡು :– ಬಸವನೇ, ಹೊಲೆಯನು ಎಂದಾದರ, ಕುಲಜವಾಗಬಹುದೆ ? ಬ್ರಾಹ್ಮಣರನ್ನು ಚಿವುಟಿದರೆ ರಕ್ತ ಬಂದೀತು. ಆದರೆ ಶಿವಭಕ್ತರನ್ನು ಚಿವುಟಿ ದರೆ ಹಾಲು ಎಂದಾದರೂ ಅದರೊಳಗಿಂದ ಬಂದೀತೇ ಎಂದು ಕೋಪದಿಂದ ನುಡಿದನು. ಅದನ್ನು ಬಸವೇಶ್ವರನು ಕೇಳಿ ಅಂದದ್ದು :– ಶಿವಭಕ್ತರನ್ನು ಚಿವುಟಿದರೆ ಹಾಲು ನಿಜವಾಗಿ ಬರುವುದು. ಇದನ್ನು ಪ್ರತ್ಯಕ್ಷಮಾಡಿ ತೋರಿ ಸುವೆನು ಎಂದು ನುಡಿದನು. ಆಗ ಬಿಜ್ಜಳನು ಅಲ್ಲಿ ನೆರೆದಿದ್ದ ಬ್ರಾಹ್ಮಣರೂ ಹಾಗೆ ಮಾಡಿ ತೋರಿಸು ಎಂದು ನುಡಿಯಲು ಬಸವೇಶ್ವರನು ಶಿವನಾಗಮ ಯ್ಯನ ಕೈಯನ್ನು ಹಿಡಿದೆತ್ತಿ ಅವನ ಐದು ಬೆರಳುಗಳನ್ನೆತ್ತಲು ಹಾಲು ಧಾರೆ ಗಟ್ಟಿ ಸುರಿಯಹತ್ತಿತು.

ಅದನ್ನು ಬಿಜ್ಜಳನು ನೋಡಿ ಆಶ್ಚರ್ಯಪಟ್ಟನು ಆಗ ಬಸವೇಶ್ವರನು ಬಿಜ್ಜಳನಿಗೆ :- ಈಗಲಾದರೂ ಉತ್ತಮರು ಯಾರು ? ಹೊಲೆಯರು ಯಾರು ಎಂಬುದನ್ನು ನೀವು ನೋಡಿದಿರಾ ? ಎಂದು ಕೇಳಿದನು. ಈ ಅದ್ಭುತವನ್ನು ಬಿಜ್ಜಳನು ನೋಡಿ ತಲೆದೂಗಿ –ಭಕ್ತರೇ ಕುಲರು ಎಂಬುದನ್ನು ನಾನು ಈಗ ಮನಗಂಡೆನು. ನಾನು ಬ್ರಾಹ್ಮಣರ ಮಾತನ್ನು ಕೇಳಿ ವಿಚಾರ ಮಾಡದೇ ನಿಮ್ಮಿಬ್ಬರನ್ನು ಕರೆಯಿಸಿ ದೂಷಿಸಿ ಅಪರಾಧ ಮಾಡಿದೆನು. ನನ್ನನ್ನು ಕ್ಷಮಿಸ ಬೇಕು ಎಂದು ನುಡಿದು ಅಲ್ಲಿದ್ದ ದ್ವಿಜರ ಗುಂಪನ್ನು ನೋಡಿ –ಈಗಲಾದರೂ ನೀವು ನೋಡಿದಿರಾ ? ನಿಮ್ಮ ಹಸ್ತವನ್ನು ಹಿಂಡಿದರೆ ರಕ್ತವು ಬರುವುದು. ಆದರೆ ಹಾಲು ಬಂದೀತೇ ? ಬರಲಾರದು. ಅಂದಬಳಿಕ ಭಕ್ತರ ರಕ್ತವು ಪವಿ ತ್ರವಾದದ್ದೋ ಅಥವಾ ನಿಮ್ಮದ್ದಿಯದೋ ಎಂಬುದನ್ನು ಹೇಳಿರಿ. ಶಿವನಾಗ ಮಯ್ಯನೇ ಕುಲಜನು. ಇದು ಇಂದು ನನಗೆ ತೋರಿಬಂದಿತು ಎಂದು ನುಡಿದನು.

ಆಮೇಲೆ ಅವನು ಶಿವನಾಗಮಯ್ಯನಿಗೆ ಉಡುಗೊರೆಯನ್ನು ಕೊಟ್ಟು ಅವನನ್ನು ಆನೆಯಮೇಲೆ ಕುಳ್ಳಿರಿಸಿ ಬೀಳ್ಕೊಟ್ಟನು. ಆ ಕಾಲದಲ್ಲಿ ಶಿವನಾ

ಗಮಯ್ಯನ ಸುತ್ತಲೂ ಅಸಂಖ್ಯ ಭಕ್ತರು ನೆರೆದರು. ಆಮೇಲೆ ಅವರು ಅವನನ್ನು ಸಂಭ್ರಮದ ಮೆರವಣಿಗೆಯಲ್ಲಿ ಕರೆದುಕೊಂಡು ಕಲ್ಯಾಣ ಪಟ್ಟಣದ ಬೀದಿಗಳೊಳಗಿಂದ ಹಾಯ್ದು ಬಸವೇಶ್ವರನ ಶಿವಾನುಭವ ಮಂಟಪಕ್ಕೆ ಬಂದರು. ಅಲ್ಲಿ ಅವರು ಶಿವನಾಗಮಯ್ಯನನ್ನು ನಮಸ್ಕರಿಸಿ ತಮ್ಮ ತಮ್ಮ ಮಂದಿರಗಳಿಗೆ ಹೋದರು. ಶಿವನಾಗಮಯ್ಯನು ಬಸವೇಶ್ವರನ ಸನ್ನಿಧಿಯಲ್ಲಿ ಉಚ್ಚತರದ ಶಿವಾನುಭವಿಯಾಗಿ ಶಿವಶರಣರಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿರುತ್ತಾನೆ.

ಶಿವನಾಗಮಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಶಿವ ಭಕ್ತರು ತಮ್ಮ ಲಿಂಗಪೂಜಾ ಕಾಲದಲ್ಲಿ ಅವನ ಹೆಸರನ್ನು ಹರಿಸುತ್ತ ಅವನನ್ನು ಸ್ಮರಿಸುವದುಂಟು. ಶಿವನಾಗಮಯ್ಯನು ವಚನಕಾರನೂ ಇದ್ದಾನೆ. ಅವನ ಮುದ್ರಿಕೆಯು 'ನಾಗಯ್ಯಪ್ರಿಯ ಚೆನ್ನರಾಮೇಶ್ವರಾ' ಎಂದಿದೆ. ಅವನು ಅನೇಕ ವಚನಗಳನ್ನು ರಚಿಸಿರಬಹುದು. ಆದರೆ ಅವುಗಳಲ್ಲಿ ಎರಡು ವಚನಗಳು ಮಾತ್ರ ನಮಗೆ ಉಪಲಬ್ಧವಾಗಿವೆ. ಅವುಗಳನ್ನು ನಾವು ಇಲ್ಲಿ ಉದಾಹರಿಸಿದ್ದೇವೆ.

ಬಸವೇಶ್ವರನು ಅಂತ್ಯಜರಿಗೆ ಶಿವಾನುಭವ ಜ್ಞಾನವನ್ನು ಮಾಡಿಕೊಟ್ಟು ಅವರಿಗೆ ವೀರಶೈವ ದೀಕ್ಷೆಯನ್ನಿತ್ತು, ಆಮೇಲೆ ಅವರಲ್ಲಿ ಸಾಮರಸ್ಯದಿಂದ ನಡೆದಿದ್ದು ಕಂಡುಬರುತ್ತದೆ. ಅವನು ಈ ಪ್ರಕಾರ ಅವರಲ್ಲಿ ಉಚ್ಚವರ್ತನೆಯನ್ನುಂಟುಮಾಡಲು ಪ್ರಯತ್ನಿಸಿದ್ದಾನೆ. ಕೇವಲ ಅಂತ್ಯಜರಿದ್ದ ಮಾತ್ರದಿಂದ ಅವನು ಅವರೊಡನೆ ಬೆರೆದಿಲ್ಲ. ಸದಾಚಾರವಿಲ್ಲದ ಲಿಂಗಭಕ್ತರನ್ನು ಅವನು ಯಾವಾಗಲೂ ಹೀಯಾಳಿಸುತ್ತಾನೆ. ಆದರೆ ಶಿವಾನುಭವಿಗಳು ಯಾವ ಕುಲದವರಿದ್ದರೂ ಅವರು ಶ್ರೇಷ್ಠವರ್ಣದವರೆಂದು ಅವನು ಭಾವಿಸಿದ್ದಾನೆ. ಈ ತಾರತಮ್ಯವನ್ನು ವಾಚಕರು ಲಕ್ಷಿಸುವದು ಅವಶ್ಯವೆಂದು ನಮಗೆ ತೋರುತ್ತದೆ.

ವಚನಗಳು

೧) ಅಂಗದಮೇಲೆ ಲಿಂಗವಿದ್ದ ಬಳಿಕ ಲಿಂಗಹೀನರ ಬೆರೆಸಬಾರದು. ಅಂಗದ ಮೇಲೆ ಲಿಂಗವಿದ್ದ ಬಳಿಕ ಲಿಂಗ ಮುಂತಾಗಿ ಎಲ್ಲ ಕ್ರೀಗಳನ್ನು ಗಮನಿಸ

ಬೇಕಲ್ಲದೆ ಅಂಗಮುಖಂತಾಗಿ ಗಮನಿಸಲಾಗದು. ಲಿಂಗ ಸಂಬಂಧಿಯಾಗಿ ಅಂಗ ಮುಖಂತಾಗಿ ಇರ್ಪವರು ಲಿಂಗಕ್ಕೆ ದೂರವಯ್ಯಾ ನಾಗಪ್ರಿಯ ಚೆನ್ನ ರಾಮೇಶ್ವರಾ.

೨) ಘನಸುಖ ಮಹಾಸುಖದ ಮುಟ್ಟಲು ಸಮ ಸುಖಂಗಳ ಸುಖಯಿಸಬಲ್ಲ. ಸುಖವನಲ್ಲಿಯು ಕೊಯ್ದು ಸೂಡ ಕಟ್ಟಲಿಲ್ಲ, ನಾಗಪ್ರಿಯ ಚೆನ್ನರಾಮೇಶ್ವರಾ ನಿಮ್ಮ ಶರಣ ಸುಖಿಸಬಲ್ಲ. ಸುಖವನು.

ಇವು ಎರಡೇ ವಚನಗಳಿದ್ದರೂ ಅರ್ಥಬೋಧಕವಾಗಿವೆ.

(ಶಿವಶರಣರ ಚರಿತ್ರೆಗಳು ಭಾಗ ೨ ರಿಂದ)

# ಕಂಕರೀಕಕ್ಕಯ್ಯ

ಕಲ್ಯಾಣಪಟ್ಟಣದಲ್ಲಿ ಕಂಕರೀಕಕ್ಕಯ್ಯನೆಂಬ ಶಿವಶರಣನು ವಾಸಮಾಡು ತ್ತಿದ್ದನು. ಅವನು ದಿನಾಲು ಭಕ್ತರ ಮನೆಗಳಿಗೆ ಹೋಗಿ ಕಂಕರಿಯನ್ನು ಬಾರಿಸುತ್ತ ದೇವರ ಭಜನೆಮಾಡುತ್ತ ಭಕ್ತರು ಕೊಟ್ಟಿದ್ದನ್ನು ತೆಗೆದುಕೊಂಡು ತನ್ನ ಉಪಜೀವನವನ್ನು ಸಾಗಿಸುತ್ತಿದ್ದನು. ಅದರಲ್ಲಿ ತನಗೆ ಉಳಿದು ದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವನು. ಹೀಗೆ ಕಂಕರಿ ಯನ್ನು ನುಡಿಸುತ್ತ ಜೀವಿಸಿರುವುದೇ ಅವನಿಗೆ ಶಿವನ ಸೇವೆಯಾಗಿತ್ತು. ಹೀಗೆ ಅವನು ಕಲ್ಯಾಣಪಟ್ಟಣದಲ್ಲಿ ತನ್ನ ಕಾಯಕವನ್ನು ಮಾಡುತ್ತ ಅನೇಕ ವರ್ಷಗಳವರೆಗೆ ಇದ್ದನು.

ಆದರೆ ಜನರು ಅವನೊಬ್ಬ ಶ್ರೇಷ್ಠ ಶಿವಶರಣನೆಂಬುದನ್ನು ತಿಳಿ ಯದೆ ಅವನಿಗೋಸ್ಕರ ಉಪೇಕ್ಷಾಭಾವವನ್ನು ತಾಳಿದವರಾಗಿದ್ದರು. ಆದರೆ ಕಕ್ಕಯ್ಯನು ಅದನ್ನು ಲಕ್ಷಿಸದೆ ತನ್ನ ಕಾಯಕದಲ್ಲಿ ನಿರತನಾಗಿದ್ದನು. ಅವನ ಈ ಭಕ್ತಿಭಾವವು ಕಡೆಗೆ ಶಿವನ ಮನಸ್ಸಿಗೆ ತಾಕಿತು. ಆಗ ಶಿವನು ಅವನ ಪರಿಚಯವೂ ಅವನ ಮಹತ್ವವೂ ಪಟ್ಟಣದಲ್ಲಿ ಎಲ್ಲರಿಗೂ ತಿಳಿ ಯಬೇಕೆಂಬ ಕಾಂಕ್ಷೆಯನ್ನು ತಾಳಿ ಒಬ್ಬ ಜಂಗಮನ ವೇಷವನ್ನು ಧಾರಣ ಮಾಡಿ ಕಕ್ಕಯ್ಯನು ಯಾವಲ್ಲಿ ತನ್ನ ಕಂಕರಿಯನ್ನು ನುಡಿಸುತ್ತ ಇದ್ದನೋ ಅಲ್ಲಿಗೆ ಬಂದು ಅವನನ್ನು ಕಾಣುವವನಾದನು.

ಕಕ್ಕಯ್ಯನು ಹೀಗೆ ತನ್ನನ್ನು ಕಂಡವನು ಪರಮಾತ್ಮನೆಂಬುದನ್ನು ಏನೂ ತಿಳಿದಿರಲಿಲ್ಲ. ಆದ್ದರಿಂದ ಅವನನ್ನು ಕಂಡರೂ ಕೂಡ ಅವನು ತನ್ನ ಕಂಕರಿಯನ್ನು ನುಡಿಸುತ್ತ ಅದರಲ್ಲಿಯೇ ಮಗ್ನನಾಗಿದ್ದನು. ಅವನು ನುಡಿಸಿದಂತೆ ಪರಮಾತ್ಮನೂ ಸಹ ಅದರ ಜೊತೆಯಲ್ಲಿ ಕುಣಿಯಲಿಕ್ಕೆ ಪ್ರಾರಂಭಮಾಡಿದನು. ಪರಮಾತ್ಮನು ಗಾಯನ ಮತ್ತು ನೃತ್ಯ ಪ್ರಿಯ ನೆಂಬುದು ಪ್ರಸಿದ್ಧವು. ಗಾಯನದ ಮಂಡಲಕ ಮಾಡಿದ ಅವನ ಭಜನೆಯು

ಅವನಿಗೆ ತೀವ್ರ ಗೋಚರವಾಗುತ್ತದೆ. ಆದ್ದರಿಂದ ಅಸಂಖ್ಯ ಶಿವಶರಣರು ಗಾಯನ ಮತ್ತು ನೃತ್ಯಗಳ ಮೂಲಕ ಪರಮಾತ್ಮನನ್ನು ಒಲಿಸಿಕೊಂಡಿರುತ್ತಾರೆ.

ಕಂಕರೀ ಕಕ್ಕಯ್ಯನು ತನ್ನ ಕಂಕರಿಯನ್ನು ಹೀಗೆ ನುಡಿಸುತ್ತಿರುವಾಗ್ಗ ಅದರ ಜೊತೆಯಲ್ಲಿ ಜೇರೊಬ್ಬನು ಕುಣಿಯುತ್ತಿರುವುದನ್ನು ನೋಡಿ ಅವನಲ್ಲಿ ಭಕ್ತಿಯ ಭರವು ಮತ್ತಿಷ್ಟು ಹೆಚ್ಚಿತು. ಮತ್ತು ಅದು ಹೆಚ್ಚಿದ ಹಾಗೆ ಅವನು ನಾನಾವಿಧವಾಗಿ ಕಂಕರಿಯನ್ನು ನುಡಿಸಹತ್ತಿದನು. ಅದರಲ್ಲಿಯೇ ಅವನು ಮಗ್ನನಾಗಿಹೋದನು. ಹೊರಗಿನ ಅರಿವು ಅವನಿಗೆ ಏನೂ ಉಳಿಯಲಿಲ್ಲ. ಅವನಿಗೆ ಬಾರಿಸುವ ಕ್ರಮವೂ ಸಹ ಅನಿಸುತ್ತಿರಲಿಲ್ಲ. ಇದೇ ಸ್ಥಿತಿಯು ಪರಮಾತ್ಮನಿಗೂ ಕೂಡ ಉಂಟಾಯಿತು. ಅವನೂ ಕೂಡ ಕಂಕರಿಯ ದನಿಗೆ ಅನುಗುಣವಾಗಿ ಕುಣಿಯಹತ್ತಿದನು. ಹೀಗೆ [illegible] ಅವರ ಬಾರಿಸುವಿಕೆಯೂ ಕುಣಿತವೂ ನಡೆದವು. ಪಟ್ಟಣದಲ್ಲಿಯ ಜನರು ಕುತೂಹಲವುಳ್ಳವರಾಗಿ ಬಹು ಸಂಖ್ಯೆಯಿಂದ ನೆರ್ರ್ಯಾ ಅವರನ್ನು ನೋಡುತ್ತ ನಿಂತರು. ಆದರೆ ಉಭಯತರಲ್ಲಿ ಯಾರು ಮೊದಲು ದಣಿಯುವರೋ ಎಂಬುದರ ಮೌಜನ್ನು ನೋಡುವುದೇ ಅವರ ಉದ್ದೇಶವಾಗಿತ್ತು. ಆದರೆ ಬಹಿರಂಗದ ಅರಿವು ಇವರಿಬ್ಬರಿಗೂ ಇರಲಿಲ್ಲ. ಅಂದ ಬಳಿಕ ಅವರಿಗೆ ದಣಿವು ಆಗುವುದು ಹೇಗೆ ? ಜನರೇ ಬೇಸತ್ತು ಹೊರಟು ಹೋಗುತ್ತಿದ್ದರು.

ಕಂಕರಿಯ ರವವೂ ನೃತ್ಯವೂ ಆದಿನ ಹಗಲು ಮಾತ್ರವಲ್ಲ, ಇಡೀ ರಾತ್ರಿ ಸಹ ನಡೆಯಿತು. ಅದನ್ನು ಜನರು ನೋಡಿ ಆಶ್ಚರ್ಯಪಟ್ಟರು. ಉಭಯತರೂ ಹೆಚ್ಚಿನ ತರಗತಿಯ ಶಿವಭಕ್ತರೆಂದು ಅವರನ್ನು ಹೊಗಳಹತ್ತಿದರು. ಹೀಗೆ ಉಭಯತರು ಮೂರುದಿನಗಳವರೆಗೆ ತಮ್ಮ ಬಾರಿಸುವಿಕೆಯನ್ನೂ ಕುಣಿತವನ್ನೂ ನಡೆಸಿದರು. ಕಂಕರೀಕಕ್ಕಯ್ಯನ ಈ ಅಗಾಧವಾದ ಭಕ್ತಿಯನ್ನು ಪರಮಾತ್ಮನು ಕಂಡು ಅವನು ಸಹ ಬೆರಗಾದನು. ಆಗ ಅವನು ವಿಚಾರ ಮಾಡಿದ್ದು :— ಕಕ್ಕಯ್ಯನ ಮಹಿಮೆಯನ್ನು ಜನರ ಲಕ್ಷ್ಯಕ್ಕೆ ತಂದಂತಾಯಿತು. ಇನ್ನು ಮೇಲೆ ಅವನ ಬಾರಿಸುವಿಕೆಯನ್ನು ಸಾಕು

ಮಾಡಬೇಕು ಎಂಬ ಅಪೇಕ್ಷೆಯನ್ನು ತಾಳಿ ತಾನು ಸೋತವನಂತೆ ಧರೆಗೊರಗಿದನು. ಕಕ್ಕಯ್ಯನು ಇದನ್ನು ನೋಡಿದರೂ ಕೂಡ ಅವನನ್ನು ಬಿಡದೆ ಅವನ ಸೆರಗು ಹಿಡಿದು ಎಳೆಯಲು ಶಿವನು ಅವನಿಗೆ ಪ್ರತ್ಯಕ್ಷನಾದನು. ಮತ್ತು ನಿನಗೆ ಏನು ಬೇಕು ಬೇಡೆಂದು ಅವನಿಗೆ ಕೇಳಿದನು. ಅದಕ್ಕೆ ಕಕ್ಕಯ್ಯನು :– ನಿನ್ನ ಮೆಚ್ಚು ನಿನ್ನಲ್ಲಿರಲಿ ಅದು ನನಗೆ ಬೇಡ. ಆದರೆ ಈ ಮೂರುದಿನ ನಾನು ಎಡೆಬಿಡದೆ ಕಂಕರೀ ನುಡಿಸಿದ್ದರ ಕಾಯಕವನ್ನು ನೀನು ನನಗೆ ಕೊಡತಕ್ಕದು. ನಿನಗೆ ಬೇಡುವುದು ಇದೇ ಎಂದು ಹೇಳಿದನು. ಅದಕ್ಕೆ ಶಿವನು ಅವನಿಗೆ—ನಿನ್ನೊಡನೆ ನಾನು ಕುಣಿದಿದ್ದೇನೆ. ಅದು ವ್ಯರ್ಥವೇ ಹೇಗೆ ? ನಾನು ನಿನ್ನ ಕೂಡ ಕುಣಿದದ್ದರ ಕಾಯಕವನ್ನು ನೀನು ನನಗೆ ಕೊಡಬೇಕಲ್ಲವೇ ? ಎಂದು ಕೇಳಿದನು.

ಅದಕ್ಕೆ [illegible] ನಿನಗೆ [illegible] ಸಲ್ಲದು. ನೀನು ಊರಳಗೊಂದು ಮನೆಯನ್ನು ಕಟ್ಟು. ಆಗ ನಾನು ನಿನ್ನ ಮನೆಗೆ ಕಾಯಕಕ್ಕೆ ಬರುತ್ತೇನೆ. ಆಗ ನೀನು ನನ್ನೊಡನೆ ಕುಣಿದೆಯಾದರೆ ನಿನಗೆ ಕಾಯಕ ಕೊಡುತ್ತೇನೆ. ಹೀಗೆ ಹೇಳಲು, ಕಕ್ಕಯ್ಯನು ನುಡಿದದ್ದು ಯಥಾರ್ಥವೆಂದು ಶಿವನು ಒಪ್ಪಿಕೊಂಡು ಅವನಿಗೆ ತಾನು ಕೊಡತಕ್ಕ ಕಾಯಕವನ್ನು ಕೊಟ್ಟನು.

ಆಮೇಲೆ ಶಿವನು ಕಕ್ಕಯ್ಯನಿಗೆ– ನೀನು ಇನ್ನು ಮೇಲೆ ಈ ಲೋಕದಲ್ಲಿರಬೇಡ. ನನ್ನ ಕೂಡ ಕೈಲಾಸಕ್ಕೆ ಬರಬೇಕು ಎಂದು ಕರೆಯಲು, ಕಕ್ಕಯ್ಯನು ಈ ಮರ್ತ್ಯಲೋಕವೇ ನನಗೆ ಘನತರವಾದದ್ದು. ನಿನ್ನ ಗಣಪದವಿಯು ನನಗೆ ಬೇಡ. ನಿನಗೆ ಬೇಕಾದರೆ ನೀನೇ ಒಕ್ಕಲು ಸಹವಾಗಿ ಭಕ್ತರಿದ್ದಂಥ ಈ ಮೃತ್ಯುಲೋಕಕ್ಕೆ ಬಾ ಇಲ್ಲಿ ಮಹಿಮರಿದ್ದಾರೆ. ಅವರನ್ನು ನೀನು ಇಲ್ಲಿ ಕಾಣುವಿ. ನನಗೆ ಕೈಲಾಸವು ಬೇಡ, ಎಂದೆನ್ನಲು ಶಿವನು ಮೆಚ್ಚಿ ಅವನಿಗೆ–ಭಕ್ತಿ ಎಂಬ ಐಶ್ವರ್ಯವನ್ನು ಉಪಭೋಗಿಸಲು ಭಕ್ತರೇ ಸಮರ್ಥರು; ಅವರೇ ಶ್ರೇಷ್ಠರು ಎಂದು ನುಡಿಯುತ್ತ ಕೈಲಾಸಕ್ಕೆ ಹೊರಟುಹೋದನು.

ಇತ್ತ ಕಕ್ಕಯ್ಯನು ಬಸವಾದಿ ಪ್ರಮಥರೊಡಗೂಡಿ ಕಲ್ಯಾಣಪಟ್ಟಣದಲ್ಲಿ ಕಂಕರಿ ಕಾಯಕವನ್ನು ಮಾಡುತ್ತಾ ತನ್ನ ಇಷ್ಟಲಿಂಗದಲ್ಲಿ ನಿರ್ವಯವಾದನು.

ಕಾಯಕವು ಕೇವಲ ಜೀವನೋಪಾಯವಲ್ಲ. ಇದರಲ್ಲಿ ಕೆಲವು ತಾತ್ತ್ವಿಕಾರ್ಥಗಳಿವೆ. ಯಾರು ಶ್ರಮಜೀವಿಗಳೋ ಅವರಿಗೆ ಮಾತ್ರ ಕಾಯಕ ಮಾಡತಕ್ಕದೆಂಬ ಪ್ರತಿಫಲ ಕೊಡುವುದು ಭಾವವು ಈ ಚಿಕ್ಕ ಕಥೆಯಲ್ಲಿದೆ ಯಾರು ದುಡಿಯುವದಿಲ್ಲವೋ ಅವರಿಗಾಗಿ ಯಾರೂ ಕಾಯಕಮಾಡತಕ್ಕದ್ದಲ್ಲ. ಮತ್ತು ಅವರ ಸೇವೆಯನ್ನು ಮಾಡಕೂಡದು. ಪರಮಾತ್ಮನ ಶ್ರಮಜೀವಿಯಲ್ಲವೆಂದು ತಿಳಿದು ಕಕ್ಕಯನು ಕಾಯಕವನ್ನು ಅವನಿಗೆ ಕೊಡುವುದನ್ನು ನಿರಾಕರಿಸಿದನು. ಶಿವಾನುಭವಿಗಳು ಇಂಥ ಸೋಮಾರಿಗಳು ಕೊಟ್ಟಿದ್ದನ್ನು ಸಹ ತೆಗೆದುಕೊಳ್ಳಬಾರದು. "ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ" ಎಂದು ಶಿವಶರಣರು ನುಡಿದಿದ್ದಾರೆ. ಈ ಶ್ರೇಷ್ಠ ತತ್ವವು ಈ ಕಥೆಯಲ್ಲಿದೆ. ಆದ್ದರಿಂದ ಸೋಮಾರಿಗಳೂ ದುಷ್ಟ ನಡತೆಯವರೂ ಆದ ಸಿರಿವಂತರು ಹಣ ಕೊಡಲಿಕ್ಕೆ ಬಂದರೂ ಅದನ್ನು ಸತ್ಕಾರ್ಯಕ್ಕೆ ತೆಗೆದುಕೊಳ್ಳಬಾರದು. ಮತ್ತು ಅವರ ಸೇವೆಯನ್ನು ಸಹ ಕೈಕೊಳ್ಳಬಾರದು ಎಂಬ ಸಾಮಾಜಿಕ ಉಚ್ಚ ತತ್ವಗಳು ಕಂಕರೀ ಕಕ್ಕಯ್ಯನ ಆಚರಣೆಯಲ್ಲಿರುವುದು ಕಂಡುಬರುತ್ತದೆ.

(ಶಿವಶರಣರ ಚರಿತ್ರೆಗಳು ಭಾಗ ೨ ರಿಂದ)

# ಸ್ತ್ರೀಯರು

"ಶಿವಶರಣರ ಚರಿತ್ರೆಗಳು ಭಾಗ ೧ ಮತ್ತು ಭಾಗ ೨" ಈ ಗ್ರಂಥಗಳಲ್ಲಿ ಒಟ್ಟು ೧೧೪ ಜನ ಶಿವಶರಣರ ಚರಿತ್ರೆಗಳು ಬಂದಿದ್ದು ಅವರಲ್ಲಿ ೩೨ ಜನ ಶಿವಶರಣೆಯರಿದ್ದಾರೆ. ಇವರಲ್ಲಿ ೧೬ ಜನರು ವಚನಕಾರರೂ ಇದ್ದಾರೆ. ಇದು ನಿಜವಾಗಿ ದೊಡ್ಡ ಸಂಖ್ಯೆಯು. ಇವರೆಲ್ಲರು ವೀರಶೈವ ಸಮಾಜದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದವರು. ಇಂದಿಗೆ ಎಂಟುನೂರು ವರುಷಗಳಾದರೂ ಕೂಡ ಅವರ ಹೆಸರುಗಳು ಜನರ ಸ್ಮರಣೆಯಲ್ಲಿ ಉಳಿದಿವೆ. ಅನೇಕ ವೀರಶೈವ ಗ್ರಂಥಕಾರರು ಅವರನ್ನು ಆಗಿಂದಾಗ್ಗೆ ತಮ್ಮ ಗ್ರಂಥಗಳಲ್ಲಿ ಸ್ಮರಿಸುತ್ತಾರೆ. ಇದರಿಂದ ಈ ಪ್ರಾಣ್ಯ ಸ್ತ್ರೀಯರ ಧಾರ್ಮಿಕ ವರ್ತನೆಯು ಎಂಥ ಉಚ್ಚಸ್ಥಿತಿಯನ್ನು ಹೊಂದಿತ್ತೆಂಬುದನ್ನು ನಾವು ಊಹಿಸಬಹುದು.

ಈ ಸ್ತ್ರೀಯರ ಅನೇಕ ಚರಿತ್ರೆಗಳಲ್ಲಿ ಸತಿ-ಪತಿಗಳಿಬ್ಬರೂ ವಚನಕಾರರಿದ್ದುದು ಕಂಡುಬರುತ್ತದೆ. ಇದರಿಂದ ಪುರುಷರು ತಾವು ಮಾತ್ರವಲ್ಲದೆ ತಮ್ಮ ಹಾಗೆ ತಮ್ಮ ಸ್ತ್ರೀಯರೂ ಕೂಡ ಜ್ಞಾನಿಗಳಾಗುವಂತೆ ಮಾಡಲು ಯತ್ನಿಸುತ್ತಿದ್ದರೆಂಬುದು ಗೊತ್ತಾಗುತ್ತದೆ. ಕೆಲವು ಸ್ತ್ರೀಯರು ಬರೆದ ವಚನಗಳಿಂದ ಅವರು ಸಂಸ್ಕೃತದ ಅಭ್ಯಾಸವನ್ನು ಸಹ ಮಾಡಿದ್ದರೆಂಬ ಅನುಮಾನವು ಉಂಟಾಗುತ್ತದೆ. ವಚನಕಾರರಿರುವ ಸತಿ-ಪತಿಗಳ ಹೆಸರುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

**ವಚನಕಾರರಾದ ಸತಿಪತಿಗಳು**— ಮಹಾದೇವರಾಜನು ಅಥವಾ ಮೋಳಿಗೆಯ ಮಾರಯ್ಯನು ಉಚ್ಚತರಗತಿಯ ವಚನಕಾರನು ಅವನ ಹೆಂಡತಿಯಾದ ಮಹಾದೇವಿಯಮ್ಮನೂ ವಚನಕಾರಳಾದಳು. ಉರಿಲಿಂಗ ಪೆದ್ದಿಯು ಪ್ರಸಿದ್ಧ ವಚನಕಾರನು. ಅವನ ಹೆಂಡತಿ ಕಾಳವ್ವೆಯೂ ಕೂಡ ವಚನಕಾರಳಿದ್ದಾಳೆ.

ಆಯ್ದಕ್ಕಿ ಮಾರಯ್ಯ ಅವನ ಹೆಂಡತಿ ಲಕ್ಕಮ್ಮನೂ, ಎಡೆಮಠದ ನಾಗಿದೇವ ಅವನ ಹೆಂಡತಿ ಮಸಣಮ್ಮನೂ, ರಾಯಸದ ಮಂಚಣ್ಣ ಅವನ ಹೆಂಡತಿ ರಾಯಮ್ಮನೂ, ಹಡಪದಪ್ಪಣ್ಣ ಅವನ ಹೆಂಡತಿ ಲಿಂಗಮ್ಮನೂ, ಇವರೆಲ್ಲರೂ ವಚನಕಾರರಿದ್ದಾರೆ. ಈ ಸ್ತ್ರೀಯರ ವಚನಗಳಲ್ಲಿ ಶಿವಾನುಭವದ ಉಚ್ಚತತ್ವಗಳ ನಿರೂಪಣೆಯು ಇರುತ್ತದೆ.

ಶಿವಶರಣರ ಚರಿತ್ರೆಗಳಲ್ಲೆಲ್ಲ ಅವರ ಸತಿಯರ, ತಾಯಿ ತಂದೆಗಳ, ಅಕ್ಕ ತಂಗಿಯರ, ಚಿಕ್ಕ ಮಕ್ಕಳ ವರ್ತನೆಗಳ ಉಲ್ಲೇಖಗಳು ಆಗಿಂದಾಗ್ಗೆ ಬರುತ್ತವೆ. ಅವರೆಲ್ಲರೂ ಪರಸ್ಪರರ ಶಿವಾನುಭವದ ನಡೆಗೆ ಅನುಕೂಲರಾಗಿ ವರ್ತಿಸಿದ್ದನ್ನು ನಾವು ಇವುಗಳಲ್ಲಿ ಕಾಣುತ್ತೇವೆ. ಒಂದು ವೇಳೆ ಗಂಡನು ತಪ್ಪು ಮಾರ್ಗವನ್ನು ಹಿಡಿದಿದ್ದರೆ ಅವನ ಸತಿಯು ಅವನನ್ನು ಹಾದಿಗೆ ಹಚ್ಚಿದ್ದಾಳೆ. ಹೀಗೆ ಅವಳು ಯಾವಾಗಲೂ ಅವನಿಗೆ ಅನುಕೂಲಳಾಗಿ ವಿಧೇಯಳಾಗಿ ನಡೆದಿದ್ದಾಳೆ. ಅವನ ಕಷ್ಟಗಳಲ್ಲಿ ತಾನೂ ಭಾಗವಹಿಸಿ ನಡೆದಿದ್ದಾಳೆ. ಹೀಗೆ ಶಿವಶರಣಶರಣೆಯರ ವರ್ತನೆಯು ಇದೆ. ಇದು ಕೆಳಗಿನ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ.

ಆದಯ್ಯನು ಸೋಮನಾಥನನ್ನು ಕರೆತರಲು ಸೌರಾಷ್ಟ್ರಕ್ಕೆ ಹೊರಟನು. ಅವನು ಊರಿಗೆ ತಿರುಗಿ ಬರುವವರೆಗೂ ಅವನ ಹೆಂಡತಿಯಾದ ಪದ್ಮಾವತಿಯು ಉಪವಾಸವಿದ್ದಳು. ಸಿದ್ಧರಾಮನು ಅಮುಗಿದೇವನನ್ನು ಪಟ್ಟಣದ ಹೊರಗೆ ಹಾಕಿದನು. ಆಗ ಅಮುಗಿದೇವನ ಹೆಂಡತಿಯಾದ ವರದಾನಿಯಮ್ಮನು ಅವನ ನೇಗಿಯ ಉಪಕರಣಗಳನ್ನು ಹೊತ್ತುಕೊಂಡು ಪತಿಯೊಡನೆ ಹೊರಬಿದ್ದಳು. ಕೋವೂರು ಬ್ರಹ್ಮಯ್ಯನು ರಾಜಧಾನಿಯನ್ನು ಬಿಟ್ಟು ಕೆಲಕಾಲ ಏಕಾಂತವಾಸದಲ್ಲಿದ್ದನು. ಆಗ ಅವನ ಮಗನನ್ನು ಕೊಂದ್ಹಾಕಿದರು. ಆದರೂ ಅವನ ತಾಯಿಯಾದ ಕಳಾವತಿಯು ತನ್ನ ಪತಿಯ ಅಪ್ಪಣೆಯಂತೆ ರಾಜ್ಯಭಾರ ನಡೆಸುತ್ತ ಬಂದಳು. ಚಾರಮರಾಯನಿಗೆ ಮೊದಲು ಶಿವಜ್ಞಾನವನ್ನು ಮಾಡಿಕೊಟ್ಟಳು ಅವನ ಹೆಂಡತಿಯು. ತಂಗಟೂರು ಮಾರಯ್ಯನು ಹನ್ನೆರಡುವರ್ಷ ಬಸವೇಶ್ವರನ ಸೇವೆ ಮಾಡುತ್ತ

ತನ್ನ ಮನೆಗೆ ಬಾರದಿದ್ದರೂ ಅವನ ಹೆಂಡತಿಯು ಅವನಿಗೆ ಏನೂ ಅಡ್ಡ ಬರಲಿಲ್ಲ. ಅವಳು ಶಿವಾನುಭವದಂತೆ ನಡೆಯುತ್ತ ಪ್ರಾಣಲಿಂಗಿ ಸ್ಥಳವನ್ನು ಹೊಂದಿದಳು. ಅವಳ ಸೇವಕಳೂ ಕೂಡ ಅವಳಂತೆಯೇ ವರ್ತಿಸಿದಳು. ನಿರ್ಲಜ್ಜ ಶಾಂತಯ್ಯನಿಗೆ ದಿಗಂಬರನಾಗುವ ಪ್ರಸಂಗವು ಉಂಟಾಯಿತು. ಆಗ ಅವನ ಹೆಂಡತಿಯೂ ಕೂಡ ದಿಗಂಬರೆಯಾಗಲು ಸಿದ್ಧಳಾದಳು. ಸಗರದ ಬ್ರಹ್ಮನು ಪ್ರಸಾದವೇ ಮದ್ದೆಂದು ಭಾವಿಸಿ ನಡೆಯಲ್ಲಿ ತಪ್ಪಲು ಅವನ ಹೆಂಡತಿಯಾದ ಶಿವದೇವಿಯು ಅವನನ್ನು ಎಚ್ಚರಿಸಿದಳು. ಗುಪ್ತಮಂಚಣ್ಣನು ಸಮಾಧಿಯನ್ನು ಹೊಂದಲಾಗಿ ಅವನೊಡನೆ ಅವನ ಹೆಂಡತಿಯೂ ಸಮಾಧಿಯನ್ನು ಹೊಂದಿದಳು. ವರದಾನಿ ಗುಡ್ಡಮ್ಮೆಯು ಅದ್ಭುತವಾದ ಕಾರ್ಯಗಳನ್ನು ಮಾಡುತ್ತ ದೇಶವನ್ನು ಸಂಚರಿಸುತ್ತಾ ಇದ್ದಳು. ಆಗ ಅವಳ ಗಂಡನಾದ ಸಂಗಮನಾಥನು ಅವಳಿಗೆ ಸಹಾಯ ಮಾಡುತ್ತ ಅವಳೊಡನೆ ಇದ್ದನು. ಮಾದರ ಚೆನ್ನಯ್ಯನ ಲಿಂಗಾರ್ಜಿತ ಕಾರ್ಯಗಳಲ್ಲಿ ಅವನ ಹೆಂಡತಿಯು ಅವನಿಗೆ ಯಾವಾಗಲೂ ಅನುಕೂಲಳಾಗಿಯೇ ವರ್ತಿಸಿದ್ದಾಳೆ. ಹಾಗೆಯೇ ಮೊರನ ವೇಮಯ್ಯನ ಹೆಂಡತಿ ಗಂಗಾದೇವಿಯು ವರ್ತಿಸಿದ್ದಾಳೆ. ಅವಳು ತನ್ನ ವಶಕ್ಕೆ ಬಂದ ಬಂಗಾರವನ್ನೆಲ್ಲ ಗಂಡನು ಹೇಳಿದಂತೆ ತಿಪ್ಪೆಯಲ್ಲಿ ಒಗೆದುಬಿಟ್ಟಳು. ಅಗ್ಗವಣಿಯ ಹೊನ್ನಯ್ಯನ ವ್ರತವು ತಪ್ಪಲು ಅವನ ಹೆಂಡತಿಯೂ ಓಲೆಯ ಶಾಂತಯ್ಯನ ಮೊರೆ ಹೋಗಬೇಕೆಂದು ಅವನಿಗೆ ಉಪದೇಶ ಮಾಡಿದಳು. ಅಜಗಣ್ಣ ಮುಕ್ತಾಯಕ್ಕಗಳು ಸಹೋದರ ಸಹೋದರಿಯರು. ಅವರೂ ಒಂದೇ ಮನೆತನದವರಂತೆ ಅಮಿತ ಪ್ರೀತಿಯಿಂದ ಇದ್ದರು. ಇಬ್ಬರೂ ವಚನಕಾರರು. ಇವೆಲ್ಲವೂ ಶಿವಾನುಭವಿಗಳಾದ ಸ್ತ್ರೀಯರ ಉಚ್ಚ ನಡತೆಗಳಾಗಿವೆ. ಶಿವಾನುಭವ ಶಾಸ್ತ್ರವು ಸ್ತ್ರೀಯರಿಗೆ ಉಚ್ಚಸ್ಥಾನವನ್ನು ಕೊಟ್ಟಿದ್ದರಿಂದ ಅವರು ಹೀಗೆ ಶಿವಜ್ಞಾನಿಗಳಾಗಿ ತಮ್ಮ ಪತಿಗಳ ಕೂಡ ಉತ್ತಮ ಗೃಹಿಣಿಯರಾಗಿ ಆಚರಿಸಿದ್ದಾರೆ.

### ವೀರಶೈವ ಸ್ತ್ರೀಯರು ಅವಿವಾಹಿತರಾಗಿ ಉಳಿಯಬಹುದು

ವೀರಶೈವ ಧರ್ಮದ ಪ್ರಕಾರ ಸ್ತ್ರೀಯರು ಪುರುಷರಷ್ಟೇ ಸ್ವಾತಂತ್ರ್ಯವುಳ್ಳವರಿದ್ದಾರೆ. ಅವರಿಗೆ ಲಿಂಗಧಾರಣವಿರುವುದರಿಂದ ಅವರು ತಮ್ಮ ಆಚ

ರಣೆಗಳ ಸಾಮರ್ಥ್ಯದಿಂದಲೇ ಮೋಕ್ಷವನ್ನು ಹೊಂದತಕ್ಕದ್ದು. ಬ್ರಾಹ್ಮಣ ಧರ್ಮದಲ್ಲಿರುವಂತೆ ಅವರು ಮೋಕ್ಷ ಹೊಂದುವಲ್ಲಿ ತಮ್ಮ ಪತಿಗಳ ಕ್ರಿಯೆಗಳ ಮೇಲೆ ಅವಲಂಬಿಸಿರುವ ಕಾರಣವಿಲ್ಲ. ಆದ್ದರಿಂದ ವೀರಶೈವ ಸ್ತ್ರೀಯಳು ಲಗ್ನವಾಗಬೇಕಾಗಬೇಕೆಂಬ ನಿರ್ಬಂಧವಿರುವುದಿಲ್ಲ. ಅವಳು ಲಗ್ನ ಮಾಡಿಕೊಳ್ಳುವುದು ಅವಳ ಇಚ್ಛೆಯ ಮೇಲೆ ಅವಲಂಬಿಸಿರುತ್ತದೆ. ಆದ್ದರಿಂದ ಶಿವಶರಣೆಯರಲ್ಲಿ ಅನೇಕರು ಅವಿವಾಹಿತರಾಗಿ ಉಳಿದಿದ್ದಾರೆ.

ಶಿವಶರಣೆಯಾದ ಅಕ್ಕಮಹಾದೇವಿಯು ಕಡೆಯವರೆಗೂ ಅವಿವಾಹಿತಳಾಗಿ ಉಳಿದಳು. ಬೊಂತಾದೇವಿಯು ಕಾಶ್ಮೀರ ದೇಶದ ರಾಜಕುಮಾರಿಯು. ಅನೇಕರು ಅವಳನ್ನು ವರಿಸಲು ಇಚ್ಛಿಸಿದರು. ಆದರೆ ಅವಳು ಯಾರನ್ನೂ ಲಗ್ನವಾಗದೆ ಕಲ್ಯಾಣ ಪಟ್ಟಣದಲ್ಲಿಯೇ ಅವಿವಾಹಿತಳಾಗಿ ಉಳಿದಳು. ಗೊಗ್ಗವ್ವೆಯ ತಾಯಿ ತಂದೆಗಳು ಅವಳು ಲಗ್ನವಾಗಬೇಕೆಂದು ಬಹಳ ಇಚ್ಛಿಸಿದರು. ಆದರೆ ಅವಳು ಲಗ್ನವಾಗುವುದನ್ನು ನಿರಾಕರಿಸಿ ಕಡೆಯವರೆಗೂ ಹಾಗೆಯೇ ಉಳಿದಳು. ವರದಾನಿ ಗುಡ್ಡಮ್ಮೆಯು ಕಲ್ಯಾಣ ಪಟ್ಟಣದಲ್ಲಿರುವವರೆಗೆ ಲಗ್ನವಾಗದೆ ಇದ್ದಳು. ಆದರೆ ಅವಳು ತನ್ನ ಗ್ರಾಮಕ್ಕೆ ಹೋದಬಳಿಕ ಸಂಗಮನಾಥನೆಂಬುವವನನ್ನು ವರಿಸಿದಳು. ಹೀಗೆ ವೀರಶೈವರಲ್ಲಿ ಸ್ತ್ರೀಯಳು ಲಗ್ನವಾಗುವುದು ಅಥವಾ ಬಿಡುವುದು ಅವಳ ಇಚ್ಛೆಯ ಮೇಲೆ ಇದೆ. ವೀರಶೈವರಲ್ಲಿ ಸ್ತ್ರೀಯರಿಗೆ ಸ್ವತಂತ್ರಾಧಿಕಾರವಿರುವದರಿಂದ ಅವರು ಹೀಗೆ ವರ್ತಿಸಿದಲ್ಲಿ ಯಾವ ದೋಷವೂ ಇರುವುದಿಲ್ಲ.

### ಸ್ತ್ರೀಯರು ಕಾಯಕ ಮಾಡತಕ್ಕದ್ದು

ಶಿವಾನುಭವದ ಪ್ರಕಾರ ಸ್ತ್ರೀಯಳಿಗೆ ಸ್ವತಂತ್ರಾಧಿಕಾರವಿರುವುದರಿಂದ ಕೆಲವೊಂದು ಉದ್ಯೋಗವನ್ನು ಕೈಕೊಂಡು ಅವಳು ಅದರಿಂದ ಉಪಜೀವನವನ್ನು ಹೊಂದತಕ್ಕದ್ದು. ಅಂದರೆ ಹೇಗೆ ಪುರುಷರಿಗೆ ಕಾಯಕದ ತತ್ವಗಳು ಅನ್ವಯಿಸುತ್ತವೆಯೋ ಹಾಗೆಯೇ ಅವು ಸ್ತ್ರೀಯರಿಗೂ ಅನ್ವಯಿಸುತ್ತವೆ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಬಹುಜನ ಶಿವಶರಣೆಯರು ಪುರುಷ

ರಂತೆ ಕೆಲವೊಂದು ಉದ್ಯೋಗವನ್ನು ಕೈಕೊಂಡು ಆದರಿಂದ ಅವರು ಉಪಜೀವನವನ್ನು ಹೊಂದುತ್ತ ದಾಸೋಹಿಗಳಾಗಿ ವರ್ತಿಸಿದ್ದಾರೆ.

ಅಮ್ಮವ್ವೆಯು ಬ್ರಾಹ್ಮಣಿಯು. ಅವಳ ಚಿಕ್ಕ ವಯಸ್ಸಿನಲ್ಲಿಯೇ ಅವಳ ತಂದೆತಾಯಿ ಪತಿಗಳೆಲ್ಲರೂ ತೀರಿಕೊಳ್ಳಲು ಅವಳು ಅನಾಥಳಾದಳು. ಆದರೆ ಅವಳು ಆಗ ಭಿಕ್ಷ ಬೇಡಲಿಲ್ಲ. ಅವಳು ರಾಟಿಯ ಕಾಯಕವನ್ನು ಕೈಕೊಂಡಳು ಪಿಟ್ಟವ್ವೆಯು ಮುದುಕಿಯಾಗಲು ದೋಸೆಗಳನ್ನು ಮಾಡುವ ಕಾಯಕವನ್ನು ಕೈಕೊಂಡಳು. ಕದಿರೆರೆಮ್ಮವ್ವೆಯು ನೂಲುವ ಕಾಯಕವನ್ನು ಕೈಕೊಂಡಳು. ಅಣ್ಣಲದೇವಿಯು ಬೆರಣಿಗಳನ್ನು ಆಯುವ ಕಾಯಕವನ್ನು ಕೈಗೊಂಡಿದ್ದಳು. ಏಲೇರಿಯ ಅಮ್ಮವ್ವೆಯು ಒಕ್ಕಲುತನ ಮಾಡುತ್ತಿದ್ದಳು. ಒಂದು ವೇಳೆ ಇಂಥ ಕಾಯಕಗಳು ಸ್ತ್ರೀಯರ ದೇಹಕ್ಕೆ ಕಷ್ಟಕರವೆನಿಸಿದಲ್ಲಿ ಅವರು ತಮಗೆ ಸುಲಭವಾದ ಬೇರೊಂದು ಜನೋಪಯೋಗಿ ಕಾಯಕವನ್ನು ಮಾಡತಕ್ಕದ್ದು ಆದ್ದರಿಂದ ಸತ್ಯಕ್ಕನು ಶಿವಭಕ್ತರ ಮನೆಗಳಿಗೆ ಹೋಗಿ ಅವುಗಳನ್ನು ಉಡುಗಿ ಸಮ್ಮಾರ್ಜನೆಯನ್ನು ಮಾಡುವಳು. ಇವಳು ವಚನಕಾರಳೂ ಇದ್ದಾಳೆ, ಸೇವಿಕೆ ಗೌರವ್ವೆಯು ಕೂಟಗಳಲ್ಲಿ ಮತ್ತು ಪ್ರಸ್ತಗಳಲ್ಲಿ ಹೋಗಿ ಅಲ್ಲಿಗೆ ಬಂದ ಸ್ತ್ರೀ ಪುರುಷರುಗಳಿಗೆ ದಾರಿಯನ್ನು ತೋರಿಸಿ ಅವರವರ ಸ್ಥಾನಗಳಲ್ಲಿ ಕುಳ್ಳಿರಿಸುವಳು. ತೊಂಗಿನ ಮಹಾದೇವಿಯು ಬೆಳಗಿನಲ್ಲೆದ್ದು ಭಕ್ತರನ್ನು ಎಚ್ಚರಿಸಿ ಅವರವರ ನಿತ್ಯದ ಕಾಯಕಕ್ಕೆ ತೊಡಗಿಸುವಳು. ಹೀಗೆ ಬಸವೇಶ್ವರನ ಕಾಲದಲ್ಲಿ ಸ್ತ್ರೀಯರು ಅನೇಕ ವಿಧವಾದ ಕಾರ್ಯಗಳನ್ನು ಮಾಡಿದ್ದಾರೆ.

ಕೆಲವು ಶಿವಶರಣೆಯರು ವಿದ್ವಾಂಸರಿದ್ದು ಅವರು ತಮ್ಮ ವಿದ್ವತ್ತಿಯ ಉಪಯೋಗವನ್ನು ಇತರರಿಗೆ ಮಾಡಿಕೊಡುವ ಕಾಯಕವನ್ನು ಕೈಕೊಂಡಿದ್ದರು. ಉದಾಹರಣಾರ್ಥವಾಗಿ ವೀರದೇವಮ್ಮನು ಶಿವಾನುಭವ ಶಾಸ್ತ್ರದಲ್ಲಿ ಪಾರಾಂಗತಳಾಗಿ ಶಿವಶರಣರ ನಾನಾವಿಧ ವಚನಗಳನ್ನು ದಿನಾಲು ಮೂರು ಹೊತ್ತು ಸ್ತ್ರೀಯರಲ್ಲಿ ಓದಿ ಹೇಳುವ ಕಾಯಕವನ್ನು ಮಾಡುತ್ತಾ ಇದ್ದಳು. ಇದರಿಂದ ಅವಳಿಗೆ 'ಉಗ್ಗಡಿಸುವ ಕನ್ನೆ ವೀರಾದೇವಿ' ಎಂಬ ಹೆಸರು ಉಂಟಾಗಿತ್ತು. ಶಿವಮಹಾದೇವಿಯು ದಿನಾಲು ಸ್ತ್ರೀಯರಿದ್ದಲ್ಲಿಗೆ ಹೋಗಿ ಶಿವಶರ

ಣರ ಚರಿತ್ರೆಗಳಿದ್ದ ಪುರಾಣಗಳನ್ನು ಓದಿ ಹೇಳುವಳು. ವಿಮಳಾದೇವಿಯು ತನ್ನ ಶಿವಾನುಭವವನ್ನು ಇತರ ಸ್ತ್ರೀಯರಿಗೆ ಬೋಧಿಸಿ ಅವರಿಗೆ ಸುಜ್ಞಾನದೀಕ್ಷೆಯನ್ನು ಕೊಡುವಳು. ಹೀಗೆ ಬಸವೇಶ್ವರರ ಕಾಲದಲ್ಲಿ ಸ್ತ್ರೀಯರು ಅನೇಕ ತರದ ಕಾಯಕಗಳನ್ನು ಕೈಕೊಂಡು ತಮ್ಮ ಮತ್ತು ಸಮಾಜದ ಉದ್ಧಾರವನ್ನು ಮಾಡಿದ್ದಾರೆ.

ಬಹುಜನ ಸ್ತ್ರೀಯರು ಇಂಥ ಕಾಯಕಗಳನ್ನು ಕೈಕೊಳ್ಳದಿದ್ದರೂ ಮನೆಯಲ್ಲಿಯೇ ಇದ್ದುಕೊಂಡು ಮನೆಗೆಲಸಮಾಡುತ್ತ ಶಿವಾನುಭವದಲ್ಲಿ ಇರುವವರಾಗಿದ್ದರು. ಇವರು ಮಾಡುತ್ತಿದ್ದ ಮನೆಗೆಲಸಗಳೂ ಕೂಡ ಕಾಯಕಗಳಲ್ಲಿ ಬರುತ್ತವೆ.

## ಮನೆತನದ ಆಸ್ತಿಯಲ್ಲಿ ಸ್ತ್ರೀಯರಿಗೆ ಭಾಗ

ಸ್ತ್ರೀಯರು ಕಾಯಕಗಳನ್ನು ಮಾಡಿಕೊಂಡು ತಮಗೆ ದೊರೆತದ್ದು ದಾಸೋಹ ಕಾರ್ಯಗಳಿಗೆ ಉಪಯೋಗಿಸತಕ್ಕದ್ದಾದ್ದರಿಂದ ಅವರು ದುಡಿದದ್ದು ಅವರಿಗೆಯೇ ಸಲ್ಲತಕ್ಕದ್ದು. ಇದೇ ಧರ್ಮಾಚರಣೆಗೆ ಸಮ್ಮತವಾದದು. ಅವರು ಎರಡನೆಯವರು ದುಡಿದದ್ದನ್ನು ತಮ್ಮ ದಾಸೋಹಕ್ಕೆ ಉಪಯೋಗಿಸುವುದು ಶಿವಾನುಭವಕ್ಕೆ ವಿರೋಧವಾದುದು. ಆದ್ದರಿಂದ ಸ್ತ್ರೀಯರು ಮನೆತನದಲ್ಲಿದ್ದರೂ ಕೂಡ ಅವರು ಶ್ರಮಪಟ್ಟು ಗಳಿಸಬೇಕು. ಒಂದು ವೇಳೆ ಮನೆತನದಲ್ಲಿದ್ದವರು ಸಾಮೂಹಿಕವಾಗಿ ದುಡಿಯುತ್ತಿದ್ದರೆ ಅದರಲ್ಲಿ ಅವಳು ಅವರಿಗೆ ಸಹಾಯವಾಗಬೇಕು. ಹೀಗೆ ಸಹಾಯವಾಗಿ ಎಲ್ಲರೂ ದುಡಿದದ್ದರಲ್ಲಿ ಅವಳು ತನ್ನ ಭಾಗವನ್ನು ತೆಗೆದುಕೊಂಡು ಅದರ ಮೂಲಕ ದಾಸೋಹ ಕಾರ್ಯಗಳನ್ನು ನಡಿಸತಕ್ಕದ್ದು. ವೀರಶೈವರಾದ ಸ್ತ್ರೀಪುರುಷರು ಸಮಾನಾಧಿಕಾರವುಳ್ಳವರಾದ್ದರಿಂದ ಅವರಿಗೆ ಸಲ್ಲತಕ್ಕ ಈ ಭಾಗವು ಪುರುಷರಿಗಿರುವಷ್ಟೇ ಇರುತ್ತದೆ. ಹೀಗೆ ಹಿಂದಿನ ಕಾಲದಲ್ಲಿ ಶಿವಶರಣರು ಆಚರಿಸಿದ್ದಾರೆ ಆದರೆ ಈ ತತ್ವವು ಬ್ರಾಹ್ಮಣ ಧರ್ಮಶಾಸ್ತ್ರಗಳಲ್ಲಿ ಇರುವ ಸಂಭವವಿಲ್ಲ. ಯಾಕಂದರೆ ಈ ಶಾಸ್ತ್ರಗಳ ಪ್ರಕಾರ ಸ್ತ್ರೀಯರಿಗೆ ಸ್ವತಂತ್ರಾಧಿಕಾರವಿರುವುದಿಲ್ಲ ಆದ್ದರಿಂದ ಅವರಿಗೆ ಮನೆತನದ ಆಸ್ತಿಯಲ್ಲಿ ಭಾಗವು ಸಿಗದೆ ‘ಪೋಟಿಗಿ’ ಮಾತ್ರ

ದೊರೆಯುತ್ತದೆ ಆದರೆ ಶಿವಾನುಭವ ಪ್ರಕಾರ ಸ್ತ್ರೀಯರು ಸ್ವತಂತ್ರಾಧಿಕಾರವುಳ್ಳವರಾಗಿದ್ದರಿಂದ ಅವರಿಗೆ ಮನೆತನದ ಆಸ್ತಿಯಲ್ಲಿ ಸ್ವತಂತ್ರ ಹಿಸೆ ಅಥವಾ ಭಾಗವು ದೊರೆಯುವುದು. ಇದೇ ಶಿವಾನುಭವದ ಸರಿಯಾದ ಆಚರಣೆಯು. ಇದು ಶಿವಶರಣೆಯಾದ ಶಿವಪ್ರಿಯನಾಚಿಯ ಚರಿತ್ರೆಯಿಂದ ತಿಳಿದುಬರುತ್ತದೆ.

ಶಿವಪ್ರಿಯನಾಚಿಯು ಚಂದವೂರು ಎಂಬ ಗ್ರಾಮದವಳು. ಅವಳಿಗೆ ಅಣ್ಣನಾಚಯ್ಯ ಮತ್ತು ಅರುಣಾದ್ರಿ ಎಂಬ ಅಣ್ಣಂದಿರಿದ್ದರು. ಅವರ ತಂದೆಯು ತೀರಿಕೊಂಡಬಳಿಕ ಈ ಮೂವರೂ ಮನೆತನದ ಆಸ್ತಿಯಲ್ಲಿ ಸಮವಾಗಿ ಮೂರು ಭಾಗಗಳನ್ನು ಮಾಡಿಕೊಂಡರು. ಹೀಗಿರುವಲ್ಲಿ ಅಣ್ಣನಾಚಯ್ಯನು ವ್ಯಾಪಾರಕ್ಕೋಸ್ಕರ ಪರದೇಶಕ್ಕೆ ಹೋಗಿ ಅಲ್ಲಿಯೇ ಮೃತನಾದನು. ಆದ್ದರಿಂದ ಅವನು ಬಹಳ ದಿವಸ ತನ್ನ ಗ್ರಾಮಕ್ಕೆ ಬಾರದಿರಲು ಅರುಣಾದ್ರಿಯು ತನ್ನ ತಂಗಿಗೆ ಬಂದ ಪಾಲನ್ನು ಅವಳ ಕಡೆಯಿಂದ ಬಲಾತ್ಕಾರದಿಂದ ಕಸಿದುಕೊಂಡುಬಿಟ್ಟನು. ಆದರೆ ಶಿವಪ್ರಿಯನಾಚಿಯು ಪರಮಾತ್ಮನ ಕೇವಲ ಭಕ್ತಳು. ಅವಳು ತನ್ನ ಕಿರಿಯಣ್ಣನು ಮಾಡಿದ ಅನ್ಯಾಯಕ್ಕೋಸ್ಕರ ಪರಮಾತ್ಮನಲ್ಲಿ ಮೊರೆಯಿಡಲು ಪರಮಾತ್ಮನು ಅಣ್ಣನಾಚಯ್ಯನ ರೂಪಧರಿಸಿಕೊಂಡು ಗ್ರಾಮಕ್ಕೆ ಬಂದು ಶಿವಪ್ರಿಯನಾಚಿಯ ಪಾಲನ್ನು ಅವಳಿಗೆ ಅರುಣಾದ್ರಿಯ ಕಡೆಯಿಂದ ತಿರುಗಿ ಕೊಡಿಸಿದನು. ಹೀಗೆ ಈ ಚರಿತ್ರೆಯು ಇದ್ದು ಇದರಿಂದ ವೀರಶೈವ ಸ್ತ್ರೀಯರಿಗೆ ಮನೆತನದ ಆಸ್ತಿಯಲ್ಲಿ ಸ್ವತಂತ್ರಪಾಲು ಇರುತ್ತದೆಂಬುದು ತಿಳಿದುಬರುತ್ತದೆ.

ಶಿವಶರಣರ ಚರಿತ್ರೆಗಳು ಭಾಗ ೨ರಿಂದ

# ಶ್ರೀ ಹಾನಗಲ್ ಕುಮಾರಸ್ವಾಮಿಗಳವರ ಬಗ್ಗೆ ಕೆಲವು ನೆನಹುಗಳು

ಮುಳಗುಂದದ ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು ಲಿಂಗೈಕ್ಯರಾಗಿ ೧೯೫೯ ಇಸ್ವಿಗೆ ಒಂದನೂರು ವರ್ಷಗಳಾಗುತ್ತ ಬಂದವು. ಈ ಮಹಾನುಭಾವರ ನೆನಹಿಗಾಗಿ ಸ್ಮಾರಕ ಗ್ರಂಥವೊಂದನ್ನು ಪ್ರಕಟಿಸುವ ಯೋಜನೆಯನ್ನು ಪ್ರಕಾಶಕರು ಕೈಕೊಂಡಿದ್ದು ಅತ್ಯಂತ ಸ್ತುತ್ಯವಾಗಿದೆ. ಈ ಗ್ರಂಥದಲ್ಲಿ ನಾನು ಶ್ರೀ ಶಿವಯೋಗಿ ಮಂದಿರದ ಸಂಸ್ಥಾಪಕರಾದ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳವರು ನೆರವೇರಿಸಿದ ಕಾರ್ಯಗಳು ಬಹು ಮುಖ್ಯವಾಗಿವೆ. ಅವುಗಳನ್ನು ನಾನು ಸವಿಸ್ತಾರವಾಗಿ ವಿವೇಚಿಸುವದು ಶಕ್ಯವಿಲ್ಲ. ಇದಕ್ಕೆ ಒಂದು ಸ್ವತಂತ್ರ ದೊಡ್ಡ ಗ್ರಂಥವೇ ಬೇಕಾದೀತು. ಆದ್ದರಿಂದ ನಾನು ನನ್ನ ಲಕ್ಷದಲ್ಲಿ ಈಗ ಉಳಿದ ಹಲಕೆಲವು ವಿಷಯಗಳನ್ನು ಕುರಿತು ಮಾತ್ರ ಇಲ್ಲಿ ನಿರ್ದೇಶಿಸುತ್ತೇನೆ.

ನನಗೆ ಶ್ರೀ ಹಾನಗಲ್ಲು ಕುಮಾರಸ್ವಾಮಿಗಳವರ ಮೊದಲು ಪರಿಚಯು ವಾದುದು ಧಾರವಾಡ ೧ನೇ ವೀರಶೈವ ಮಹಾಸಭೆಯು ಅಧಿನಿವೇಶನದ ಕಾಲದಲ್ಲಿ. ಅದರ ಹಿಂದಿನ ವರುಷ ಅಂದರೆ ೧೯೦೩ ಇಸ್ವಿಯಲ್ಲಿ ಧಾರವಾಡದಲ್ಲಿ ಒಂದು ರಾಜಕೀಯ ಪ್ರಾಂತಿಕ ಪರಿಷತ್ತು ಶ್ರೀಯುತ ಖರೆ ಇವರ ಅಧ್ಯಕ್ಷತೆಯಲ್ಲಿ ಸೇರಿತ್ತು. ಈ ಸಭೆಗೆ ಕೈ. ವಾ. ಬಾಲಗಂಗಾಧರ ಟಿಳಕ, ನಾ. ಗೋಖಲೆ ಮೊದಲಾದ ಅನೇಕ ರಾಜಕೀಯ ಪಟುಗಳು ಆಗಮಿಸಿದ್ದರು. ಈ ಕಾಲದಲ್ಲಿ ಧಾರವಾಡ ಜಿಲ್ಹೆಯಲ್ಲಿಯ ಮುಖ್ಯ ಗ್ರಾಮಗಳಲ್ಲಿಯ ನೂರಾರು ಜನ ವೀರಶೈವ ವ್ಯಾಪಾರಸ್ಥರೂ ವಿದ್ಯಾವಂತರೂ ಕೂಡ ಸೇರಿದ್ದರು. ಅವರೆಲ್ಲರೂ ಇರಲಿಕ್ಕೆ ಒಂದು ವಿಶಾಲವಾದ ಮಂದಿರವನ್ನು ಸತ್ಕಾರಕ ಸಂಘದವರು ಧಾರವಾಡದಲ್ಲಿಯೇ ಏರ್ಪಡಿಸಿದ್ದರು. ಆಗ ನಾಡಿನ ಹಿತಾಹಿತಗಳ ಸಂಬಂಧವಾಗಿ ಚರ್ಚೆಗಳು ಕೂಡಿದ ವೀರಶೈ

ಹರಲ್ಲಿ ಉದ್ಭವಿಸುತ್ತಿದ್ದವು. ಇವುಗಳಲ್ಲಿ ಮುಖ್ಯ ಭಾಗವನ್ನು ವಹಿಸಿದವರು ಶ್ರೀಯುತ ಗದಿಗಯ್ಯ ಹೊನ್ನಾಪುರಮಠ ವಕೀ. ಧಾರವಾಡ, ಬನಹಟ್ಟಿಯ ತಮ್ಮಣ್ಣಪ್ಪ ಸತ್ಯಪ್ಪ ಚಿಕ್ಕೋಡಿ, ಧಾರವಾಡದ ಮುಗಪ್ಪ ಸವದತ್ತಿ ಈ ಮೊದಲಾದವರು ಇರುತ್ತಿದ್ದರು. ಈ ಚರ್ಚೆಗಳ ಪರಿಣಾಮವಾಗಿ ಹೇಗೆ ರಾಜಕೀಯ ಪ್ರಾಂತಿಕ ಪರಿಷತ್ತು ಸೇರಿದೆಯೋ ಹಾಗೆಯೇ ವೀರಶೈವರ ಹಿತಾಹಿತಗಳನ್ನು ವಿಚಾರಿಸಲು ಒಂದು ವೀರಶೈವ ಪರಿಷತ್ತನ್ನು ಸೇರಿಸುವದು ಅಗತ್ಯವೆಂದು ತೋರಿಬಂದಿತು. ಆಮೇಲೆ ಒಂದು ವಾರದಲ್ಲಿಯೇ ಪಟ್ಟಣದಲ್ಲಿಯ ೨೦-೩೦ ಪ್ರಮುಖರ ಒಂದು ಚಿಕ್ಕ ಸಭೆಯನ್ನು ಧಾರವಾಡದಲ್ಲಿ ಸೇರಿಸಲಾಗಿ ಅವರು ವೀರಶೈವ ಮಹಾ ಸಭೆಯನ್ನು ಕೂಡಿಸಬೇಕೆಂದು ನಿರ್ಧರಿಸಿದರು. ಇದರಲ್ಲಿ ವಿಶೇಷ ಪ್ರೋತ್ಸಾಹವನ್ನು ಕೊಟ್ಟವರು ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ಅವರಿಗೆ ಬೆಂಬಲವಾಗಿ ಕೈ. ವಾ. ರೇವಣಸಿದ್ಧಪ್ಪ ಕಿತ್ತೂರ ಕೈ. ವಾ. ಕೊಂಗವಾಡ ಮೊದಲಾದವರು ಇದ್ದರು.

ಮುಂದೆ ಕೆಲವು ದಿವಸಗಳಾದ ಮೇಲೆ ಆರ್ಯ ಸಮಾಜದವರು ಒಂದು ಗುರುಕುಲವನ್ನು ನಾಡಿನಲ್ಲಿ ಸ್ಥಾಪಿಸಿ ಅದಕ್ಕೋಸ್ಕರ ಅದ್ಭುತವಾಗಿ ಪ್ರಯತ್ನ ಮಾಡುತ್ತಿರುವ ವಾರ್ತೆಗಳು ಮತ್ತು ವೃತ್ತ ಪತ್ರಿಕೆಗಳಲ್ಲಿ ಪ್ರಸಿದ್ಧವಾಗಹತ್ತಿದವು. ೧೯೦೭ನೇ ಇಸ್ವಿಯಲ್ಲಿ ಸೊಲ್ಲಾಪುರದಲ್ಲಿ ೩ನೇ ಮಹಾ ಸಭೆಯು ಜರಗಿತು. ಈ ಸಭೆಗೆ ಹಾನಗಲ್ಲ ಮಹಾಸ್ವಾಮಿಗಳವರು ಕಾಲು ಮಾರ್ಗದಿಂದ ಸೊಲ್ಲಾಪುರ ಪಟ್ಟಣಕ್ಕೆ ಆಗಮಿಸಿದರು. ಮಹಾತ್ಮಾಗಾಂಧಿಯವರು ಜನತೆಯಲ್ಲಿ ಒಂದು ಮಹತ್ವದ ಸಂದೇಶವನ್ನು ಬೀರಲು ಪಾದಚಾರಿಗಳಾಗಿ ಹೇಗೆ ಮಾರ್ಗ ಕ್ರಮಣ ಮಾಡುತ್ತಿದ್ದರೋ ಅದೇ ಮೇರೆಗೆ ಹಾನಗಲ್ಲ ಕುಮಾರ ಸ್ವಾಮಿಗಳವರು ತಾವು ಇಳಿದ ಗ್ರಾಮಗಳಲ್ಲೆಲ್ಲ ವೀರಶೈವರಿಗೋಸ್ಕರ ಒಂದು ಗುರುಕುಲವನ್ನು ಒಂದು ಕಡೆಗೆ ಸ್ಥಾಪಿಸಬೇಕೆಂಬ ವಿಚಾರಗಳನ್ನು ವಿಶದಪಡಿಸುತ್ತಲೇ ಬಂದರು

ಮುಂದೆ ೧೯೦೪ರಲ್ಲಿ ಬಾಗಲಕೋಟೆಯಲ್ಲಿ ವೀರಶೈವ ಮಹಾಸಭೆಯು ರಾಜಾ ಲಖಮಗೌಡಾ ಸರದೇಸಾಯಿ ವಂಟಮೂರಿ ಇವರ ಅಧ್ಯಕ್ಷತೆಯಲ್ಲಿ

ನೆರವೇರಿತು. ಈ ಸಭೆಯಲ್ಲಿ ಆದ ನಿರ್ಣಯಗಳಲ್ಲಿ ಶಿವಯೋಗ ಮಂದಿರ ವನ್ನು ಸ್ಥಾಪಿಸಬೇಕೆಂಬ ನಿರ್ಣಯವು ಮಹತ್ವವಾದದ್ದು, ಈ ನಿರ್ಣಯ ವಾದ ಬಳಿಕ ಮರು ವರ್ಷವೇ ಈಗಿನ ಬದಾಮಿಯ ನೆರೆಯಲ್ಲಿ ಮಹಾ ಕೂಟ ಪುಣ್ಯಕ್ಷೇತ್ರಕ್ಕೆ ಸಮೀಪವಾಗಿ ಮಲಾಪಹಾರಿ ನದೀ ತೀರದಲ್ಲಿ ಶಿವಯೋಗ ಮಂದಿರವು ಸ್ಥಾಪಿತವಾಯಿತು.

ಅಂದಿನಿಂದ ಈ ವರೆಗೆ ಈ ಸಂಸ್ಥೆಯ ಮೂಲಕ ವೀರಶೈವ ಅನೇಕ ಮಠಾಧಿಪತಿಗಳೂ ಯೋಗ್ಯ ಶಿಕ್ಷಣವನ್ನು ಹೊಂದಿ ವೀರಶೈವ ಧರ್ಮದ ಮಹತ್ವವನ್ನು ಎಲ್ಲ ಕಡೆಗೂ ಈ ವರೆಗೆಯೂ ಬೀರುತ್ತ ಬಂದಿದ್ದಾರೆ.

ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳವರು ಹೇಗೆ ಧನ ಸಂಚಯ ಮಾಡುತ್ತ ಬಂದರೋ ಹಾಗೆಯೇ ಅವರು ಗ್ರಂಥ ಸಂಚಯವನ್ನು ಸಹ ಮಾಡುತ್ತ ಬಂದರು. ಅವರ ಈ ಕಾರ್ಯವು ಅತ್ಯಂತ ಮಹತ್ವವಾದುದು. ಶ್ರೀ ಸ್ವಾಮಿಗಳವರ ದರ್ಶನ ಹೊಂದಲು ಎಲ್ಲ ಕಡೆಯಿಂದಲೂ ಪ್ರಮುಖ ವ್ಯಕ್ತಿಗಳು ಈ ಮಂದಿರಕ್ಕೆ ಬರುವದು ರೂಢಿಯಾಗಿತ್ತು. ಅದನ್ನು ಶ್ರೀ ಸ್ವಾಮಿಗಳು ಕಂಡು ಅವರ ಗ್ರಾಮದಲ್ಲಿ ತಾಡವೋಲೆಯ ಗ್ರಂಥಗಳು ಇವೆಯೋ ಹೇಗೆ ಎಂಬುದನ್ನು ಪ್ರಶ್ನೆಮಾಡದೇ ಬಿಡುತ್ತಿದ್ದಿಲ್ಲ. ಯಾರಾದರೂ ತಮ್ಮಲ್ಲಿ ಇಂಥ ಗ್ರಂಥಗಳು ಇವೆ ಎಂದು ಅವರು ಉತ್ತರ ಕೊಟ್ಟಲ್ಲಿ ಅವುಗಳನ್ನು ಮಂದಿರಕ್ಕೆ ಕಳಿಸಬೇಕೆಂದು ಶ್ರೀ ಸ್ವಾಮಿಗಳು ತಪ್ಪದೇ ಹೇಳುವರು. ಅವರನ್ನು ಕಾಣಬಂದವರಲ್ಲಿ ಯಾರೂ ತಾವು ಕಳಿಸುವದಿಲ್ಲ ಎಂದು ಅನ್ನುತ್ತಿದ್ದಿಲ್ಲ. ಎಲ್ಲರೂ ಭಕ್ತಿಯಿಂದ ತಮ್ಮಲ್ಲಿಯ ಗ್ರಂಥಗಳನ್ನು ಅವರ ಕಡೆಗೆ ಸಮರ್ಪಿಸುತ್ತಿದ್ದರು. ಈ ಪ್ರಕಾರ ಮಂದಿರದಲ್ಲಿ ವೀರಶೈವ ಗ್ರಂಥಗಳ ಒಂದು ದೊಡ್ಡ ಸಮುದಾಯವು ಸ್ವಲ್ಪ ದಿವಸಗಳಲ್ಲಿ ಉಂಟಾಯಿತು.

ಶ್ರೀ ಸ್ವಾಮಿಗಳವರು ಮಂದಿರದ ಒಂದು ದೊಡ್ಡ ನಿಧಿಯನ್ನು ಕೂಡಿಸಿದ್ದೂ, ಅಲ್ಲಿ ಕಟ್ಟಡಗಳನ್ನು ನಿರ್ಮಾಣ ಮಾಡಿದ್ದೂ ಮಹತ್ವದ ಕಾರ್ಯಗಳೆಂಬುದು ನಿ:ಸಂದೇಹವಾದದ್ದು. ಆದರೆ ಅವುಕ್ಕಿಂತಲೂ ಮಹತ್ವ

ವೆನಿಸಿಕೊಳ್ಳುವ ಗ್ರಂಥಗಳ ಸಂಗ್ರಹ ಮಾಡುವದು ಅಷ್ಟೇ ಶ್ರೇಯಸ್ಕರ ವಾದದ್ದು ಇರುತ್ತದೆ. ಇಂಥ ಗ್ರಂಥಗಳು ಸಮಾಜದಲ್ಲಿ ಇರದಿದ್ದರೆ ಸಂಸ್ಕೃತಿಯು ಬಾಳುವ ಸಂಭವವೇ ಇಲ್ಲ.

ಇದೇ ಕಾಲದಲ್ಲಿ ನಾನು ವಚನಶಾಸ್ತ್ರದ ಉಕ್ತಿಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿದೆನು. ಈ ಸಂಗತಿಯನ್ನು ನಾನು ಸ್ವಾಮಿಗಳವರ ನಿದರ್ಶನಕ್ಕೆ ಆಗಿಂದಾಗ್ಗೆ ತರುತ್ತಿದ್ದೆನು. ಅವರು ಇದನ್ನು ನೋಡಿ ಬಹಳ ಸಂತೋಷಿಸುತ್ತಿದ್ದರು. ಮತ್ತು ನನಗೆ ಅದರಲ್ಲಿ ಪ್ರೋತ್ಸಾಹವನ್ನೂ ಕೊಡುತ್ತಿದ್ದರು.

ಮುಂದೆ ನಾನು 'ವಚನ ಶಾಸ್ತ್ರ ಸಾರ' ಎಂಬ ಗ್ರಂಥವನ್ನು ನಿರ್ಮಾಣ ಮಾಡಿ ಅದರಲ್ಲಿ ನಾಲ್ಕು ವಿಭಾಗಗಳನ್ನು ತಯಾರಿಸಿದ್ದೆನು. ಮೊದಲನೆಯ ಭಾಗವು ಪೂರ್ಣವಾಗಲು ಬಾಗಲಕೋಟೆಯ ಕೆಲಮಹನೀಯರು ಸ್ವಾಮಿಯವರಿಗೆ ಹೇಳಲು ಅವರು ಖುದ್ದಾಗಿ ನಾನಿದ್ದ ಮನೆಯ ಸಮೀಪದಲ್ಲಿ ಸೊನ್ನದ ಶ್ರೀಮಂತ ಗಂಗಪ್ಪ ದೇಸಾಯಿಯವರ ಕಟ್ಟಡವು ಪ್ರಾರಂಭವಾಗಿದ್ದು ಅದೇ ಮನೆಯಲ್ಲಿ ಅವರು ಇಳಿದರು. ಆಗ ನಾನು ವಿಷಮಜ್ವರ ಪೀಡಿತನಾಗಿ ಚೆನ್ನಾಗಿ ಕುಳ್ಳಿರಲಿಕ್ಕೆ ಬರುತ್ತಿದ್ದಿಲ್ಲ. ಆದರೂ ಶ್ರೀ ಸ್ವಾಮಿಗಳು ನನ್ನ ಅನುಕೂಲತೆಗಾಗಿ ಈ ಗೃಹದಲ್ಲಿ ಇಳಿದು ಕೆಲವು ದಿವಸಗಳವರೆಗೆ ನಾನು ಸಂಗ್ರಹಿಸಿದ ಉಕ್ತಿಗಳನ್ನು ನನ್ನ ಕಡೆಯಿಂದ ಓದಿಸಿಕೊಳ್ಳುತ್ತಿದ್ದರು. ಅವುಗಳಲ್ಲಿರುವ ವಚನಗಳಲ್ಲಿಯ ಉಚ್ಚ ವಿಚಾರಗಳು ಸುಂದರ ನುಡಿಗಳು ಇವುಗಳನ್ನು ಕೇಳಿ ಅವರು ಹರ್ಷಿಸುತ್ತಿದ್ದರು. ಮತ್ತು ನನಗೆ ಈ ಗ್ರಂಥವನ್ನು ಅಚ್ಚು ಹಾಕಲಿಕ್ಕೆ ಪ್ರೋತ್ಸಾಹಿಸಿದರು. ಈ ಅಚ್ಚು ಹಾಕುವ ಕಾರ್ಯದಲ್ಲಿ ನನಗೆ ಶ್ರೀಮಂತ ಗಂಗಪ್ಪ ದೇಸಾಯರು ಧನ ಸಹಾಯವನ್ನು ಮಾಡಲು ಒಪ್ಪಿದರು. ಶ್ರೀ ಸ್ವಾಮಿಗಳು ಇದನ್ನು ಕೇಳಿ ಸಂತೋಷ ಪ್ರದರ್ಶನವನ್ನು ಮಾಡಿದರು. ಗ್ರಂಥದ ಮುದ್ರಣವು ಬೆಳಗಾವಿಯಲ್ಲಿ ಮುಗಿದ ಬಳಿಕ ನಾನು ಅದನ್ನು ಅವರಿಗೆ ತಲುಪಿಸಿದೆನು.

ಸ್ವಾಮಿಗಳವರ ಹಸ್ತದಲ್ಲಿ ಈ ಗ್ರಂಥವು ಬಂದ ಬಳಿಕ ಅವರು ತಮ್ಮ ಭೋಜನೋತ್ತರ ಕಾಲದಲ್ಲಿ ಅದರಲ್ಲಿಯ ಶ್ರೇಷ್ಠ ಉಕ್ತಿಗಳನ್ನು

ತಮ್ಮನ್ನು ಕಾಣಲಿಕ್ಕೆ ಬಂದಂಥ ಜನರಿಗೆ ತಿಳಿಸಿ ಹೇಳುವರು. ಈ ಕಾರ್ಯ ವನ್ನು ಅವರು ಬಹುದಿನ ಮಾಡುತ್ತ ಬಂದರು. ಹೀಗೆ ತಾವಷ್ಟೇ ಅಲ್ಲ, ಮಂದಿರಕ್ಕೆ ಬಂದ ಮಠಾಧಿಕಾರಿಗಳಿಗೂ ಶಾಸ್ತ್ರಿಗಳಿಗೂ ಶಿವಶರ ಣರು ಎಂಥ ಮಹತ್ವದ ಕಾರ್ಯವನ್ನು ಮಾಡಿದ್ದಾರೆ ನೋಡಿರಿ ಎಂದು ಅವರಿಗೆ ತಿಳಿಸಿ ಹೇಳುವರು.

ಮುಂದೆ ಶ್ರೀಯುತ ರಂಗರಾವ ದಿವಾಕರ, ಶ್ರೀಯುತ ಬಿ. ಎಂ. ಶ್ರೀಕಂಠಯ್ಯ ಶ್ರೀಯುತ ಎಮ್. ಆರ್. ಶ್ರೀನಿವಾಸಮೂರ್ತಿ ಮೊದಲಾದ ಮಹನೀಯರು ಶಿವಶರಣರ ಬಗ್ಗೆ ಯಾವಾಗಲೂ ಉಚ್ಚತರದ ಲೇಖನ ಗಳನ್ನು ಬರೆಯುವದರಲ್ಲಿ ತೊಡಗಿದರು.

ಹೀಗೆ ಶಿವಶರಣರ ವಚನಗಳನ್ನು ಮೊದಲು ಪ್ರಸಾರ ಮಾಡಿದವರು ಶ್ರೀ ಹಾನಗಲ್ಲ ಕುಮಾರಸ್ವಾಮಿಗಳೇ ಇದ್ದಾರೆ. ಅವರು ಹೋದಲ್ಲೆಲ್ಲ ಶಿವಶರಣರ ವಿಚಾರಗಳು ತಮ್ಮ ಅಧಿಕಾರವಾಣಿಯಿಂದ ಜನರ ಮುಂದೆ ಪ್ರಸ್ತಾಪಿಸಿ ಅವುಗಳನ್ನು ಮುಂದಕ್ಕೆ ತಂದರು.

ಶ್ರೀ ಸ್ವಾಮಿಗಳು ನಿಜಗುಣರ ಶಾಸ್ತ್ರವನ್ನು ಚೆನ್ನಾಗಿ ಪರಿಶೀಲಿಸಿದ ವರಿದ್ದರು. ಈ ಗ್ರಂಥದಲ್ಲಿ ಯೋಗಾಭ್ಯಾಸದ ತತ್ವಗಳು ವಿಸ್ತಾರವಾಗಿ ಬಂದಿರುತ್ತವೆ. ಶಿವಶರಣರ ಗ್ರಂಥಗಳಲ್ಲಿ ಬರುವ ಕ್ಲಿಷ್ಟ ಅಂತರಂಗಿಕ ವಿಚಾರಗಳನ್ನು ಶ್ರೀ ಸ್ವಾಮಿಗಳವರು ಬಹಳ ಹಗುರಾಗಿ ಜನರಿಗೆ ತಿಳಿಸಿ ಹೇಳುವರು. ಇದರಿಂದ ವಚನವಾಙ್ಮಯದ ಮಹತ್ವವು ಅವರಿಗೆ ಚೆನ್ನಾಗಿ ಬಿಂಬಿಸುತ್ತಿತ್ತು. ಮುಂದೆ ಇದರ ಪ್ರಭಾವವು ಬೆಳೆಯುತ್ತಲೇ ಬಂದಿತು. ಈ ಪ್ರಭಾವವು ಬೆಳೆಯುತ್ತ ಇನ್ನೂ ವಿಶಾಲ ಸ್ಥಿತಿಯನ್ನು ಹೊಂದುವ ದರಲ್ಲಿ ಇದೆ. ಇದು ಪೂರ್ಣತೆಗೆ ಬರಲಿಕ್ಕೆ ಇನ್ನೂ ಕೆಲಕಾಲವು ಬೇಕಾಗ ಬಹುದು. ಈ ಮಹತ್ವದ ಕಾರ್ಯವು ಶ್ರೀ ಶಿವಯೋಗ ಮಂದಿರದ ಸ್ಥಾನವಲ್ಲಿಯೇ ಸ್ವಲ್ಪ ಕಾಲದಲ್ಲಿ ಪೂರ್ಣತೆಗೆ ಬರಬಹುದೆಂದು ನಿರೀಕ್ಷಿಸ ಲ್ಪಟ್ಟಿದೆ.

ಶಿವಶರಣರ ವಾಙ್ಮಯದಲ್ಲಿ ಸಂಕುಚಿತ ಭಾವನೆಗಳು ಎಷ್ಟು ಮಾತ್ರವೂ ಇರುವದಿಲ್ಲ. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳಲ್ಲಿ ಯಾವಾಗಲೂ ಶಿವಶರಣರ ಉದಾರ ಭಾವವು ಹೊರ ಹೊಮ್ಮುತ್ತಿತ್ತು. ಅವರನ್ನು ಕಾಣಬಂದವರು ಯಾವ ಜಾತಿಯುವರಿದ್ದರೂ ಅವರನ್ನು ಅವರು ಆದರಿಸದೆ ಇರುತ್ತಿದ್ದಿಲ್ಲ.

ಸ್ವಾಮಿಗಳವರು ಒಕ್ಕಲುತನ, ಪಶು ಸಂಗೋಪನ, ಈ ಮೊದಲಾದ ಕಾರ್ಯಗಳಿಗೆ ಉತ್ತೇಜನ ಕೊಡುತ್ತಿದ್ದರು. ಇಂಥ ಕಾರ್ಯಗಳಲ್ಲಿ ಅವರು ಸ್ವತಃ ಲಕ್ಷ ಹಾಕುತ್ತಿದ್ದರು. ಮಂದಿರಗಳಲ್ಲಿ ಅನೇಕ ಜನ ವಟುಗಳು ಇರುತ್ತಿದ್ದರು. ಅವರೆಲ್ಲರಿಗೆ ಧಾರ್ಮಿಕ ಶಿಕ್ಷಣ ಕೊಡಲಿಕ್ಕೆ ಅವರು ತಕ್ಕ ಏರ್ಪಾಡುಗಳನ್ನು ಮಾಡಿದ್ದರು. ಹೀಗೆ ಶಿಕ್ಷಣಹೊಂದಿದವರಲ್ಲಿ ಅನೇಕರು ನಾಡಿನಲ್ಲಿ ಇದ್ದು ಅವರು ಈಗ ಉಚ್ಚ ಪೀಠಗಳಿಗೆ ಅಧಿಕಾರಿಗಳಾಗಿದ್ದಾರೆ. ಇವರು ಯಾವಾಗಲೂ ಸಮಾಜ ಸೇವೆಯಲ್ಲಿರುವದು ಕಂಡು ಬರುತ್ತದೆ.

ಸ್ವಾಮಿಗಳವರು ಇಂಗ್ಲೀಷ ಭಾಷೆಯು ಪರಕೀಯ ಭಾಷೆಯೆಂದು ತಿಳಿದು ಎಂದೂ ಅದನ್ನು ತಿರಸ್ಕರಿಸಲಿಲ್ಲ. ಮಂದಿರದಲ್ಲಿ ಇಂಗ್ಲೀಷ ಸಹ ಶಿಕ್ಷಣಕ್ಕೋಸ್ಕರ ಅವರು ಕೆಲವು ಕಾಲ ಒಂದು ಶಾಲೆಯನ್ನು ಸ್ಥಾಪಿಸಿದ್ದರು.

ಅವರು ಸಾಕಷ್ಟು ನಿಧಿ ಕೂಡಿದ ಕೂಡಲೇ ಬಾಗಲಕೋಟೆಯಲ್ಲಿ ಒಂದು ಕಾರ್ಯಾಲಯವನ್ನು ಅಥವಾ ಗಿರಿಣಿಯನ್ನು ಸ್ಥಾಪಿಸಿದರು, ಅವರು ಮಂದಿರದ ಸುತ್ತಲೂ ಕೃಷಿಯನ್ನು ಹೆಚ್ಚಿಸಿದರು. ಧಾರ್ಮಿಕ ವಿಧಿ ವಿಧಾನಗಳು ಸರಿಯಾಗಿ ನಡೆಯಬೇಕೆಂದು ಯೋಗ್ಯ ವ್ಯವಸ್ಥೆಮಾಡಿದರು. ಅವರ ಈ ಎಲ್ಲ ಯೋಜನೆಗಳು ಈಗಲೂ ಉತ್ತಮ ಸ್ಥಿತಿಯಲ್ಲಿ ಇರುತ್ತವೆ.

ಶ್ರೀ ಸ್ವಾಮಿಗಳವರು ಮೇಲೆ ಹೇಳಿದ ಪ್ರಕಾರ ಕಾರ್ಯಮಾಡುತ್ತ ಇಹಲೋಕವನ್ನು ತ್ಯಜಿಸಿದರು. ಆದರೂ ಅವರ ತರುವಾಯ ಶ್ರೀ ಹಾಲ

ಕಿರೆ ಮಹಾಸ್ವಾಮಿಗಳು ಈಚೆಗೆ ಹಾನಗಲ್ಲ ಮಠಕ್ಕೆ ಪಟ್ಟವೇರಿದ ಹಾನಗಲ್ಲ ಮಹಾ ಸ್ವಾಮಿಗಳು ಮಂದಿರದ ವ್ಯವಸ್ಥೆಯನ್ನು ಚೆನ್ನಾಗಿ ಇಟ್ಟಿರುವದು ಶ್ಲಾಘನೀಯವಾಗಿದೆ. ಅವರು ಉತ್ತಮ ರೀತಿಯಿಂದ ಮಂದಿರವನ್ನು ನಡಿಸುತ್ತ ಬಂದಿದ್ದಾರೆ. ಅವರ ಈ ಕಾರ್ಯಗಳು ಇನ್ನೂ ಹೆಚ್ಚಾಗಿ ಬೆಳೆಯುವಂತೆ ಬಸವಾದಿ ಪ್ರಮಥರು ಸಹಾಯಕರಾಗುವರೆಂದು ನಾನು ಭರವಸೆ ತಾಳಿರುವೆ.

# ಕರ್ನಾಟಕ ಏಕೀಕರಣ

ನಾನು ಈವರೆಗೆ ವಿವರಿಸಿದ ವಿಷಯಂಗಳಲ್ಲಿ ಅನೇಕವುಗಳು ಸರಕಾರಕ್ಕೆ ಸಂಬಂಧಪಟ್ಟವುಗಳಿದ್ದು ಅವುಗಳ ಮೇಲಿಂದ ಕರ್ನಾಟಕಸ್ಥರ ಹಿತವು ಎಷ್ಟು ದುರ್ಲಕ್ಷಿಸಲ್ಪಡುತ್ತ ಬಂದಿತೆಂಬುದು ಗೊತ್ತಾಗದೆ ಇರದು. ಸರಕಾರದವರು ಕರ್ನಾಟಕಸ್ಥರ ಸಾಂಪತ್ತಿಕ, ಶೈಕ್ಷಣಿಕ ಮೊದಲಾದ ವಿಷಯಗಳ ಸಲುವಾಗಿ ಯಾವ ಸೌಕರ್ಯಗಳನ್ನೂ ಒದಗಿಸಿಕೊಟ್ಟಿಲ್ಲ. ಈ ಸ್ಥಿತಿಯು ಮದ್ರಾಸ ಮುಂಬಯಿ ಇಲಾಖೆಗಳು ಕೊಡಗು ಪ್ರಾಂತ ಈ ಯಾವತ್ತು ಪ್ರಾಂತಗಳಲ್ಲಿ ಇದ್ದದ್ದು ಕಂಡುಬರುತ್ತದೆ. ಆದ್ದರಿಂದ ಕರ್ನಾಟಕವನ್ನು ಒಂದು ಸ್ವತಂತ್ರ ಪ್ರಾಂತಿಕ ವಿಭಾಗವನ್ನಾಗಿ ಮಾಡದ ವಿನಃ ಅದರ ಅಭ್ಯುದಯವು ಆಗಲಾರ ದೆಂದು ಪ್ರತಿಯೊಬ್ಬ ಕರ್ನಾಟಕಸ್ಥನಿಗೆ ಮನವರಿಕೆಯಾಗಿದೆ. ಒಟ್ಟಿಗೆ ಕರ್ನಾಟಕ ಏಕೀಕರಣ ವಿಷಯವು ಅವನಿಗೆ ಒಂದು ಜೀವಾಳದ ಪ್ರಶ್ನೆ ಯಾಗಿದೆ.

ಇನ್ನು ಮುಂದೆ ಹೊಸ ರಾಜ್ಯ ವ್ಯವಸ್ಥೆಯಲ್ಲಿ ಪ್ರಾಂತಿಕ ಪೂರ್ಣ ಸ್ವಾಯುತ್ತತೆಯು ಕೊಡಲ್ಪಡುವದೆಂದು ಸರಕಾರದಿಂದ ಅಭಿವಚನವು ಕೊಡ ಲ್ಪಟ್ಟಿದೆ. ಈ ಪಕ್ಷದಲ್ಲಿ ಅಲ್ಪಸಂಖ್ಯಾಕರಾದ ಕರ್ನಾಟಕಸ್ಥರು ಈ ಎಲ್ಲ ಇಲಾಖೆಗಳಲ್ಲಿ ಹಿಂದೆ ದಬ್ಬಲ್ಪಡುವರೆಂದು ಅವರಿಗೆ ಸಂಪೂರ್ಣ ಭೀತಿಯು ತ್ಪನ್ನವಾಗಿದೆ. ಅವರ ಪ್ರಾಂತದ ಹಿತಗಳು ಬಹು ಸಂಖ್ಯಾಕರಾದ ಉಳಿ ದವರಿಂದ ಏನೂ ನೋಡಲ್ಪಡಲಾರವೆಂದು ಅವರಿಗೆ ತೋರಹತ್ತಿವೆ. ಈ ಸ್ಥಿತಿಯಲ್ಲಿ ಕರ್ನಾಟಕ ಏಕೀಕರಣ ಪ್ರಶ್ನವು ಮತ್ತಿಷ್ಟು ಪ್ರಬಲವಾಗಿ ಅವರ ಮುಂದೆ ಬಂದು ನಿಂತಿದೆ. ಹಿಂದುಸ್ಥಾನದಲ್ಲಿ ಭಾಷಾನುಗುಣ ಪ್ರಾಂತ ರಚನೆಗೋಸ್ಕರ ಮೊದಲು ಚರ್ಚೆಯನ್ನು ಎತ್ತಿದವರು ಕರ್ನಾಟಕಸ್ಥರು. ಈ ಬಗ್ಗೆ ಅವರು ಮುಂದಿನಿಂದಲೂ ತಮ್ಮ ಬೇಡಿಕೆಗಳನ್ನು ಮುಂದುವರಿಸುತ್ತ ಬಂದಿದ್ದಾರೆ. ಈ ವಿಷಯವು ಆಯಾ ಕೌನ್ಸಿಲುಗಳಲ್ಲಿ ಚರ್ಚಿಸಲ್ಪಟ್ಟದ್ದಾಗಿದೆ ಆಗ ಅವರ ಅಧಿಕೃತ ಜವಾಬುದಾರೀ ಪ್ರತಿನಿಧಿಗಳು ಈ ಅವರ ಬೇಡಿಕೆಗೆ

ಪೂರ್ಣ ಬೆಂಬಲಕೊಟ್ಟಿರುವರು. ಹೀಗಿದ್ದರೂ ಸರಕಾರದವರು ಜನರಲ್ಲಿ ಈ ಬಗ್ಗೆ ಚಳವಳಿ ಏನೂ ಇಲ್ಲೆಂದು ಅಭಿಪ್ರಾಯಪಟ್ಟಿದ್ದು ಅವರು ಹೀಗೆ ಬುದ್ಧ್ಯಾ ಅಂಥ ವೃತ್ತಿಯನ್ನು ಸ್ವೀಕರಿಸುವರೆಂದು ತಿಳಿಯಲು ಆಸ್ಪದ ವಾಗಿದೆ. ಸಾಯಮನ್ನ ಕಮೀಶನ್, ವರ್ತುಳ ಪರಿಷತ್ತು ಇವುಗಳ ಮುಂದೆ ಕರ್ನಾಟಕಸ್ಥರು ಏಕಮುಖವಾಗಿ ತಮ್ಮ ಬೇಡಿಕೆಯನ್ನು ಮುಂದೆ ಇಟ್ಟರು. ಹೀಗಿದ್ದರೂ ಯಾವ ಸಿಂಧ, ಓಡಿಸಾ ಪ್ರಾಂತಗಳು ತಮ್ಮ ಚಳುವಳಿಯನ್ನು ಈಚೆಗೆ ಮಾತ್ರ ನಡೆಸಿದ್ದರೂ ಕೂಡ ಅವುಗಳಿಗೆ ಸ್ವತಂತ್ರ ಪ್ರಾಂತವು ದೊರೆಯಬೇಕು. ಆದರೆ ಕರ್ನಾಟಕಕ್ಕೆ ದೊರೆಯಬಾರದು ಎಂಬುದು ಪ್ರತಿಯೊಬ್ಬ ಕರ್ನಾಟಕಸ್ಥನ ಮನಸ್ಸಿಗೆ ಅತ್ಯಂತ ನೋವನ್ನುಂಟು ಮಾಡಿರುತ್ತದೆ. ಸಿಂಧ ಪ್ರಾಂತಕ್ಕಿಂತಲೂ ಕರ್ನಾಟಕಕ್ಕೆ ಹೆಚ್ಚಿನ ಹಕ್ಕುಗಳು ಮತ್ತು ಹೆಚ್ಚಿಗೆ ಅನುಕೂಲ ಪರಿಸ್ಥಿತಿಯು ಇವೆ. ಹೀಗಿದ್ದರೂ ಕರ್ನಾಟಕಕ್ಕೆ ಸ್ವತಂತ್ರ ಪ್ರಾಂತ ದೊರೆಯದೆ ಇದ್ದದ್ದು ಅತ್ಯಂತ ಅನ್ಯಾಯವಾಗಿರುತ್ತದೆ.

ಸಭ್ಯಗೃಹಸ್ಥರೇ ಈ ಕಾಲಕ್ಕೆ ಪ್ರತಿಯೊಬ್ಬ ಕನ್ನಡಿಗನು ಎಚ್ಚತ್ತು ಈ ಕಾರ್ಯದ ಬಗ್ಗೆ ಮತ್ತಿಷ್ಟು ಬಲವಾದ ರೀತಿಯಿಂದ ಚಳುವಳಿಯನ್ನು ಮಾಡುವ ಪ್ರಸಂಗವು ಒದಗಿರುತ್ತದೆ. ಕರ್ನಾಟಕಸ್ಥರಿಗೆ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕಾದರೆ ಅವರಿಗೆ ತಮ್ಮ ನಾಡು ಕೆರೆ ಕಾಲುವೆಗಳಿಂದ ತುಂಬಿಕೊಂಡು ಸಮೃದ್ಧ ಸ್ಥಿತಿಯನ್ನು ಹೊಂದಬೇಕಾದರೆ ಕರ್ನಾಟಕದ ವ್ಯಾಪಾರವು ಹೆಚ್ಚಿ ಅದರ ಬಂದರುಗಳು ಬೆಳೆಯಬೇಕಾದರೆ ಅವರ ಪ್ರಾಂತದ ಸ್ವಾಯತ್ತತೆಯು ಅವರಿಗೆ ದೊರೆಯದ ವಿನಹಾ ಅವರ ಉದ್ದೇಶಗಳು ಎಂದಿಗೂ ಸಫಲವಾಗಲಾರವು. ಈ ವಿಷಯವಾಗಿ ಕರ್ನಾಟಕದಲ್ಲಿ ಐಕಮತ್ಯವಿದೆ. ಕರ್ನಾಟಕಸ್ಥನು ಬೇಕಾದ ಜಾತಿಯವನಿರಲಿ, ಬೇಕಾದ ಪಕ್ಷದವನಿರಲಿ ಅವನು ಕರ್ನಾಟಕ ಏಕೀಕರಣವನ್ನು ಪ್ರಬಲವಾಗಿ ಬಯಸುತ್ತಾನೆ. ಹೀಗಿದ್ದರೂ ಸರಕಾರದವರು ಇದನ್ನು ದುರ್ಲಕ್ಷಿಸುತ್ತಿರುವದನ್ನು ಪ್ರತಿಯೊಬ್ಬ ಕರ್ನಾಟಕಸ್ಥನು ನಿಷೇಧಿಸದೆ ಇರನು.

### ಚಳವಳಿಯ ಅವಶ್ಯಕತೆ

ಇನ್ನು ಮುಂದೆ ಕರ್ನಾಟಕಸ್ಥರು ಒಂದು ಕ್ಷಣವನ್ನೂ ಬಿಡದೆ ಎಡೆಬಿಡದೆ ಈ ಚಳವಳಿಯನ್ನು ನಡಿಸುವ ಪ್ರಸಂಗವು ಒದಗಿದೆ. ಇದಕ್ಕೋಸ್ಕರ

ಅವರು ಸಿದ್ಧರಾಗಬೇಕು. ಇಡೀ ಹಿಂದುಸ್ತಾನವು ಮತ್ತು ಇಂಗ್ಲಂಡವು ಕರ್ನಾಟಕದ ಈ ಬೇಡಿಕೆಯನ್ನು ತಿಳಿಯಬೇಕಾಗಿದೆ. ಇದಕ್ಕೋಸ್ಕರ ಮತ್ತು ಕರ್ನಾಟಕದ ಹಿತರಕ್ಷಣೆಗೋಸ್ಕರ ಇಂಗ್ಲೀಷ ಭಾಷೆಯಲ್ಲಿ ಒಂದು ಸ್ವತಂತ್ರ ಪತ್ರಿಕೆಯನ್ನು ಹೊರಡಿಸುವದು ಅವಶ್ಯವೆಂದು ನನಗೆ ತೋರುತ್ತದೆ. ಇದರ ಸಿದ್ಧತೆಯನ್ನು ಕರ್ನಾಟಕಸ್ಥರು ಬೇಗನೆ ಮಾಡಬೇಕು.

### ಪಾರ್ಲಮೆಂಟರಿ ಜಾಯಿಂಟ ಕಮಿಟಿಯ ಮುಂದೆ ಸಾಕ್ಷಿ

ಈಗ ಇಂಗ್ಲಂಡಿನಲ್ಲಿ ಪಾರ್ಲಮೆಂಟಿನ ಜಾಯಿಂಟ ಸಿಲೆಕ್ಟ ಕಮೀಟಿಯು ನಡೆದಿರುತ್ತದೆ. ಕರ್ನಾಟಕಸ್ಥರು ತಮ್ಮ ಬೇಡಿಕೆಯನ್ನು ಇದರ ಮುಂದೆ ಇಡಬೇಕು.

### ಸುಧಾರಣಾ ಕಾಯದೆಯಲ್ಲಿ ತಕ್ಕ ಯೋಜನೆ

ಹೊಸ ಸುಧಾರಣಾ ಕಾಯದೆಯಲ್ಲಿ ಭಾಷಾನುಗುಣ ಪ್ರಾಂತ ರಚನೆಗೆ ಮುಂದೆ ಇಂಬುದೊರೆಯುವಂತೆ ಅದರ ಯೋಜನೆ ಇರತಕ್ಕದ್ದು. ಅಂದರೆ ಹೊಸ ಪ್ರಾಂತಗಳನ್ನು ಮಾಡಲಿಕ್ಕೆ ಬರುವಂತೆ ಅದರಲ್ಲಿ ತಕ್ಕ ನಿಯಮ ಗಳು ಇರತಕ್ಕದ್ದು. ಹೀಗಾಗುವಂತೆ ಪ್ರಯತ್ನಿಸಬೇಕು.

### ಮುಂದಿನ ಚಳವಳಿಗೋಸ್ಕರ ಸಿದ್ಧತೆ

ಸುಧಾರಣೆಯ ಹೊಸ ಯೋಜನೆಯು ಪ್ರಕಟವಾದ ಕೂಡಲೆ ಅದರಲ್ಲಿ ನಿರ್ದೇಶನಮಾಡಿದ ಪ್ರಕಾರ ಕರ್ನಾಟಕಸ್ಥರು ತಮ್ಮ ಪ್ರಾಂತನಿರ್ಮಾಣದ ಸಲುವಾಗಿ ತೀವ್ರತರವಾದ ಚಳವಳಿಯನ್ನು ಆರಂಭ ಮಾಡುವದಕ್ಕೋಸ್ಕರ ಸನ್ನದ್ಧರಾಗತಕ್ಕದ್ದು.

### ಉಪಚಳವಳಿಗಳು

ಈ ಪ್ರಕಾರ ಚಳವಳಿ ಮಾಡುವ ಪ್ರಸಂಗದಲ್ಲಿ ಇದಕ್ಕೆ ಸಹಾಯಕ ವಾಗುವಂಥ ಕೆಲವು ಉಪಚಳವಳಿಗಳು ಇದ್ದು ಅವುಗಳಲ್ಲಿಯೂ ನಾವು ಈಗಿನಿಂದಲೇ ತೊಡಗಬೇಕು. ಉದಾಹರಣಾರ್ಥವಾಗಿ (ಅ) ಕರ್ನಾಟಕದ ಯಾವ ಪ್ರದೇಶದಲ್ಲಿ ಸರಕಾರೀ ದಪ್ತರಗಳಲ್ಲಿ ಅಥವಾ ಶಾಲೆಗಳಲ್ಲಿ ಕನ್ನಡ ಭಾಷೆಗೆ ಸ್ಥಾನವಿಲ್ಲವೋ ಅಲ್ಲಿ ಆ ತರದ ಅನುಕೂಲತೆಗಳನ್ನು ದೊರಕಿಸುವ

ಸಲುವಾಗಿ ನಾವು ಪ್ರಯತ್ನಿಸಹತ್ತಬೇಕು. (ಬ) ಕರ್ನಾಟಕ ಪ್ರಾಂತಗಳು ಪರಸ್ಪರ ಹೆಚ್ಚಿಗೆ ಸಂಬಂಧಪಡುವಂತೆ ತಕ್ಕ ರೇಲ್ವೆ ಮಾರ್ಗಗಳನ್ನು ಕಲ್ಪಿಸಲು ಪ್ರಯತ್ನಮಾಡ ಹತ್ತಬೇಕು. (ಕ) ಬೇರೆ ಭಾಷೆಗಳನ್ನಾಡುವ ಜಿಲ್ಲೆಗಳಲ್ಲಿ ಕನ್ನಡ ಹಳ್ಳಿಗಳು ಸೇರಿದ್ದರೆ ಅವುಗಳನ್ನು ಆ ಭಾಗಗಳಿಂದ ವಿಂಗಡಿಸಿ ಸಮೀಪದ ಕನ್ನಡ ಜಿಲ್ಲೆಗಳಿಗೆ ಕೂಡಿಸಬೇಕು, ಈ ಬಗೆಯ ಪ್ರಯತ್ನಗಳಿಗೆ ನಾವು ಈಗಲೇ ತೊಡಗಬೇಕು. ಇತ್ಯಾದಿ.

## ಕರ್ನಾಟಕ ಏಕೀಕರಣ ಸಂಘದ ಪುನರ್ಘಟನೆ

ನಮ್ಮ ಪ್ರಾಂತದಲ್ಲಿರುವ ಎಲ್ಲ ಪಕ್ಷಗಳ ಪ್ರತಿನಿಧಿಗಳುಳ್ಳ ಒಂದು ಮಾಧ್ಯವರ್ತಿ ಯೋಗ್ಯ ಏಕೀಕರಣ ಸಂಘವನ್ನು ಪುನಃ ಸ್ಥಾಪಿಸಿ ಮೇಲ್ಕಂಡ ಎಲ್ಲ ಕಾರ್ಯಗಳನ್ನು ಹೆಚ್ಚಿಗೆ ಬಲವಾಗಿ ಸಾಗಿಸಬೇಕು. ಮತ್ತು ಈ ಮುಖ್ಯ ಸಂಘಕ್ಕೆ ಜೋಡಿಸಿ ಎಲ್ಲ ಕಡೆಗೆ ಉಪಸಂಘಗಳನ್ನು ಸ್ಥಾಪಿಸಬೇಕು.

ಈ ಪ್ರಕಾರ ನನಗೆ ತೋರಿದ ಕೆಲವು ಸೂಚನೆಗಳನ್ನು ತಮ್ಮ ಮುಂದೆ ಇಟ್ಟಿದ್ದೇನೆ.

(೧೯೩೩ ರಲ್ಲಿ ಧಾರವಾಡದಲ್ಲಿ ಜರುಗಿದ ಅಖಿಲಭಾರತ ವೀರಶೈವ ಮಹಾಸಭೆ ಅಧ್ಯಕ್ಷಸ್ಥಾನದಿಂದ ಮಾಡಿದ ಭಾಷಣದಿಂದ)

# ಗ್ರಾಮಸೇವೆಯ ಕಾರ್ಯಗಳು

ನಾವು ಮಾಡತಕ್ಕ ಕಾರ್ಯಗಳಲ್ಲಿ "ಸಮಾಜ ಸೇವೆ"ಗೆ ಮಹತ್ತರ ಸ್ಥಾನವನ್ನು ಕೊಡುವದು ಅವಶ್ಯವಿದೆ. ಈ ತರದ ಕಾರ್ಯಗಳು ಅನೇಕ ವಿದ್ದು ಅವುಗಳಲ್ಲಿ ಹಳ್ಳಿಗಳ ಸುಧಾರಣೆಯೇ ಮುಖ್ಯವಾದುದು. ನಮ್ಮ ರಾಷ್ಟ್ರದ ಮತ್ತು ನಮ್ಮ ವೀರಶೈವ ಸಮಾಜದ ನಿಜವಾದ ಏಳ್ಗೆಯು ಇದರ ಮೇಲೆಯೇ ಅವಲಂಬಿಸಿರುತ್ತದೆ. ಆದರೆ ಈ ಕಾರ್ಯವನ್ನು ಮಾಡುವವರು ಮಾತ್ರ ಬಹಳ ವಿರಳ. ಯಾಕೆಂದರೆ ಇದಕ್ಕೆ ಬಹಳ ಶ್ರಮ ಹತ್ತುತ್ತದೆ. ಎಡೆಬಿಡದೆ ಪ್ರಯತ್ನ ಮಾಡಬೇಕಾಗುತ್ತದೆ. ಮತ್ತು ಮಾಡಿದ ಶ್ರಮಕ್ಕೆ ಫಲವು ಕೂಡಲೇ ಸಿಗುವದಿಲ್ಲ. ದೀನರೊಡನೆ ಅಜ್ಞಾನಿಗಳೊಡನೆ ಬೆರೆದು ಅವರೇ ತಾನಾಗಿ ದುಡಿಯಬೇಕಾಗುತ್ತದೆ ಅಂದ ಬಳಿಕ ಇಂಥ ಕಾರ್ಯಗಳಿಗೆ ಜನರು ಹ್ಯಾಗೆ ಒಪ್ಪಬೇಕು ?

ಆದರೆ ನಮ್ಮ ನಾಡಿನ ದೃಢತೆಯನ್ನು ನೆಲೆಗೊಳಿಸಬೇಕಾದರೆ ಇಂಥ ಗ್ರಾಮಸೇವಾ ಕಾರ್ಯಗಳನ್ನು ನಾವು ಮೊದಲು ಪ್ರಾರಂಭಿಸಲೇ ಬೇಕು. ನಮ್ಮ ದೇಶದ ಸಾಂಪತ್ತಿಕ ಅಭಿವೃದ್ಧಿಯು ಗ್ರಾಮಗಳ ಸಾಂಪತ್ತಿಕ ಅಭಿವೃದ್ಧಿಯ ಮೇಲೆ ಅವಲಂಬಿಸಿರುತ್ತದೆ. ಈಗ ದೊಡ್ಡ ದೊಡ್ಡ ಪಟ್ಟಣಗಳು ಎಲ್ಲ ಕಡೆಗೂ ಹೆಚ್ಚೆಚ್ಚು ಪ್ರಬಲವಾಗುತ್ತ ನಡೆದದ್ದು ತೋರ ಬಹುದು. ಅವು ಆಧುನಿಕ ಕಾಲದ ವಿಲಾಸದ ಸೌಕರ್ಯಗಳಿಂದ ಶೋಭಾಯಮಾನವಾಗಿ ಕಂಗೊಳಿಸುತ್ತಿರಬಹುದು. ಆದರೆ ಎಲ್ಲಿಯ ವರೆಗೆ ನಮ್ಮ ಗ್ರಾಮಗಳಲ್ಲಿ ದಾರಿದ್ರ್ಯವು ಮತ್ತು ದುರವಸ್ಥೆಯು ಮನೆಮಾಡಿಕೊಂಡಿರುತ್ತವೋ ಅಲ್ಲಿಯ ವರೆಗೆ ಈ ಪಟ್ಟಣಗಳ ಹೊಳಪು ಯಾವ ಕ್ಷಣಕ್ಕೆ ಹಾರಿಹೋಗುವದೆಂಬುದನ್ನು ಹೇಳಲಿಕ್ಕೆ ಬರಲಾರದು.

ಸಭ್ಯಗ್ರುಹಸ್ಥರೇ, ಉತ್ತಮ ಕಾಯದೆ ಅಥವಾ ಉತ್ತಮ ರಾಜ್ಯ ಯೋಜನೆ ಇವುಗಳ ಮೇಲೆ ದೇಶದ ಅಭ್ಯುದಯವು ನೆಲಸಿಲ್ಲ. ಇಂಥ ಯೋಜನೆ

ಗಳು ಅತ್ಯುತ್ತಮವಾಗಿರಬಹುದು. ಆದರೆ ಇಷ್ಟರ ಮೇಲಿಂದ ಬಹುಜನ ಸಮಾಜವು ಸುಖಿಯಾಗಿದೆ ಎಂದು ಹೇಳಲಿಕ್ಕೆ ಬರಲಾರದು. ಉದಾಹರಣಾರ್ಥವಾಗಿ ನಮ್ಮ ದೇಶವನ್ನೇ ತೆಗೆದುಕೊಳ್ಳಿರಿ. ಹಿಂದುಸ್ಥಾನದ ಮೇಲೆ ಪರಚಕ್ರಗಳ ಭಯಂಕರ ದಾಳಿಗಳು ಆಗಿಂದಾಗ್ಗೆ ಹಾಯ್ದು ಹೋದವು. ಇಲ್ಲಿ ಸ್ಥಿರವಾದ ರಾಜ್ಯಗಳು ಬಹಳ ದಿವಸ ಬಾಳದೆ ನಾಶವಾಗಿ ಹೋಗುತ್ತಿದ್ದವು. ಆದರೆ ನಮ್ಮ ಗ್ರಾಮಗಳಲ್ಲಿಯ ಗ್ರಾಮ ವ್ಯವಸ್ಥೆಯು ಚೆನ್ನಾಗಿ ಇದ್ದದರಿಂದ ನಮ್ಮ ದೇಶದಲ್ಲಿ ಸುಸ್ಥಿತಿಯು ಇತ್ತು. ಅದರ ಸಂಸ್ಕೃತಿಯು ಅಚ್ಚಳಿಯದೆ. ಉಳಿಯಿತು. ಆದರೆ ಬ್ರಿಟಿಷರ ಶಾಂತವಾದ ಆಳಿಕೆಯಲ್ಲಿ ಆಧುನಿಕ ಸುಧಾರಣೆಯು ಹೊಳಪು ದೇಶದಲ್ಲೆಲ್ಲ ಪಸರಿಸಿದ್ದರೂ ನಮ್ಮ ಗ್ರಾಮಗಳ ಸ್ಥಿತಿಯು ಸುಧಾರಿಸುತ್ತದೆಂದು ಹೇಳಲಿಕ್ಕೆ ಬರಲಾರದು. ಬ್ರಿಟಿಶರ ಕಟ್ಟಳೆ ಕಾನೂನುಗಳ ಮೂಲಕ ಅವುಗಳ ವ್ಯವಸ್ಥೆಯು ಕೆಟ್ಟಿರುತ್ತದೆ. ದಾರಿದ್ರ್ಯವು ಮನೆಮಾಡಿಕೊಂಡಿರುತ್ತದೆ. ಜನರ ಆಯುಷ್ಯಕ್ರಮವು ಅತ್ಯಂತ ಹೀನತರದ್ದಾಗಿರುತ್ತದೆ. ಇನ್ನೂ ಜನರು ಅತ್ಯಂತ ಅಜ್ಞಾನಾವಸ್ಥೆಯಲ್ಲಿರುವರು. ಧರ್ಮಮೂಢತೆಯು ಇನ್ನೂ ಪ್ರಬಲವಾಗಿ ವಾಸಿಸಿರುತ್ತದೆ. ಈ ಸ್ಥಿತಿಯ ಮೂಲಕ ಒಳಜಗಳಗಳು ಹೆಚ್ಚುತ್ತಲಿವೆ. ಆದ್ದರಿಂದ ದೇಶದ ಯಾವ ಮಹತ್ವದ ಕಾರ್ಯವೂ ಸುಸಂಘಟಿತವಾಗಿ ನಾಡಿನಲ್ಲಿ ನಡೆಯದಂತೆ ಆಗಿದೆ. ಇಷ್ಟೇ ಅಲ್ಲ, ಉತ್ತಮ ಜನರು ಹಳ್ಳಿಗಳಲ್ಲಿ ವಾಸಿಸುವದು ಸಹ ಕಷ್ಟವಿರುತ್ತದೆಂಬ ಅಭಿಪ್ರಾಯಪಡುತ್ತಲಿದ್ದಾರೆ. ಸುಶಿಕ್ಷಿತರೂ, ಶ್ರೀಮಂತರೂ, ಹಳ್ಳಿಗಳನ್ನು ಬಿಟ್ಟುಕೊಟ್ಟು ಪಟ್ಟಣವಾಸಿಗಳಾಗಹತ್ತಿರುವರು. ಇದಕ್ಕಿಂತಲೂ ದೇಶಕ್ಕೆ ಬರಬಹುದಾದ ಹೆಚ್ಚಿನ ದುರವಸ್ಥೆಯು ಯಾವದಿರುವದು ? ಯಾವ ನಮ್ಮ ಗ್ರಾಮಗಳಲ್ಲಿ ಮೊದಲು ಉತ್ತಮ ಕವಿಗಳೂ, ಕಲಾಕೋವಿದರೂ, ಧರ್ಮಸುಧಾರಕರೂ, ಸಾಧುಸತ್ಪುರುಷರೂ, ಹುಟ್ಟಿ ಹಿಂದೂಸ್ಥಾನದ ಕೀರ್ತಿಯನ್ನು ಬೆಳಗಿದರೋ ಅಂಥ ಗ್ರಾಮಗಳಲ್ಲಿ ಈ ಬಗೆಯ ಸ್ಥಿತಿಯಾಗುವದು ಎಷ್ಟು ಶೋಚನೀಯವು ? ಇದನ್ನು ನೀವೇ ವಿಚಾರಿಸಿರಿ. ವೀರಶೈವ ಜನಸಂಖ್ಯೆಯು ಗ್ರಾಮಗಳಲ್ಲಿಯೇ ಹೆಚ್ಚಾಗಿರುತ್ತದೆ. ಅವರು ಗ್ರಾಮವಾಸಿಗಳು. ಅವ್ವ

ಬಂದ ಹಳ್ಳಿಗಳ ಸುಧಾರಣೆಯನ್ನು ಕೈಕೊಳ್ಳುವ ಮಹತ್ವದ ಭಾರವು ಅವರ ಮೇಲೆಯೇ ಇರುತ್ತದೆ.

ಗ್ರಾಮಸುಧಾರಣಾ ಕಾರ್ಯಗಳನ್ನು ಈಚೆಗೆ ಅನೇಕರು ಕೈಕೊಳ್ಳ ಹತ್ತಿರುವದು ಸುಚಿನ್ಹವು. ನಮ್ಮ ಇಲಾಖೆಯಲ್ಲಿ ಹೋದ ಮೂರು ವರ್ಷಗಳಿಂದ ಈ ಬಗ್ಗೆ ಮಹತ್ವದ ಪರಿಷತ್ತುಗಳು ಕೂಡುತ್ತ ಬಂದಿವೆ ಮತ್ತು ಮುಂಬಯಿ ಪುಣೆ ಪಟ್ಟಣಗಳಲ್ಲಿ ಕೆಲವು ಮಹತ್ವದ ಸಮಾಜಸೇವಾ ಸಂಘಗಳೂ ಇರುತ್ತವೆ. ಅವುಗಳ ಅನುಕರಣವನ್ನು ನಾವು ಮಾಡಬೇಕು. ಗ್ರಾಮಗಳಲ್ಲಿ ನಾವು ಮಾಡಬಹುದಾದ ಕೆಲವು ಅವಶ್ಯಕ ಕಾರ್ಯಗಳನ್ನು ಅತಿ ಸಂಕ್ಷಿಪ್ತ ರೀತಿಯಿಂದ ಇಲ್ಲಿ ವಿವರಿಸುತ್ತೇನೆ.

### ಗ್ರಾಮ ಸುಧಾರಣಾ ಕಾರ್ಯಗಳು

(೧) ಪ್ರತಿಯೊಂದು ಗ್ರಾಮದಲ್ಲಿ ಉತ್ತಮರೀತಿಯಿಂದ ನಡೆದ ಶಾಲೆಯು ಇರತಕ್ಕದ್ದು. ಈ ಬಗ್ಗೆ ಯೋಗ್ಯ ಏರ್ಪಾಡು ಆಗತಕ್ಕದ್ದು. ಇದರಿಂದ ಶಿಕ್ಷಣಬೋರ್ಡುಗಳಿಗೂ ಬಹಳ ಸಹಾಯವಾಗುವದು. (೨) ಅದರಂತೆಯೇ ಉತ್ತಮ ರೀತಿಯಿಂದ ನಡೆದ ಸಹಕಾರೀ ಸಂಘವು ಇರತಕ್ಕದ್ದು. ಇದರಿಂದ ಹಳ್ಳಿಯು ನೈತಿಕ ಮತ್ತು ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಬಹುದು. (೩) ಉತ್ತಮ ರೀತಿಯಿಂದ ನಡೆದ ವಾಚನಮಂದಿರವೂ ಪುಸ್ತಕಾಲಯವೂ ಇರತಕ್ಕದ್ದು. ಯಾಕೆಂದರೆ ಸಾಂಪ್ರತಕಾಲದಲ್ಲಿ ದೇಶದಲ್ಲಿ ನಡೆದಿರುವ ಆಂದೋಲನಗಳನ್ನು ಒಕ್ಕಲಿಗರು ತಿಳಿಯುವದು ಅವಶ್ಯವು. (೪) ಶಾರೀರಿಕ ಶಿಕ್ಷಣ ಆಟನೋಟಗಳ ವ್ಯವಸ್ಥೆ ಇರಬೇಕು. ಚಿಕ್ಕ ವಿದ್ಯಾರ್ಥಿಗಳಲ್ಲಿ ಮತ್ತು ದೊಡ್ಡವರಲ್ಲಿ ಸೌಕಟ ಶಿಕ್ಷಣ ಮತ್ತು ಅನೇಕ ಬಗೆಯ ಪಂದ್ಯಾಟಗಳು ವ್ಯವಸ್ಥೆಯಿಂದ ನಡೆಯಬೇಕು. ಇಂಥವುಗಳ ಬಗ್ಗೆ ಒಕ್ಕಲಿಗರ ಪ್ರೀತಿಯು ಹೆಚ್ಚು ಇರುತ್ತದೆ. (೫) ಮುಂಬಯಿ ಇಲಾಖೆಯಲ್ಲಿ ಪಂಚಾಯತಿಯ ಹೊಸ ಕಾಯದೆಯು ಪಾಸಾಗಿದ್ದು ಅದನ್ನು ಸರಿಯಾಗಿ ಪ್ರಚಾರದಲ್ಲಿ ತರತಕ್ಕದ್ದು. (೬) ಧಾರ್ಮಿಕ ಶಿಕ್ಷಣದ ವ್ಯವಸ್ಥೆ ಇರತಕ್ಕದ್ದು. ವಿಶೇಷವಾಗಿ ವಚನಗ್ರಂಥಗಳನ್ನು 'ಓದುವ'

ಏರ್ಪಾಡು ಇರಬೇಕು. ಮಠದ ಅಯ್ಯನವರು ಈ ಕಾರ್ಯವನ್ನು ಮಾಡಿದರೆ ಬಹಳ ಉತ್ತಮವಾದದ್ದು. (೭) ಹಳ್ಳಿಗಳಲ್ಲಿ ಆರೋಗ್ಯ ರಕ್ಷಣೆಯ ಜ್ಞಾನವನ್ನು ಹೆಚ್ಚಿಸತಕ್ಕದ್ದು ಮತ್ತು ಔಷಧೋಪಚಾರದ ವ್ಯವಸ್ಥೆ ಇರತಕ್ಕದ್ದು. ಇಂಥ ಕಾರ್ಯಕ್ರಮವನ್ನು ಹಳ್ಳಿಗಳಲ್ಲಿ ನಾವು ಆದಷ್ಟು ತೀವ್ರ ಪ್ರಚಾರದಲ್ಲಿ ತರುವದು ಅತ್ಯಂತ ಅವಶ್ಯವಾಗಿರುತ್ತದೆ.

## ಸ್ವಯಂಸೇವಕರು

ಮೇಲ್ಕಂಡ ಕಾರ್ಯಗಳನ್ನು ಮಾಡಲಿಕ್ಕೆ ಪ್ರತಿಯೊಂದು ಗ್ರಾಮದಲ್ಲಿ ಸ್ವಯಂಸೇವಕರ ಸಂಘವು ಇರತಕ್ಕದ್ದು. ಇದು ಎಲ್ಲ ಗ್ರಾಮಗಳಲ್ಲಿ ಶಕ್ಯವಿರದಿದ್ದರೆ ಕೆಲವು ಗ್ರಾಮಗಳನ್ನು ಒಟ್ಟುಗೂಡಿಸಿ ಇಂಥ ಸಂಘಟನೆಯನ್ನು ಮಾಡಬೇಕು. ಆದರೆ ನಾನು ಮೇಲೆ ವಿವರಿಸಿದ ಕಾರ್ಯಗಳು ಹೆಚ್ಚಿನ ತರದವಿದ್ದು, ಅವುಗಳ ಬಗ್ಗೆ ಜ್ಞಾನವನ್ನು ಈ ಸ್ವಯಂಸೇವಕರು ಮೊದಲು ಮಾಡಿಕೊಳ್ಳಬೇಕು. ಹೀಗೆ ಶಿಕ್ಷಣ ಕೊಡತಕ್ಕ ವರ್ಗಗಳನ್ನು ನಾವು ಅಲ್ಲಲ್ಲಿ ಸ್ಥಾಪಿಸಬೇಕು ಮತ್ತು ಬೇರೆ ಪ್ರಾಂತಗಳಲ್ಲಿ ಉತ್ತಮ ರೀತಿಯಿಂದ ನಡೆದ ಸಮಾಜ ಸೇವಾಸಂಘಗಳಿಗೆ ಅವರನ್ನು ಕಳಿಸಿ ಅಲ್ಲಿ ಪ್ರತ್ಯಕ್ಷ ನಡೆದ ಕಾರ್ಯಗಳ ಜ್ಞಾನವನ್ನು ಮಾಡಿಕೊಳ್ಳಬೇಕು. ಈ ಬಗೆಯಾಗಿ ಸ್ವಯಂಸೇವಕರನ್ನು ಸಿದ್ಧಪಡಿಸಕ್ಕದ್ದು ವೀರಶೈವ ಸಮಾಜದಲ್ಲಿ ಮೊದಲು ಅನೇಕ ತರುಣಸಂಘಗಳು ಇದ್ದವು. ಆದರೆ ಅವುಗಳ ಚಾಲಕರಿಗೆ ಹ್ಯಾಗೆ ಕಾರ್ಯ ಮಾಡಬೇಕೆಂಬುದರ ಜ್ಞಾನವು ಮತ್ತು ಅನುಭವವು ಇರದ್ದರಿಂದ ಅವು ಅಲ್ಲಿಯೇ ಮುಗ್ಗಿ ಹೋದವು. ವೀರಶೈವ ಸಮಾಜದವರು ಅವುಗಳಲ್ಲಿ ತಕ್ಕ ಪುನರ್ಘಟನೆ ಮಾಡಿ ಸುವ್ಯವಸ್ಥಿತವಾಗಿ ಅವು ಗ್ರಾಮಸೇವಾ ಕಾರ್ಯಗಳನ್ನು ಕೈಕೊಳ್ಳುವಂತೆ ಮಾಡತಕ್ಕದ್ದು.

## ಜಮೀನುದಾರರು ಮತ್ತು ಸುಶಿಕ್ಷಿತರು ಗ್ರಾಮವಾಸಿಗಳಾಗುವ ಅವಶ್ಯಕತೆಯು

ಈಚೆಗೆ ಬಹು ಜನ ದೊಡ್ಡ ಜಮೀನದಾರರೂ ಶ್ರೀಮಂತರೂ ಹಳ್ಳಿಗಳನ್ನು ಬಿಟ್ಟುಕೊಟ್ಟು ಪಟ್ಟಣವಾಸಿಗಳಾಗಹತ್ತಿರುವರು. ಹೀಗೆ

ಮಾಡುವದು ದೇಶಕ್ಕೂ ಹಳ್ಳಿಗಳಿಗೂ ಬಹಳ ಅಹಿತಕರವಾಗಿದೆ. ಇವರು ಪಟ್ಟಣಗಳಲ್ಲಿ ಇರುವದರಿಂದ ಅವರ ಹಣದ ಉಪಯೋಗವು ಹಳ್ಳಿಗಳಿಗೆ ಆಗದೆ, ಅದೆಲ್ಲ ಪರದೇಶಕ್ಕೆ ಹೋಗಿ ಬಿಡುತ್ತದೆ. ಆದರಿಂದ ಹಳ್ಳಿಯವರಿಗೆ ಏನೂ ಉಪಯೋಗವಾಗುವದಿಲ್ಲ. ಇವರು ಹೀಗೆ ಮಾಡದೆ, ಹಳ್ಳಿಗಳಲ್ಲಿಯೇ ಇದ್ದು ಉತ್ತಮ ರೀತಿಯಿಂದ ಒಕ್ಕಲತನವನ್ನು ಸ್ವತಃ ಸಾಗಿಸಿದರೆ ಅವರಿಗೂ ತಮ್ಮ ಹಳ್ಳಿಗೂ ಹಿತವಾಗುವದು.

ಸುಶಿಕ್ಷಿತರಾದವರು ಸಹ ಹಳ್ಳಿಗಳಲ್ಲಿ ಇರುವದನ್ನು ಬಿಟ್ಟುಕೊಟ್ಟು ಪಟ್ಟಣಗಳಲ್ಲಿ ಇರಹತ್ತಿರುವರು. ಇದರಿಂದ ಅವರ ಜ್ಞಾನದ ಲಾಭವು ಹಳ್ಳಿಯವರಿಗೆ ಏನೂ ಆಗದಂತೆ ಆಗಿದೆ. ಹಾಗೆಯೇ ಕೈಗಾರಿಕೆಯವರೂ ಕಾರಖಾನೆಯವರೂ ಹಳ್ಳಿಗಳಲ್ಲಿಯೇ ಇದ್ದು ತಮ್ಮ ಉದ್ಯೋಗಗಳನ್ನು ಸಾಗಿಸಬೇಕು. ಇದರಿಂದ ಅವರ ಉದ್ಯೋಗಕ್ಕೆ ಖರ್ಚು ಕಡಿಮೆ ಹತ್ತುವದಲ್ಲದೆ ತಮ್ಮ ಸಮಾಜದ ಜನರನ್ನೂ ಕೆಲಸಕ್ಕೆ ಹಚ್ಚಿದಂತೆ ಆಗುವದು.

ಸಭ್ಯಗ್ರುಹಸ್ಥರೇ, ಈ ವಿಷಯವು ಅತ್ಯಂತ ಮಹತ್ವವಾದ್ದರಿಂದ ಇದನ್ನು ನಾನು ಬೇರೆ ವಿಷಯಗಳಿಗಿಂತ ಸ್ವಲ್ಪ ಹೆಚ್ಚಿಗೆ ವಿವರವಾಗಿ ವಿವರಿಸಿದ್ದೇನೆ. ಹಿಂದುಸ್ಥಾನ ದೇಶವು ಸ್ವರಾಜ್ಯಕ್ಕೆ ಅರ್ಹವಾಗುವಂತೆ ನಾವು ಪ್ರಯತ್ನಿಸಬೇಕಾಗಿದೆ. ಇದು ಹಳ್ಳಿಗಳನ್ನು ಸುಧಾರಿಸುವದರಿಂದಲೇ ಶಕ್ಯವು. ಆದ್ದರಿಂದ ಈ ಕಾರ್ಯವನ್ನು ನಮ್ಮ ಸಮಾಜದವರು ಆದಷ್ಟು ತೀವ್ರವಾಗಿ ಪ್ರಾರಂಭಿಸಬೇಕೆಂದು ನನ್ನ ಸೂಚನೆ ಇದೆ.

(೧೯೩೩ರಲ್ಲಿ ಧಾರವಾಡದಲ್ಲಿ ಜರುಗಿದ ಅಖಿಲಭಾರತ ವೀರಶೈವ ಮಹಾ ಸಭೆಯ ಅಧ್ಯಕ್ಷಸ್ಥಾನದಿಂದ ಮಾಡಿದ ಭಾಷಣದಿಂದ)

